ತಯಾರಾಗಿನಿ. ಮೊದ್ವೆ ಕಾರ್ಯ ನಡ್ಯಕೆ ಹಸ್ತಿನಾವತಿ ಸಿದ್ಧವಾಗಿರ್ಲಿ."

ಹಸ್ತಿನಾವತಿಂದ ಕಾಶಿಗೆ ಮೂರು ದಿನದ ದಾರಿ. ಒಂದೊಂದು ಪಟ್ಟಣಲಿನೂ ಸವಾರಿ ಮಾಡಿಕೇಂತ ಕುದುರೆಗಳ ಒದ್ಗಿಸುವ ಲಾಯದ ಅದಿಕಾರಿಂದ ಪಯಣ ಸಲೀಸಾತ್. ಒಂದ್ ದಿನದ ಸವಾರಿಗೆ ಕುದುರೆ ಒಂದಕ್ಕೆ ಐದ್ ಹೊನ್ನ್‌ನ ನಾಣ್ಯ ಕೊಟ್ಟರೆ ಸಾಕಾಗ್ತಿತ್. ಪಟ್ಟಣಲಿ ಚತ್ರ ಇರ್ದರ್‌ಂದ ಬೀಷ್ಮರಿಗೆ ಒಳ್ಕಂಬಕೆ ಕಸ್ಟ ಆತ್ಲೆ.

ಸುರುನ ಇರ್‌ಳ ಸಣ್ಣ ಪಟ್ಟಣ ಲೋಹಿತ ನಗರಿಲಿ ನಿತ್ತ್ ದಣಿವು ಆರ್‌ಸಿಕಂಡ್ ಹಸ್ತಿನಾವತಿ ತೇರ್‌ನ ಕುದ್ರೆಗಳ ಅಲ್ಲಿನ ಲಾಯದ ಎಜಮಾನನಕ್ಕಲೆ ಬುಟ್ಟ್‌ದ್, ಅಲ್ಲಿಂದ ಬೇರೆ ಕುದ್ರೆಗಳ ತೇರ್‌ಗೆ ಕಟ್ಟಿದ್ ಹೊರ್ಡಿಕನ ಸೂರ್ಯ ಮೂಡುವ ಹೊತ್ತಾಗಿತ್. ಅಂದ್‌ನ ದಿನ ಅಯೋದ್ಯೆಲಿ ಇರ್‌ಳ ಕಳ್ಯಕಾತ್. ಸೂರ್ಯವಂಶದ ಶ್ರೀ ರಾಮ, ಮಾನ ಮೊರ್ಯಾದೆಲಿ ದೊಡ್ಡ ಮೊಂಯಿಂಸ ಆಗಿ ಅಯೋಧ್ಯೆಗೆ ದೊಡ್ಡ ಹೆಸ್ರ್ ತಂದ್ ಕೊಟ್ಟಿತ್. ಅಂವ ಅಪ್ಪನ ಮಾತ್ನ ನಡ್ಸಿಕೆ ಬೇಕಾಗಿ ಕಾಡಿಗೆ ಹೋತ್. ಬೀಷ್ಮರ್ ತನ್ನನ ಅಂವನೊಟ್ಟಿಗೆ ಹೋಲಿಕೆ ಮಾಡಿಕೊಂಡೊ. ಚಂದ್ರ ವಂಸದೊವು ಏನ್ ಕಮ್ಮಿ? 'ನಾ ಅಪ್ಪಂಗಾಗಿ ಇಸ್ಟರ ಮುಟ್ಟ ಮೊದುವೆ ಆಗದೆ ಬೊದ್ಕಿತಿಲ್ಲೆನೋ? ಈಗ ತಮ್ಮಂಗಾಗಿ ಬ್ರಹ್ಮಚಾರಿ ಆದರೂ, ಸೊಂಯಂವರ ಮಂಟಮೆಗೆ ಹೋಗಿ ನನ್ನ ಸಕ್ತಿನ ತೋರ್ಸುದುಲ್ಲೆನೋ? ಹಾಂಗೆ ನೋಡ್ರೆ ಸೂರ್ಯವಂಸದ ರಾಮಚಂದ್ರಂದ ಚಂದ್ರವಂಸದ ಬೀಷ್ಮನ ತ್ಯಾಗನೇ ದೊಡ್ಡದ್. ಹಾಂಗೇಂತ ಚರಿತ್ರೆ ಗುರ್ತಮಾಡ್ತ್‌ಲ್ಲರೂ ಚಿಂತೆ ಇಲ್ಲೆ. ಈಗನ ಮಟ್ಟಿಗೆ ಚಂದ್ರ ವಂಸದೋವೇ ಮೇಲ್‌ಗೈನೊವು.

ಚಿಂತೆ ಇಲ್ಲದೆ ನಿದ್ದೆ ಮಾಡಿ ಮೊರ್ದಿನ ಚಿಮಿ ಚಿಮಿ ಬೊಳ್ಪುಗೆ ತೇರ್‌ಗೆ ಅಯೋದ್ಯೆನ ಕುದ್ರೆಗಳ ಕಟ್ಟಿದ್ ಬೀಷ್ಮರ್ ಕಾಶಿಗೆ ಪಯಣ ಮುಂದರ್ಸಿದೊ. ಅಲ್ಲಲ್ಲಿ ದಣ್ಕೆ ತೀರ್‌ಸಿಕಂಡ್, ಕಾಶೀ ರಾಜಕುಮಾರಿಗಳ ಸೊಂಯಂವರ ಮಂಟಮೆಗೆ ಮುಟ್ಟಿಕಾಕನ ಸೂರ್ಯ ಮುಣ್‌ಂಗಿಕೆ ಇನ್ನ್ ಹಂಞ ಹೊತ್ತ್ ಇತ್.

ಭೀಷ್ಮರ್ ಸೊಂಯಂವರ ಮಂಟಮೆಗೆ ಹೊಗಿಕಾಕನ ಅಲ್ಲಿನ ರೀತಿನೇ ಬದ್ಲಾಗಿ ಹೋತ್. ಮೊದುವೆ ಮಂಟಮೆಲಿ ಬ್ರಹ್ಮಚಾರಿಗೆ ಏನ್ ಕೆಲ್ಸ? ಎಲ್ಲೋವ್ರ ಮೋರೆಲಿ ಈ ಮಾತ್ ಎದ್ದ್ ಕಾಂಬತಿತ್. ಭೀಷ್ಮರ್ ಕಾಶೀರಾಜನ ನೋಡ್ದೊ. ಪ್ರತಾಪಸೇನ ಸಿಟ್ಟ್‌ಂದ ದುರುಗುಟ್ಟಿಕಂಡ್ ಅವರ್ನೇ ನೋಡ್ತಿತ್. ಅಂವನ ಹಕ್ಕಲೆ ಸರೀರ ಇಡೀ ಸಿಂಗಾರ ಮಾಡಿಕಂಡ್ ಅಂವನ ಮೂರ್ಜನ ಮಗಕ್ಕ ನಿತ್ತಿದ್ದೊ. ಬಲಶಾಲಿ ಆದ ಒಬ್ಬ ಈರ ಪುರ್ಸ ಖಡ್ಗ ಹಿಡ್ಕಂಡ್ ನಿತ್ತಿತ್. ಅಂವನ ಮೋರೆಲಿ ದಣ್ಕೆ ಇತ್. ಆಗ ತಾನೆ ಅಂವ ಯಾರನ್ನೋ ಯುದ್ಧ ಮಾಡಿ ಗೆದ್ದಿರೊಕು. ಅಂವ ಪಂತನ ಗೆದ್ದುಟೋ ಹೇಂಗೆ? ಈ ಮೂರ್‌ಜನ ಗೂಡೆಗಳ ಗಂಡ ಆಗುವ ಯೋಗ್ಯತೆನ ಅಂವ ಪಡ್ಕಂಡಿರ್ದೋ? ಯಾರ್‍ನೂ ಮಾತಾಡ್ತಿತ್ಲೆ. ಮಸಣಲಿ ಇದ್ದಹಾಂಗೆ ಮೌನಲಿ ಇದ್ದೊ. ಯಾರ ಕೇಳ್ದು? ಇಷ್ಟರ ಮುಟ್ಟಕ್ಕೆ ಅಂವ ಯಾರ್?

ಹೊತ್ತು ಸುಮ್ಮಂಗೆ ಕಳ್ದ್ ಹೋದರ ಗಮನಕ್ಕೆ ತಂದ್ ಭೀಷ್ಮರ್ ಎತ್ತರ್‌ದ ದನಿಲಿ

ಹೇಳ್ದೊ. "ನಾ ಆಚಾರ್ಯ ಬೀಷ್ಮ. ಹಸ್ತನಾವತಿನ ಸಿಂಹಾಸನದ ಪರ ಇಲ್ಲಿಗೆ ಬಂದಂವ. ಈ ಅರ್ರು ಗೂಡೆಗಳ ನಾ ಹಸ್ತಿನಾವತಿಗೆ ಕರ್‍ರೊಂಡೋನೆ. ತಾಕತ್ತಿದ್ದೋವು ಬಂದ್ ಬುಡ್ಸಿಕಣಿ. ಕಾಶೀ ರಾಜಕುಮಾರಿಗಳೇ, ನನ್ನ ರಥನ ಹತ್ತಿನಿ"

ಮಾತ್ ಮುಗ್ಯಕೆ ಮುಂದೆನೇ ಕೈಲಿ ಖಡ್ಗನ ಹಿಡ್ದ ಆ ಈರ ಪುರ್ಸ ಮುಂದೆ ಬಾತ್.

"ನಾ ಸೌಬ ದೇಸದ ದೊರೆ ಸಾಲ್ವ ಭೂಪತಿ. ಇಲ್ಲಿದ್ದವರ್‍ನೆಲ್ಲಾ ಗೆದ್ದಂವ. ಪಂತನ ಗೆದ್ ಅರ್ರು ಗೂಡೆಗಳ ಗಂಡ ಆಗುವ ಯೋಗ್ಯತೆನ ಪಡ್ದಂವ. ನನ್ನ ಸೋಲ್ಸದೆ ನಿಂಗೆ ಇವರ ರಥ ಹತ್ತುಸುವ ಯೋಗ್ಯತೆ ಇಲ್ಲೆ"

ಆ ನಿಮ್ಸಲಿ ಭೀಷ್ಮಂಗೆ ಸಾಲ್ವ ಭೂಪತಿ ಮಾತ್‌ಗ ಇಸ್ಟ ಆದೊ. ಈ ಮೂರ್ಕ ಪ್ರತಾಪಸೇನ ಕಾಡ್ ಮೊಂಯಿಂಸ ಎಂಬ ಕಾರ್ಣಕ್ಕೆ ಮೊದ್ವೆ ಕಾಗ್ದ ಕಳ್ಸದೆ ಅಪಮಾನ ಮಾಡ್ದ ಸಾಲ್ವ ಭೂಪತಿ ಈಗ ಪಂತಲಿ ಗೆದ್ದುಟ್ಟು. ಈಗ ಹಸ್ತಿನಾವತಿನ ಪರ ನಾ ಬಂದಳೆ. ಪ್ರತಾಪಸೇನನ ಏಚನೆ ಮಾಡ್ದೇ ಒಂದು. ಇಲ್ಲಿ ನಡ್ದದೇ ಬೇರೆ. ಪ್ರತಾಪಸೇನನ ಮೋರೆ ಇಂಗ್ ತಿಂದ ಮಂಗನ ಹಾಂಗೆ ಇತ್.

ಸಾಲ್ವ ಭೂಪತಿ ಎಲ್ಲಾ ರಾಜರಲ್ಲಿ ಒಬ್ಬ ದೊಡ್ಡ ಸಕ್ತಿವೊಂತ. ಆದರೆನೂ ಅಂವನ ಸೋಲ್ಸಿಕೆ ಭೀಷ್ಮರಿಗೆ ಹೆಚ್ಚ್ ಸಮಯ ಬೇಕಾತ್ಲೆ. ಸಾಲ್ವಭೂಪತಿ ಸೋತ್‌ದ್ ತಲೆ ಬೊಗ್ಗಿಸಿ ನಿತ್ತತ್. ಅಂವನ ಯೋಜನೆಗಳ ಅಡಿ ಮೇಲ್ ಮೂಡಕೂಂತ ಬೀಷ್ಮಂಗೆ ಇತ್ಲೆ. ಸಂದರ್ಭ ಹಾಂಗೆ ಕೂಡಿ ಬಾತ್. ಅಂವನ ಮೇಲೆ ಬೇಜಾರಾದರೂ ಅವು ಏನ್ ಸಾ ಮಾಡುವಾಂಗಿತ್ಲೆ. ಸಾಲ್ವ ಭೂಪತಿ ಒಮ್ಮೆ ದುಕ್ಕಂದ ರಾಜ ಕುಮಾರಿಗಳ ನೋಡ್ತ್. ಅವು ಭೀಷ್ಮರ ರಥ ಹತ್ತುದರ ಕಂಡ್ ಸಿಟ್ಟ್‌ಲಿ ಕಾಲ್ನ ನೆಲಕ್ಕೆ ಬೊಡ್ಡ್, ಸೊಂಯಂವರ ಮಂಟಮೆಂದ ಹೊರಗೆ ಹೋತ್.

ಪ್ರತಾಪಸೇನನ ಮೋರೆ ಬಾಡ್ದ ಬಾಳೆಲೆ ಹಾಂಗೆ ಇತ್ತ್. ಬೀಷ್ಮರ್ ಅಂವನ ಹಕ್ಕಲೆ ಹೋಗಿ ಅಂವನ ರೇಗಿಸಿದೊ. "ಕಾಶೀಮಾರಾಜಂಗೆ ಕುರು ಚಕ್ರಾದಿಪತ್ಯದ ನೆಂಪಾತ್ಲೆನೋ? ನಿನ್ನ ಮಗಕ್ಕ ಹಸ್ತಿನಾವತಿನ ಸೊಸೆಕ್ಕ ಆದೊ. ಹಸ್ತಿನಾವತಿನ ನೀ ಇನ್ ಕನ್ಸ್‌ಲಿನೂ ಮರ್‍ರೈಕೆ ಆಕಿಲ್ಲೆ".

ಪ್ರತಾಪಸೇನ ಮಾತ್‌ಲಿ ಬುಟ್ಟ್ ಕೊಟ್ಟತ್ಲೆ. "ಆಚಾರ್ಯರ್ ಯಾವುದೇ ಸೊಂಯಂವರಕ್ಕೆ ಹೋಗೋವು ಅಲ್ಲಾಂತ ಜನ ಹೇಳಿವೆ. ಆಚಾರ್ಯರೇ ನನ್ನ ಅಳಿಯ ಆದು ಕಾಶಿನ ಸೌಬಾಗ್ಯ."

ಭೀಷ್ಮರ್ ಹಂಞ ಹೊತ್ತ್ ಏಚನೆ ಮಾಡ್ದೊ. ವಿಚಿತ್ರವೀರ್ಯಂಗಾಗಿ ರಾಜಕುಮಾರಿಗಳ ಕರ್‍ರೊಂಡೋನೇಂತ ಹೇಳಿ ಬುಡಲಿನೋ? ಬೇಡ. ಹೇಳಿರೆ ದರ್ಮ ಸೂಕ್ಷ್ಮದ ಪ್ರಶ್ನೆಗಳ ಕೇಳದೆ ಇಂವ ಇರಿಕಿಲ್ಲೆ. ಸೊಂಯಂವರ ಮಂಟಮೆಲಿ ಅಲ್ಲಲ್ಲಿ ಪುರೋಹಿತರ್‌ಗ ಕಂಡವೆ. ಕಾಶಿರಾಜನ ಮಾತ್‌ಗೆ ಯಾವ ಉತ್ತರನ ಕೊಟ್ಟರೂ ಇವು ವಾದ ಮಾಡಿವೆ. ವಾದ ಬೆಳ್ದರೆ ಹೀಂಗೇ ಆದೂಂತ ಹೇಳಿಕೆ ಆಕಿಲ್ಲೆ. ಆ ಸಾಸ್ತ್ರ ಹಾಂಗೆ ಹೇಳ್ದೆ. ಈ ಸಾಸ್ತ್ರ ಹೀಂಗೆ ಹೇಳ್ದೇಂತ ಯಾವ ಯಾವುದೋ ಸಾಸ್ತ್ರಗಳ ಹೆಸ್ರೇಳಿ ನಮ್ಮ ಬಾಯ್ ಬಂದ್

ಮಾಡುವೊ. ಹಸ್ತಿನಾವತಿನ ಪುರೋಹಿತರ್‌ನೇ ದೊಡ್ಡ ತಲೆಬೇನೆ ತಂದ್ ಹಾಕೋವು. ಇದ್ ಹೇಳಿ ಕೇಳಿ ಬೇರೆ ದೇಸ. ಹಸ್ತಿನಾವತಿನ ನಡೋಳ್ಕೆ ನ್ಯಾಯಕ್ಕೆ ಹಕ್ಕಲೆ ಇದ್ದರೂ, ಕಾಶಿನ ಪುರೋಹಿತರ್‌ಗ ಅದರ ಪರ ವಾದ ಮಾಡಿಕೆ ಸಾದ್ಯ ಇಲ್ಲೆ, ಬೇಡ. ಈ ತಲೆ ಬೇನೆನೇ ಬೇಡ.

ಅಸ್ಟೊತ್ತಿಗೆ ಕಾಶೀರಾಜನ ಕೆಲ್ಸದಾಳ್‌ಗ ರಾಜಮಗಕ್ಕಳ ಮೂರು ಪೆಟ್ಟಿಗೆಗಳ ತಂದ್‌ದ್ ರಥಲಿ ಜೋಡ್ಸಿಸಿದೊ. ರಥಹೊರ್ಡಿಕೆ ಮುಂದೆ ಭೀಷ್ಮರ್ ಹೇಳ್ದೊ,"ಪ್ರತಾಪಸೇನ ಮಹಾರಾಜಾ, ನಿನ್ನ ಮಗಕ್ಕ ಹಸ್ತಿನಾವತಿನ ರಾಣಿಯರಾದವೆ. ನೀ ಹಸ್ತಿನಾವತಿಗೆ ಹೆಣ್ಣ್ ಕೊಟ್ಟ ಮಾಂವ ಆದಿಯ. ಮಹಾರಾಣಿನ ಕರ್ಕಂಡ್ ಯಾಗ ಬೇಕಾದರೂ ಬಂದ್ ನಿನ್ನ ಮಗಕ್ಕಳ, ಅಳ್ಯನ ನೋಡಿಕಂಡ್ ಹೋಕ್. ಆದರೆ ಈ ನಿಮ್ಸಂದ ನಿನ್ನ ಕಾಶಿರಾಜ್ಯ ಕುರು ಸಾಮ್ರಾಜ್ಯಕ್ಕೆ ಸೇರಿ ಹೋಗುಟು ಎಂಬುದರ ನೀ ಮರ್‍ಯಬಡ."

ಕಾಶಿರಾಜ ಅಂವನಸ್ಟಕ್ಕೆ ಏನೋ ಮಾತಾಡ್ ಕಂಡತ್. ಅದ್ ಮಾತ್ರ ಭೀಷ್ಮರಿಗೆ ಗೊತ್ತಾತ್ಲೆ. ರಥ ಹಸ್ತಿನಾವತಿ ಕಡೆ ಹೊರ್ಟತ್.

*****

## ಹೋಳು – ೦೩

# ಸಕ್ತಿಲಿ ಗೆದ್ದಂವನ ಮೊದೋಳ್ತಿಗ

ಕಾಶಿ ಮತ್ತೆ ಅಯೋಧ್ಯೆನ ನೊಡುಲಿ ಇರುವ ಸಣ್ಣ ಪಟ್ಟಣ ರಜತನಗರಿ ಚತ್ರಲಿ ಇರ್‍ಕ್ಯ ನಿಲ್ಲಿಕಾಕನ ರಾಜಕುಮಾರಿಗಳಿಗೆ ಬೇರೆನೇ ಒಂದು ಕೋಣೆ ಸಿಕ್ಕುವ ಹಾಂಗೆ ಭೀಷ್ಮರ್ ಏರ್ಪಾಡ್ ಮಾಡ್ಡೊ. ಮೊರ್‍ದಿನ ಅಯೋಧ್ಯೆಲಿ ನಿಲ್ಲಿಕಾತ್. ರಥಕೆ ಕಟ್ಟಿದ ಕುದುರೆಗಳ ಅಲ್ಲಿ ಬದಲ್ಸಿದೊ. ಅಯೋಧ್ಯೆಂದ ಮೊರ್‍ದಿನ ಹೊರ್‍ಟ್‍ದ್ ಲೋಹಿತನಗರಿ ಎಂಬ ಪಟ್ಟಣಲಿ ಆ ದಿನ ನಿಂತೊ. ಅಲ್ಲಿನ ಲಾಯಾಧಿಕಾರಿನ ಕುದ್ರೆಗಳ ಅಂವಂಗೇ ಕೊಟ್ಟ್‌ದ್, ಅಂವನಕ್ಕಲೆ ಇದ್ದ ಹಸ್ತಿನಾವತಿನ ಕುದ್ರೆಗಳ ರಥಕ್ಕೆ ಹೂಡಿ, ನಾಕ್‌ನೇ ದಿನ ಅವು ಹಸ್ತಿನಾವತಿಗೆ ಮುಟ್ಟಿದೊ. ಈಗ ಅವ್ಕೆ ಮೊನ್ಸ್‌ಗೆ ಸಮದಾನ ಆತ್.

ಕಾಶಿಂದ ಹಸ್ತಿನಾವತಿಯವರೆಗೆ ದೂರದ ಮಾರ್ಗದ ಉದ್ದಾಕೆ, ರಾಜಕುಮಾರಿಗ ಅವರವರೊಳಗೆ ಮೆಲ್ಲಂಗೆ ಕೆಬಿಂದ ಕೆಬಿಗೆ ಕೇಳುವಾಂಗೆ ಮಾತಾಡಿಕಂಬತಿದ್ದೊ. ಭೀಷ್ಮರೊಟ್ಟಿಗೆ ಮಾತಾಡುವಸ್ಟ್ ಅವ್ಕೆ ಸಲ್ಗೆ ಇತ್ಲೆ. ಭೀಷ್ಮರ್ ಕೂಡಾ, ಉಪಚಾರಕ್ಕಾಗಿ ಒಂದೆರ್‍ಡ್ ಮಾತ್‌ನ ಮಾತ್ರ ಮಾತಾಡ್ತಿದ್ದೊ. ರಥನ ಅವೇ ಓಡ್ಸ್‌ತಿದ್ದದರ್‌ಂದ ಅವ್ಕೆ ಮಾತಾಡಿಕೆ ಪುರುಸೊತ್ತೇ ಸಿಕ್‌ತಿತ್ಲೆ. ರಾಜಕುಮಾರಿಗಳ ಮೊನ್ಸ್‌ಲಿ ಏನ್ ಇತ್ತ್‌ಂತ ತಿಳ್ಕಂಬ ಅಗತ್ಯನೂ ಅವ್ಕೆ ಇತ್ಲೆ. ತನ್ನದ್ ಏನ್ ಕೆಲ್ಸ ಇದ್ದರೂ ಸಾ ರಾಜಮಾತೆನ ಅಪ್ಪಣೆ ಹಾಂಗೆ ನಡ್ಯೋದು. ಅದ್ ಯಾವ ಅಡೆ ತಡೆ ಇಲ್ಲದೆ ನಡ್ದರೆ ಸಾಕಾಗಿತ್ತ್.

ಹಸ್ತಿನಾವತಿನ ಬುಟ್ಟ್ ಹೋದಲ್ಲಿಂದ ತಿರ್‍ಗ ಹಸ್ತಿನಾವತಿಗೆ ಬಂದ್ ಮುಟ್ಟಿಕಾಕನ ಒಂದು ವಾರ ಬೇಕಾತ್. ಕಾಶಿರಾಜ್ಯ ಕುರು ಸಾಮ್ರಾಜ್ಯದ ಒಂದು ಬಾಗ ಆಗಿಬುಟ್ಟರೆ ಅದರ ಆಳುದು ಸುಲ್ಬದ ಮಾತಲ್ಲಾಂತ ಭೀಷ್ಮರಿಗೆ ಈಗ ಗೊತ್ತಾತ್. ಸರೀರಕ್ಕೆ ದಣ್ಕೆ ಇದ್ದರೂ ಅವ್ರ ಮೊನ್ಸ್‌ಗೆ ಬಾಳ ಕುಸಿ ಆಗಿತ್ತ್. ರಾಜಮಾತೆನ ಆಜ್ಞೆನಾಂಗೆ ಗೆದ್ದ್ ರಾಜಕುಮಾರಿಗಳ ಕರ್‍ಕಂಡ್ ಬಂದೇಂತ ಅವ್ಕೆ ಹುಮ್ಮಸ್ ಆತ್. ರಾಜಮಾತೇನೇ ಬಂದ್‌ದ್ ಕೊಂಬು ಓಲಗಲಿ ರಾಜಕುಮಾರಿಗಳ ಪ್ರೀತಿಂದ ಬರಮಾಡಿಕೊಂಡೊ. ಪಟ್ಟದ ಆನೆಂದ ಮಂದಾರ ಹೂಮಾಲೆನ ಹಾಕ್ಸಿ, ಆರತಿ ಬೆಳ್ಗಿ ಸಂಬ್ರಮಂದ ಒಳಗೆ ಕರ್‍ಕೊಂಡೊ. ಬಂದೊವ್ಕಾಗಿ ಇರುವ ವೈಬೋಗದ ಅತಿಥಿ ಮನೆಲಿ ಅವು ನಿಲ್ಲಿಕೆ ಏರ್ಪಾಡ್ ಮಾಡ್ಡೊ. ಸತ್ಯವತಿದೇವಿಯೊವ್ಕೆ ಬಾಳ ಕುಸಿ ಆಗಿತ್ತ್. ಅವರ ಮಂಜ ವಿಚಿತ್ರವೀರ್ಯಂಗೆ ಮೈಕೈ ತುಂಬಿಕಂಡ್, ನೋಡಿಕೂ ದೇವಲೋಕದ ಅಪ್ಸರೆ ಹಾಂಗಿದ್ದ ಮೂರು ಜನ ಕನ್ನೆಗ ಮೊದ್ವೆ ಆಕೆ ಸಿಕ್ಕಿಯೊಳೋಂತ ಅವು ಸಂತೋಸ ಪಟ್ಟೊ. ಅದರೊಟ್ಟಿಗೆ ಹಸ್ತಿನಾವತಿನ ಕಡೆಗಣಿಸಿರೆ ಏನಾದೇಂತ ಎಲ್ಲಾ ದೇಸದ ರಾಜರ್

ತಿಳಿವಾಂಗೆ ಆದದಕ್ಕೆ ಹೆಮ್ಮೆ ಪಟ್ಟೊ.

ಮೊರ್ದಿನ ರಾಜಮಾತೆ ಸತ್ಯವತಿಯೊವು ಭೀಷ್ಮಂಗೆ ಹೇಳಿ ಕಳ್ಸಿದೊ. ವಿಚಿತ್ರವೀರ್ಯನ ಮೊದ್ವೆ ಕಾರ್ಯನ ನಾಳೆ ಮಾಡ್ನೇಂತ ನಿಚ್ಚಯ ಮಾಡ್ಯಳೇಂತ ತಿಳ್ಸಿದೊ. ವಿಚಿತ್ರವೀರ್ಯ ಗಂಬೀರಲಿ ಕುದ್ದ್ ಎಲ್ಲದರನೂ ಕೇಳ್ಸಿಕಂಡಿತ್ತ್. ಅಸ್ಟಾಕನ ಕಾಶೀರಾಜನ ಗೂಡೆಗ ರಾಜಮಾತೆನ ಅಪ್ಪಣೆನ ಹಾಂಗೆ ಅಲ್ಲಿಗೆ ಬಂದೊವು ಅತ್ತೆಯೊವ್ಕೆ ನಮಸ್ಕಾರ ಮಾಡಿ ಅವು ತೋರ್ಸಿದ ಆಸನಲಿ ಕುದ್ದೊ. ರಾಜಮಾತೆ ಅವು ಕುದ್ದಲ್ಲಿಗೆ ಹೋಗಿ ಪ್ರೀತಿಂದ ಅವರ ತಲೆಪೂಜಿ, ಮಾತಾಡ್ಸಿ, ಅವರ ಯೋಗಕ್ಷೇಮ ಇಚಾರ್ಸಿದೊ. ಆ ಮೇಲೆ ಅವ್ಕೆ ಅವರ ಅಲ್ಲಿಗೆ ಬಾಕೆ ಮಾಡ್ದರ ಕಾರ್ಣ ತಿಳ್ಸಿದೊ.

"ಕಾಶೀ ರಾಜಕುಮಾರಿಗ ಆದ ನಿಮ್ಮ ಮೂರು ಜನನ ಹಸ್ತಿನಾವತಿನ ಸೊಸೆಕ್ಕಳ ಆಗಿ ಮಾಡಿಕಂಬಕೆ ರಾಜಮಾತೆ ಆಗಿ ನಾ ಬಾಳ ಕುಸಿಪಟ್ಟನೆ. ಹಸ್ತಿನಾವತಿನ ಸಿಂಹಾಸನದ ದೊರೆ ಆದ ವಿಚಿತ್ರವೀರ್ಯನ ಮಕ್ಕಳ ಅವ್ವಕ ಆಗಿ ನೀವು ಚಂದ್ರವಂಸನ ಬೆಳ್ಗುಸೊಕು. ನಿಮ್ಮ ನಾ ನನ್ನ ಮಕ್ಕಾಂತಳೇ ನೆನ್ಸಿನೆ. ಆಚಾರ್ಯ ಭೀಷ್ಮರ್ ನೀವ್ಗೆ ಗುರುಗಳಾಂಗೆ. ನಾಳೆ ದಿನ ಒಳ್ಳೆ ದಿನ. ಅದ್ಕಾಗಿ ಮೊದ್ವೆ ಮೂರ್ತನ ನಾಳೆಗೆ ಇಸಿಕೊಂಡೊಳೊ. ನೀವ್ಗೇನಾದರ್ ಹೇಳಕೂಂತ ಇದ್ದರೆ ದಾರಾಳಲಿ ನಿಮ್ಮ ಮೊನ್ಸ್‌ಲಿ ಇದ್ದದರ ಹೇಳಿನಿ. ಎನೂ ಹೇಳಿಕೆ ಇತ್ಲರೆ ದಾಸಿ ಜನಗ ನಿಮ್ಮ ತಿರ್ಗ ಅತಿಥಿ ಮನೆಗೆ ಕರ್ರೊಂಡೋದವೆ. ನೀವ್ಗೆ ಬೇಕಾದ ಎಲ್ಲಾ ಬಟ್ಟೆ ಬರೆ, ಚಿನ್ನ, ಚಿಗ್ರ್‌ನ ಆಗಳೇ ಅತಿಥಿ ಮನೆಗೆ ಕಳ್ಸಿ ಆಗುಟ್ಟು. ಹಸ್ತಿನಾವತಿನ ಕಾಶಿಂತಳೇ ತಿಳ್ಕಣಿ."

ಕಾಶೀ ರಾಜಕುಮಾರಿಗ ಸುರೂನ ಸಲ ವಿಚಿತ್ರವೀರ್ಯನ ತಲೆಂದ ಕಾಲ್ ಮುಟ್ಟೆ ನೋಡ್ದೊ. ಅವರ ಮೋರೆನ ಬಣ್ಣ ಬದ್ಲಾತ್. ಚಪ್ಪೆ ಮೋರೆಲಿ ಬೇನೆ ಎದ್ದ್ ಕಾಂಬತಿತ್ತ್. ಅವು ಮೂರು ಜನರ್ಲಿ ಭಾರೀ ಪೊರ್ಲು ಕಾಂಬತಿದ್ದ ಗೂಡೆ ಎದ್ದ್ ನಿತ್ತ್ ಹೇಳ್ತ್, "ನಾ ಅಂಬೆ, ಕಾಶೀ ರಾಜನ ದೊಡ್ಡಮಗ. ನನ್ನ ತಂಗೆಕಳ ಮೊನ್ಸ್ ಏನ್‌ಂತ ನಂಗೆ ಗೊತ್ಲೆ. ನನ್ನ ಮೊನ್ಸ್‌ಗೆ ತಿಳ್ದದರ ನಾ ಹೇಳ್ನೆ. ಇದರ ನೀವು ಹಂಕಾರಂತ ತಿಳ್ಯಕಾಗದ್."

"ಇಲ್ಲೆ, ಇಲ್ಲೆ ನಾವು ಹಾಂಗೆ ತಿಳ್ಯೋದಿಲ್ಲೆ. ನೀ ಹೇಳ್ ಮಗಾ"– ರಾಜಮಾತೆ ಧೈರ್ಯ ಕೊಟ್ಟತ್.

ಅಂಬೆ ಮುಂದರ್ಸಿತ್, "ಕಾಶೀ ರಾಜಕುಮಾರಿಗಳ ಸೊಂಯಂವರಕ್ಕೆ ಸಕ್ತಿನೇ ಪಂತ ಆಗಿತ್ತ್. ಪಂತಲಿ ಗೆದ್ದಂವ ಸಾಲ್ವಭೂಪತಿ. ಅಂವನ ಸೋಲ್ಸಿ ಆಚಾರ್ಯರ್ ನಮ್ಮ ಇಲ್ಲಿಗೆ ಕರ್ಕಂಡ್ ಬಂದೊಳೊ. ಹಸ್ತಿನಾವತಿನ ರಥ ಹತ್ತಿಕಾಕನ ಆಚಾರ್ಯರೇ ನನ್ನ ಗಂಡ ಆಗಂವಾಂತ ನಾ ತಿಳ್ಕಂಡಿದ್ದೆ. ಈಗ ನೀವು ವಿಚಿತ್ರವೀರ್ಯನ ಮೊದುವೆ ಆಕೆ ಹೇಳಿರೆ, ಪಂತಲಿ ಗೆದ್ದಂವನ ನಾವು ಮೊದ್ವೆ ಆಕಲ್ಲದೆ, ನೀವು ತೋರ್ಸಿದವರ ಅಲ್ಲ. ವಿಚಿತ್ರವೀರ್ಯನ ನಾವು ಮೊದುವೆ ಆದು ಸೊಂಯಂವರ ಪಂತಕ್ಕೆ ಇರೋದ. ಆದರ್‌ಂದ ಅದ್ ಧರ್ಮ ಅಲ್ಲ."

ಅಂಬೆನ ಮಾತ್‌ನ ಜಾಣ್ಮೆ ಮತ್ತೆ ಧೈರ್ಯನ ಭೀಷ್ಮರ್ ಮೆಚ್ಚಿದೊ. ಅದರ ತೂಕದ

ಮಾತ್‌ಗಳ್ಗೆ, ಧರ್ಮ ಸೂಕ್ಷ್ಮದ ಮಾತ್‌ನ ಹೇಳ್ದಕ್ಕೆ ರಾಜಮಾತೆ ತಲೆದೂಂಗಿತ್. ಇದ್‌ರ ಬುದ್ಧಿವಂತಿಕೆಂದ ಪರಿಹಾರ ಮಾಡಕೂಂತ ಭೀಷ್ಮರ್ ಹೇಳ್ದೊ :

"ಅವ್ವ ಅಂಬೇ, ನೀ ನಿನ್ನ ಮೊನ್ಸ್‌ಲಿ ಇದ್ದದರ ಇದ್ದಹಾಂಗೇ ಹೇಳ್ದ್ ನಿನ್ನ ಒಳ್ಳೆತನನ ತೋರ್ಸಿದೆ. ನಾ ನಿಮ್ಮ ಗೆದ್ದ್ ತಂದದ್ ನಿಜ. ಆದರೆ ನಾ ನಿಮ್ಮ ಮೊದುವೆ ಆನೇಂತ ಹೇಳ್ದರ ನೀ ಎಲ್ಯಾದರ್ ಕೇಳ್ಯಳನೋ? ಕಾಶೀರಾಜನಲ್ಲಿ ನಾ ನಿನ್ನ ಮಗಕ್ಕ ಹಸ್ತಿನಾವತಿನ ರಾಣಿಗ ಆದವೇಂತ ಹೇಳ್ಯಳ್. ಭೀಷ್ಮನ ರಾಣಿ ಆದವೇಂತ ಹೇಳ್ತಿಲ್ಲೆ. ಹಸ್ತಿನಾವತಿನ ಸಿಂಹಾಸನದ ರಕ್ಷಣೆ ಮಾಡಿಕೆ ಬೇಕಾಗಿ ಜೂವಮಾನ ಇಡೀ ಮೊದುವೆ ಆದುಲ್ಲೇಂತ ನಾ ಸಪತ ಮಾಡ್ಯಳೆ. ನಾ ವಿಚಿತ್ರವೀರ್ಯಂಗಾಗಿ ನಿಮ್ಮ ಗೆದ್ದ್ ತರೋಕೂಂತ ಆಜ್ಞೆ ಮಾಡ್ದೋವು ಸತ್ಯವತಿ ಅವ್ವನೊವು. ಸಿಂಹಾಸನನ ಒಳ್ಸಿಕಂಬಕ್ಕಾಗಿ ನಾ ಅವ್ವನ ಆಜ್ಞೆನ ಒಪ್ಪಿಕಂಡೆ. ನಾ ಮೊದುವೆ ಆಕೇ ಕಂಡಿತಾ ಒಪ್ಪುದುಲ್ಲೆ. ಆಗದ, ಹೋಗದ ಒಣ ಚರ್ಚೆ ಏಕೆ ಮಾಡ್ದು? ವಿಚಿತ್ರವೀರ್ಯನ ಪಟ್ಟದ ರಾಣಿ ಆಗಿ ಮುಂದೆ ರಾಜಮಾತೆ ಆಗ್."

ಅಂಬೆ ಅಂವನನೇ ದಿಟ್ಟಿಸಿ ನೋಡ್ತ್ "ಆಚಾರ್ಯರೇ, ನೀವುಗೆ ನಿಮ್ಮ ದೀಕ್ಷೆ ಮುಕ್ಯ ಆದರೆ, ಕ್ಷತ್ರಿಯ ಹೆಣ್ಣ್ ಆಗಿ ನಂಗೆ ನನ್ನ ಅಪ್ಪನ ಪಂತ ಮುಕ್ಯ. ಈಗ ನೀವು ನಮ್ಮ ವಿಚಿತ್ರವೀರ್ಯನ ರಾಣಿ ಆಗ್‌ಂತ ಹೇಳ್ರೆ. ಶೌರ್ಯನೇ ಪಂತ ಆಗಿದ್ದ ಸೊಂಯಂವರ ಅದ್. ಅಲ್ಲಿ ವಿಚಿತ್ರವೀರ್ಯನ ಸಕ್ತಿನ ಪರೀಕ್ಷೆ ಆತ್ಲೆ. ನಿಮ್ಮ ಸಕ್ತಿನ ಪರೀಕ್ಷೆ ಆತ್. ನೀವು ಪಂತಲಿ ಗೆದ್ದದಕ್ಕೆ ನಾವು ನೀವ್ಗೆ ಸಿಕ್ಕಿದೊ. ಸಕ್ತಿಗಾಗಿ ಸಿಕ್ಕಿದ ಹೆಣ್ಣ್‌ಗಳ ಬೇರೋವ್ಕೆ ಯಾವ ಗಂಡ್ ಕೊಟ್ಟದೆ? ನಮ್ಮ ನೀವು ಕೆಲ್ಸದವರಾಂಗೆ ನಡ್ಸಿಕಂಬಡಿ. ನಾವು ಹೃದಯ ಇದ್ದ ಮೊಂಯಿಂಸರ್. ನೀವು ಜೂವಲಿ ಇರಿಕನ ಮುಟ್ಟ ಮೊದುವೆ ಆಗದೆ ಇರೋವಾದರೆ ಸೊಂಯಂವರ ಮಂಟಪಮೆಗೆ ಬಂದದೇ ತೊಪ್ಪು. ಅಪ್ಪ ಹಾಂಗೆ ಪಂತ ಕಟ್ಟದೆ ಇರ್ತಿದ್ದರೂ, ನನ್ನ ಗಂಡ ಆಗೋಂವ ಬಾಳ ಸಕ್ತಿವೊಂತ ಆಗಿರೋಕೂಂತ ಬಯಿಸಿದೋವ್ಳು ನಾ. ವಿಚಿತ್ರವೀರ್ಯನೇ ನಮ್ಮ ಗೆದ್ದ್ ತಾತಿದ್ದರೆ ಯಾವುದೇ ಸಮಸ್ಯೆಗ ಹುಟ್ಟ್‌ತಿತ್ಲೆ. ನೀವು ಗೆದ್ದ್ ತಂದಳರಿ. ನೀವೇ ನಮ್ಮ ಗಂಡಾಂತ ನೊಂಬಿ ಬಂದೋವು ನಾವು. ಈಗ ನಮ್ಮ ಬೇರೋವ್ಕೆ ಒಪ್ಪುಸುವ ಮಾತ್ ಬೇಡ. ಕ್ಷತ್ರಿಯರ ದರ್ಮದ ಪ್ರಕಾರ ನಮ್ಮ ಮೊದುವೆ ಆಗಿ ನಾವ್ಗೆ ಬೊದ್‌ಕ್ ಕೊಡಿನಿ."

ಅಂಬೆ ಇಸ್ಟ್ ಮಾತ್ನ ಹೇಳಿಕನ ಭೀಷ್ಮಂಗೆ ಏನ್ ಉತ್ತರ ಕೊಡೊಕೂಂತ ಗೊತ್ತಾತ್ಲೆ. ಅಂಬೆ ದರ್ಮಕ್ಕೆ ಸರಿಯಾದ ಮಾತ್‌ನನೇ ಹೇಳಿಟ್ಟು. ತೊಪ್ಪು ಯಾರ್ದ್? ಸಿಂಹಾಸನನ ಕಾಪಾಡಂವ ನಾ ಆಗಿರ್‌ಕನ, ರಾಜಮಾತೆನ ಅಪ್ಪಣೆ ಪ್ರಕಾರ ಸೊಂಯಂವರ ಮಂಟಮೆಗೆ ಹೋದ್ ಹೇಂಗೆ ತೊಪ್ಪಾದೆ? ಅಂಬೆ ಹೇಳ್ದಾಂಗೆ ವಿಚಿತ್ರವೀರ್ಯನ ಸೊಂಯಂವರ ಮಂಟಮೆಗೆ ಕಳ್ಸಿಕೆ ಆಗ್‌ತಿತ್ಲೆ. ಹೋಗೂಂತೇಳ್ರೂ ಅಂವ ಹೋಗಂವ ಅಲ್ಲ. ಹೋತಿದ್ದರೂ ಸಾಲ್ವ ಭೂಪತಿನ ಇವಂಗೆ ಗೆಲ್ಲಿಕೆ ಆತಿತ್ಲೆ. ವಿಚಿತ್ರವೀರ್ಯ ಸಕ್ತಿ ಇದ್ದಂವ ಆಗ್ತಿದ್ದರೆ ಈ ಪ್ರಸ್ನೆನೇ ಬಾತಿತ್ಲೆ. ಇದ್, ಈ ಸಣ್ಣ ಪ್ರಾಯದ ಗೂಡೆ ಹೇಳ್ದ ಮಾತ್‌ನ ಕೇಳ್ರೆ ಮುಂದೇನಾದೂಂತ ಏಚನೆ ಮಾಡೊಕು. ಸಕ್ತಿ ಇದ್ದೋವು ಗೆದ್ದ್ ತಂದ ಹೆಣ್ಣ್‌ಗ ಸಕ್ತಿ

ಇಲ್ಲದವರ ಬೋಗಕ್ಕೆ ಇರುವ ಹೆಣ್ಣಾಗಿ ಇರುವ ಅಪಾಯನ ಇದ್ ಕಂಡ್‌ಕೊಂಡುಟ್ಟು. ನಿಜವಾಗಿನೂ ಈ ಹೆಣ್ಣ್‌ಗೆ ಹಸ್ತಿನಾವತಿ ಸಾಮ್ರಾಜ್ಯದ ರಾಣಿ ಆಗುವ ಏಗ್ಯತೆ ಉಟ್ಟು. ಆದರೆ ಇದರ ಒಪ್ಪುಸುದು ಹೇಂಗೆ?"

ಮಂಜಣೆ ಮಾಡುವ ಹಾಂಗೆ ಭೀಷ್ಮರ್ ಹೇಳ್ದೊ. "ಅವ್ವಾ ಅಂಬೆ, ಲೋಕಲಿರುವ ಎಲ್ಲಾ ಹೆಣ್ಣ್‌ಗಳ ಅಯ್ಯೆನ ಸ್ತಾನಲಿ ಇಸಿ ನೋಡಂವ ನಾ. ನಾ ನನ್ನ ಅಪ್ಪಂಗಾಗಿ, ಹಸ್ತಿನಾವತಿಗಾಗಿ ಮಾಡ್ದ ಪ್ರತಿಜ್ಞೆನ ಮುರ್ಯವ ಮಾತೇ ಇಲ್ಲೆ. ನಿಮ್ಮ ನಿನ್ನ ಅಪ್ಪನ ಪಂತಕ್ಕಾಗಿ ಗೆದ್ದ್ ತಂದಂವ ನಾ ಅಲ್ಲ. ನಿನ್ನ ಅಪ್ಪ ನಾವ್ಗೆ ಬಾಕೆ ಹೇಳಿಕೆ ಕಳ್ಸಿಲ್ಲೇಂತೇಳ್ದ ಮೇಲೆ ಅಂವನ ಪಂತ ನಾವ್ಗೆ ತಾಂಗುದ್ಲೆ. ನಾ ಹಸ್ತಿನಾವತಿನ ರಾಜನ ಆಜ್ಞೆನ ಪಾಲಿಸುಂವಂವ. ಸಮ್ರಾಟನ ಒಬ್ಬ ರಾಜ ಅಪಮಾನ ಮಾಡ್ದೇಂತೇಳ್ರೆ, ಸಾಮ್ರಾಜ್ಯನ ರಕ್ಷಿಸುಂವಂವ ಸುಮ್ಮಂಗಿರಿಕಾದೆನೋ? ಸಮ್ರಾಟಂಗಾಗಿ ರಾಜಮಾತೆನ ಅಪ್ಪಣೆನ ಹಾಂಗೆ ನಿಮ್ಮ ಇಲ್ಲಿಗೆ ಕರ್ದ್ ತಂದಳೆ. ನೀವು ಬಾಕೆ ಒಪ್ಪುತಿಲ್ಲೆರೆ ಎಳ್ದ್ ತಾತಿದ್ದೆ. ಅದ್ಕೆ ನೀವು ಎಡೆಮಾಡಿ ಕೊಡದೆ ಒಳ್ಳೆ ಕೆಲ್ಸ ಮಾಡ್ದರಿ."

ಒಂದ್ ನಿಮ್ಸ ತಡ್ಡದ್ ಭೀಷ್ಮರ್ ಹೇಳ್ದೊ. "ಅವ್ವಾ, ಅಂಬೇ ಒಟಾರೆ ಆಗಿ ನೋಡ್ರೆ ಇದರ್ಲಿ ನನ್ನದೇನ್ ತೊಪ್ಪಿಲ್ಲೇಂತ ನೀವ್ಗೆ ತಿಳ್ಯೋದು. ಈಗಳೂ ನಾ ನಿಮ್ಮ ಒತ್ತಾಯ ಮಾಡ್ದುಲ್ಲೆ. ನೀವುಗೆ ಹೇಂಗೆ ಬೇಕೋ ಹಾಂಗೆ ಮಾಡ್‌ನಿ. ನಿವುಗೆ ಸೊತಂತ್ರ ಕೊಟ್ಟಳೆ. ನಿವುಗೆ ಕುಸಿ ಇದ್ದರೆ ನೀವು ಸಮ್ರಾಟನ ರಾಣಿ ಆಗಿ ಹಸ್ತಿನಾವತಿನ ನಿಮ್ಮ ಇಸ್ಟದಾಂಗೆ ಆಳಿಕಂಡ್ ಇರ್‌ನಿ. ನಿಮ್ಮ ಕಾಶಿನೂ ಆಗ ಹಸ್ತಿನಾವತಿನ ಒಂದು ಬಾಗ ಆಗಿ ಇದ್ದದೆ. ನೀವುಗೆ ಇದ್ ಒಪ್ಪಿತ್ಲರೆ ನಿಮ್ಮ ಮೊರ್ಯಾದಿಲಿ ಕಾಶಿಗೆ ನಿಮ್ಮ ಅಪ್ಪನ ಹಕ್ಕಲೆ ಕಳ್ಸುವ ಏರ್ಪಾಡ್ ಮಾಡ್ನೆ. ಏನ್ ಮಾಡ್ರೆ?"

ಅಂಬಿಕೆ ಮತ್ತೆ ಅಂಬಾಲಿಕೆಗ ಎದ್ದ್ ನಿತ್ತ್ ಸತ್ಯವತಿ ದೇವಿಯೊವ್ಕೆ ಕೈ ಮುಗ್ದ್ ದಾಸಿ ಜನಂಗಳ ಒಟ್ಟಿಗೆ ಅವು ಇಳ್ಕಂಡಿದ್ದ ಅತಿಥಿ ಮನೆಗೆ ಹೋದೊ. ವಿಚಿತ್ರವೀರ್ಯನೂ ಎದ್ದ್ ನಿತ್ತ್ ಒಳಗೆ ಹೋತ್. ಅಲ್ಲಿ ಅವು ಮೂರು ಜನನೇ ಒಳ್ದೊ.

ಅಂಬೆ ಅಲ್ಲಾಡದೆ ಕುದ್ದವ್ಳು ಭೀಷ್ಮರ ನೋಡಿ ಹೇಳ್ತ್, "ನೀವು ನಮ್ಮ ಕಾಶಿಗೆ ಕಳ್ಸಿ ಕೊಟ್ಟವೇಂತೇಳ್ರಿ. ನೀವು ನಾವ್ಗೆ ಸೊತಂತ್ರ ಕೊಡ್ವ ಹಾಂಗಿರ್ತಿದ್ದರೆ, ನಿಮ್ಮ ರಥಕ್ಕೆ ನಾವು ಹತ್ತಿಕೆ ಮುಂದೆನೇ ನಾವ್ಗೆ ಒಂದು ಮಾತ್‌ನ ಹೇಳಕಾಗಿತ್ತ್, ತಮ್ಮಂಗಾಗಿ ನಾವು ಅಲ್ಲಿಗೆ ಬಂದೊವೂಂತ. ಅಲ್ಲಿಯೇ ಹೇಳ್ತಿದ್ದರೆ ನಾವು ನಿಮ್ಮೊಟ್ಟಿಗೆ ಬಾತೇ ಇತ್ಲೆ. ಇಲ್ಲಿ ಈಗ ನೀವು ಸೊತಂತ್ರದ ಮಾತ್ನ ಹೇಳ್ರೆ, ಇದ್ ನಿಮ್ಮ ಮೊನ್ಸ್‌ನ ಒಳಗೆನ ಮಾತ್ ಆಗಿರಿಕಿಲ್ಲೆ. ಇನ್ನ್ ನಾವು ಕಾಶಿಗೆ ಹೋದರೆ ಬೇರೆ ದೇಸದ ಜನಂಗ ಏನ್ ಹೇಳ್ವೋ? ಒಮ್ಮೆ ಏಚನೆ ಮಾಡಿನಿ. ಅಪ್ಪನೂ ನಮ್ಮ ಕರ್ಕಂಬಕಿಲ್ಲೆ. ನಾವು ಇಲ್ಲಿನೂ ಇಲ್ಲೆ. ಅಲ್ಲಿನೂ ಇಲ್ಲೆ. ಹಾಂಗಾದವೆ. ನನ್ನ ತಂಗೆಕ ಅವರ ದಾರಿನ ಕಂಡ್‌ಕೊಂಡೊ. ನಾ ಮಾತ್ರ ಈ ವಿಚಿತ್ರವೀರ್ಯನ ಮೊದುವೆ ಆಕಿಲ್ಲೆ. ನೀವೇ ನನ್ನ ಕೈ ಹಿಡ್ದ್ ನಿಮ್ಮಂದಾದ ತೊಪ್ಪುನ ಸರಿ ಮಾಡೊಕು."

ಭೀಷ್ಮರ್ ರಾಜಮಾತೆನ ಒಮ್ಮೆ ನೋಡ್ದೊ. ಸತ್ಯವತಿ ದೇವಿಯೊವು ಅಂಬೆನ ಹಕ್ಕಲೆ ಹೋಗಿ ಅದರ ತಲೆನ ಪೂಜಿ ಹೇಳಿದೊ :

"ಮಗಾ, ಆಚಾರ್ಯರ್ ಸಾಯಕನ ಮುಟ್ಟ ಮೊದ್ವೆ ಆಕಿಲ್ಲೇಂತ ಸಪತ ಮಾಡ್ದೋವು. ಅದ್ಕೆ ಕಾರ್‍ಣ ಉಟ್ಟು. ಆಚಾರ್ಯರ ಹೆತ್ತವ್ವ ಗಂಗಾದೇವಿ ಸಣ್ಣ ಪ್ರಾಯಲೇ ಸಂತನು ಚಕ್ರವರ್ತಿಗಳ ಕೂಸು ದೇವವ್ರತನ ಬುಟ್ಟ್‌ದ್ ಹಿಮಾಲಯ ಪರ್ವತದತ್ತ ತಪಸ್ಸಿಗೆ ಹೋತ್. ಚಕ್ರವರ್ತಿಗ ಹೆಣ್ಣ್ ಬುಟ್ಟ್‌ಹೋದ ದುಕ್ಕಲಿ ಕಾಡ್, ಗುಡ್ಡೆ, ಹಳ್ಳ, ಕೊಳ್ಳಲಿ ಹುಚ್ಚರಾಂಗೆ ತಿರ್‍ಗಿಕಂಡಿರಿಕಾಕನ ನಾ ಅವರ ಕಣ್ಣ್‌ಗೆ ಬಿದ್ದೆ. ನಮ್ಮದ್ ಮುಕ್ಕರ ಕುಲ. ನನ್ನ ಅಪ್ಪ ದಾಶರಾಜನೊಟ್ಟಿಗೆ ಚಕ್ರವರ್ತಿಗ ನಿಮ್ಮ ಮಗಳ ಮೊದ್ವೆ ಆನೇಂತ ಕೇಳಿಕಾಕನ, ಮಗಳ ಹೊಟ್ಟೆಲಿ ಹುಟ್ಟಿದಂವಂಗೇ ಹಸ್ತಿನಾವತಿನ ಪಟ್ಟಕೊಡೂಕೂಂತ ಹೇಳ್ದೊ. ಅದ್ ಚಕ್ರವರ್ತಿಗಳಿಗೆ ಇಸ್ಟ ಆತ್ಲೆ. ಹಸ್ತಿನಾವತಿಗೆ ಹೋದೊವು, ಉಂಡತ್ಲೆ, ತಿಂದತ್ಲೆ. ಕಂಬ್ಳಿ ಹೊದ್ದ್ ಮೊಲ್ಗಿದೊ. ದೇವವ್ರತಂಗೆ ಈ ಇಸಯ ಗೊತ್ತಾಗಿ ಅಂವ ಬಂದ್ ತನ್ನ ಅಪ್ಪನ ನೋಡ್ತ್. ನಾ ಸಾಯಕನ ಮುಟ್ಟ ಮೊದ್ವೆ ಆದ್ಲೆ. ಹಸ್ತಿನಾವತಿ ಸಿಂಹಾಸನನ ರಕ್ಷಣೆ ಮಾಡ್ನೇಂತ ಅಪ್ಪಂಗೆ ಮಾತ್ ಕೊಟ್ಟತ್. ನಮ್ಮ ಜಾತಿನ ಬಂದುಗಳ ಸೇರ್‍ಸಿ ಅವರ ಎದ್ರ್ ಪ್ರತಿಜ್ಞೆ ಮಾಡ್ತ್. ಆಗ ಅವನ ಎಲ್ಲೋವು ಭೀಷ್ಮಂತ ಕರ್‍ದೊ. ಈಗ ಅವನ ಹಿಂದೆನ ಹೆಸ್ರ್ ದೇವವ್ರತ ಎಲ್ಲೋವೂ ಮರ್‍ತೋಗಿ ಭೀಷ್ಮ ಹೆಸ್ರ್ ಕಾಯಂ ಆತ್."

ಸತ್ಯವತಿ ದೇವಿಯೊವು ಮೆಲ್ಲಂಗೆ ಮಾತ್‌ನ ಮುಂದರ್‍ಸಿದೊ. "ನನ್ನ ಅಪ್ಪ ದಾಶರಾಜ ಈ ದೇವವ್ರತನ ಪ್ರತಿಜ್ಞೆಂದ ತುಂಬಾ ಕುಸಿಪಟ್ಟ್‌ದ್ ನನ್ನ ಹಸ್ತಿನಾವತಿನ ಮಹಾರಾಣಿ ಆಕೆ ಕಳ್ಸಿ ಕೊಟ್ಟೊ. ನನ್ನ ಮೊನ್ಸ್‌ಲಿ ಏನ್ ಉಟ್ಟೂಂತ ಯಾರುನೂ ಕೇಳ್ತ್‌ಲ್ಲೆ. ನನ್ನ ಅನ್ಬವದ ಮಾತ್‌ನ ನಾ ಹೇಳ್ನೆ ಮಗಾ, ಜೂವನಲಿ ಬಂದದರ ಬಂದ ಹಾಂಗೇ ತಕಣೋಕು. ನನ್ನ ಸುರುನ ಮಂಜ ಚಿತ್ರಾಂಗದ ಸಾಮರ್ತ್ಯ ಇದ್ದಂವ ಆಗಿತ್ತ್. ಅಂವ ಸುಮ್ಮಂಗೆ ಗಂಧರ್ವರ ಒಟ್ಟಿಗೆ ಕಾಲ್ ಕೆರ್‍ದ್‌ಕಂಡ್ ಕಾಳಗ ಮಾಡಿ ಸತ್ತ್ ಹೋತ್. ನಾ ಆಗ ಭೀಷ್ಮನ ಈ ಸಿಂಹಾಸನನ ಹತ್ತ್‌ಂತ ಬೇಡಿಕಂಡೆ. ನನ್ನಂದಾಗಿ ಇಂವಂಗೆ ಸಂಸಾರ ಸುಕ ಇಲ್ಲದಾಂಗಾತ್. ಈ ಪಾಪ ನಂಗೆ ತಟ್ಟದೆ ಇರಿಕಿಲ್ಲೆಂತ ನಂಗೆ ಆಗಾಗ ನೆಂಪಾಗ್ತಿತ್ತ್. ಇದರ್‌ಂದ ನಂಗೆ ಬುಡ್ಗಡೆ ಸಿಕ್ಕೊಕೂಂತಾದರೆ ಭೀಷ್ಮ ಮೊದುವೆ ಆಕು. ಹಸ್ತಿನಾವತಿನ ಸಿಂಹಾಸನಕ್ಕೆ ಏಗ್ಯತೆ ಇದ್ದ ಮಕ್ಕ ಹುಟ್ಟಕಾಗಿತ್ತ್‌ಂತ ನಂಗೆ ಏಸ್ಟೋ ಸಲ ಮೊನ್ಸಿಗೆ ತಟ್ಟ್‌ತಿತ್ತ್. ಇದರ ಆಗಾಗ ನಾ ಭೀಷ್ಮಂಗೆ ಹೇಳ್ತಿದ್ದೆ."

ಸತ್ಯವತಿದೇವಿಯೊವು ಇಸ್ಟ್ ಹೇಳ್ದಕೂಡ್ಲೇ ಅಂಬೆ ಹೇಳ್ತ್. "ರಾಜಮಾತೆನ ಆದೇಸಾಂತ ನಮ್ಮ ಹಸ್ತಿನಾವತಿಗೆ ಕರ್‍ಕಂಡ್ ಬಂದೋವು ಇದರ ಏಕೆ ರಾಜಮಾತೆನ ಆದೇಸಾಂತ ತಿಳ್ತಿಲ್ಲೆ? ಸಿಂಹಾಸನಕ್ಕೆ ರಕ್ಷಣೆ ಒದ್ಗ್‌ಸೊವು ಇವು ಆದರೆ ರಾಜಮಾತೆ ಹೇಳ್ದಾಂಗೆ ಕೇಳಲಿ. ಆಚಾರ್ಯರ್ ಮಾತ್‌ಂದ ನನ್ನ ಸೋಲ್ಸುವೋ. ಆದರೆ ಅವು ನಂಗೆ ಇಸ್ಟ ಇಲ್ಲದ ಬೇರೋವ್ನೆ ಒಪ್ಪುಸುವ ಮಾತಾಡ್ದು ಧರ್ಮ ಅಲ್ಲ. ಹಸ್ತಿನಾವತಿನ ಸಿಂಹಾಸನ ಅಧರ್ಮನ, ದರ್ಮಾಂತ ನೆನ್ಸಿಕಂಡರೆ ಮುಂದೆಗೆ ಬಾಳ ಕಸ್ಟಗ ಬಾವೊ.

ಆಚಾರ್ಯರ್ ಈ ಎರ್ಡ್ ಬಾಯಿ ಕತ್ತಿನ ಹಾಂಗೆ ಇರ್ದು ಬೇಡ. ಇದರ ಬುಟ್ಟ್‌ದ್ ನನ್ನ ಅವು ಮೊದ್ವೆ ಆಗಲಿ."

ಭೀಷ್ಮರ್ ತಲೆ ಕೆಳಗೆ ಹಾಕಿದೊ. ಶಂತನು ಚಕ್ರವರ್ತಿಗ ಅಪ್ಪ ಮತ್ತೆ ಅವ್ವನ ಸ್ಥಾನಲಿ ನಿತ್ತ್ ಅವರ ಬಾಳ ಪ್ರೀತಿಂದ ಅವು ಸಾಂಕಿದ ಆ ದಿನಂಗ ಅವ್ಕೆ ನೆಂಪಾತ್. ಚಕ್ರವರ್ತಿಗೆ ಹೆಣ್ಮಕ್ಕಳ ಹುಚ್ಚು ಇರ್ತಿದ್ದರೆ ಅವು ಅಷ್ಟರ ಮುಟ್ಟ ಸುಮ್ಮಂಗಿರ್ತಿದ್ದೊನೋ? ಸತ್ಯವತಿ ದೇವಿನ ಕಂಡ ಮೇಲೆ, ಅವ್ಕೆ ಮೊದ್ವೆ ಆಕೂಂತ ಆಸೆ ಆತ್. ದಾಶರಾಜನ ಹಟಂದಾಗಿ ದೇವವ್ರತ ಭೀಷ್ಮ ಆತ್. ಸುರುಗೆ ಚಕ್ರವರ್ತಿಗೆ ಭೀಷ್ಮನ ಪ್ರತಿಜ್ಞೆ ಗೊತ್ತಿತ್ಲೆ. ಗೊತ್ತಾಕನ ಅವು ತುಂಬಾ ಸಂಕಟ ಪಟ್ಟೊ.

"ದೇವವ್ರತಾ, ಇದ್ ಅರ್ತ ಇಲ್ಲದ ಪ್ರತಿಜ್ಞೆ, ನೀ ನನ್ನ ಹಿರಿಮಂಜ. ಈ ಸಿಂಹಾಸನನ ನೀ ಹತ್ತಕಲ್ಲದೆ, ಬೇರೆವು ಹತ್ತುದು ಅದರ್ಮ ಆದೆ. ಇದ್ ಬಾಳ ಅನ್ಯಾಯ. ನಿನ್ನಂದ ನಂಗೆ ಸತ್ಯವತಿ ನನ್ನ ಹೆಣ್ಣಾಗಿ ಬಾದು ದೊಡ್ಡದ್ ಅಲ್ಲ. ಪ್ರತಿಜ್ಞೆ ಮಾಡಿಕೆ ಮುಂದೆ ನೀ ನನ್ನ ಆಗಲೀ, ಸತ್ಯವತಿನ ಆಗಲಿ ಒಂದ್ ಮಾತ್ ಕೇಳ್ತ್ಲೆ. ಈಗ ನಮ್ಮ ಇಬ್ಬರ ಆದೇಸಾಂತ ನೀ ತಿಳ್ಕ. ನಿಂಗೆ ಇಸ್ಟ ಇದ್ದ ಗೂಡೆನ ಮೊದ್ವೆ ಆಗಿ ಈ ಸಿಂಹಾಸನಕ್ಕೆ ಉತ್ತರಾಧಿಕಾರಿನ ಕೊಡು."

ಹೀಂಗೆಲ್ಲಾ ಏಚನೆಲಿ ಮುಣ್‌ಂಗಿದ ಭೀಷ್ಮರ್ ಅದರ ನಿಲ್ಲಿಸಿದೊ. ಅವು ಮುಂದೆ ಹೇಳ್ದೊ. "ಅಂಬೇ, ಮೊದ್ವೆಗೆ ಪ್ರಾಯ ಎಸ್ಟ್ ಮುಕ್ಯನೋ, ಮೋನ್ಸ್‌ನೂ ಅಸ್ಟೇ ಮುಕ್ಯ. ನಂಗೀಗ ಅದೆರ್ಡ್‌ನೂ ಇಲ್ಲೆ. ನಾ ಸಪತ ಮಾಡ್ದ್ ಎಲ್ಲರ ಹಿತಂದ. ಸೂರ್ಯವಂಸದ ರಾಮಚಂದ್ರನ ಹೆಸ್ರ್ ನೀ ಕೇಳಿರ್‍ವ? ಅಂವ ಅಂವನ ಅಪ್ಪಂಗಾಗಿ ಹದಿನಾಕ್ ವೊರ್ಸ ಕಾಡ್‌ಲಿ ವಾಸಮಾಡ್ತ್. ಅಂವ ಎಲ್ಲರ ದಿಸ್ಟಿಲಿ ಒಳ್ಳೆಂವ ಆತ್. ನಾ ಚಂದ್ರವಂಸದಂವಾಂತೇಳ್ವ ಹಂಕಾರಲಿ ಈ ಸಪತ ಮಾಡ್ತ್ಲೆ. ದೇಸನ ಆಳಂವ ಮಕ್ಕಳ ಪಡ್‌ತ್ಲರೂ ಚಿಂತೆ ಇರ್ದುಲ್ಲೆ, ಮೌಲ್ಯನ ಹುಟ್ಟುಹಾಕೊಕು. ಅದರ ಒಳ್ಳೋಕು. ಮಕ್ಕ ಇಲ್ಲದೊವ್ಕೆ ಸೊರ್ಗ ಇಲ್ಲೇಂತ ಹೇಳೋವೇ ತುಂಬಕೊಂಡಿರುವ ಈ ಜನರ್‌ಲ್ಲಿ, ಅಪ್ಪಂಗಾಗಿ ಮೊದ್ವೆ ಆಗದೇ ಇದ್ದನೇಂತ ಸಪತ ಮಾಡ್ದು ಎಸ್ಟ್ ತೂಕದ್‌ಂತ ನೀ ಗ್ರೇಸಿ ನೋಡು. ನನ್ನ ಜವ್ವಣಿಕೆ ಕಾಲಲಿ ಕಳ್ಳ್ ಕುಡ್ದ ಕುರೆನ ಹಾಂಗೆ ಇದ್ದ ನನ್ನ ಮೊನ್ಸ್‌ನ ವೇದ, ಪುರಾಣ ಓದುದರ್ಲಿ ಕಳ್ದ್. ಇದಕ್ಕಾಗಿ ನಾ ತುಂಬಾ ಕಸ್ಟ ಪಟ್ಟೊಳೆ. ಹುಟ್ಟ್, ಬೊದ್‌ಕ್, ಸಾವು. ಸತ್ತಮೇಲೆ ಏನಾದವೆ–ಇದರೆಲ್ಲಾ ಓದಿದ್, ಮಂತನ ಮಾಡಿ ಅದ್ರೊಂದು ನಿಜರೂಪ ಕಂಡ್ ಕೊಂಡಳೆ. ಮಾಡ್ದ ಸಪತನ ಯಾಗೋಳೂ ಮುರ್‍ಯಕಾಗದ್‌ಂತ ಮೊನ್ಸ್ ಗಟ್ಟಿ ಮಾಡಿಕಂಡಳೆ. ಈ ಬೂಮಿ ಮೇಲೆನ ಹೆಣ್ಮಕ್ಕಳ್ ಎಲ್ಲಾ ನನ್ನ ಅವ್ವಂಗೆ ಸಮಾನಾಂತ ತಿಳ್ಕಂಡಳೆ. ಭೀಷ್ಮ ಅಂವನ ಸಪತಕ್ಕೆ ಬೇಕಾಗಿ ಜೂವ ಬುಡಿಕೂ ಹಿಂದೆ ಮುಂದೆ ನೋಡಂವ ಅಲ್ಲ. ನೀ ಸುಮ್ಮಂಗೆ ಚರ್ಚೆ ಮಾಡದೆ ಅವ್ವ ಹೇಳ್ದಾಂಗೆ ಕೇಳ್. ಇದರ್ಲಿ ಎಲ್ಲೋವರ ಸುಕ ಅಡ್‌ಂಗುಟ್ಟು."

ಸತ್ಯವತಿ ದೇವಿಯೊವು ಕೊಂಡಾಟಲಿ ಅಂಬೆಗೆ ಹೇಳ್ದೊ "ಮಗಾ, ಭೀಷ್ಮ ಲೋಕ

ಒಪ್ಪುವ ಮಾತ್‌ನ ಹೇಳಿಟ್ಟು. ನಿನ್ನ ಅಪ್ಪ ಪ್ರತಾಪಸೇನ ಮಾರಾಜ ಸೊಂಯಂವರನ ಮಾತ್ರ ನಿಚ್ಚಯ ಮಾಡಿಟ್ಟು. ಗಂಡ್‌ನ ಅಲ್ಲ. ವಿಚಿತ್ರವೀರ್ಯ ಹಂಞ ಒಳಮೊನ್ಸ್‌ನೋಂವ. ಆದರೆ ತುಂಬಾ ಒಳ್ಳೇಂವ. ನಿನ್ನ ಅವ್ವನ ಸ್ತಾನಲಿ ನಿತ್ತ್ ನಾ ಹೇಳ್ನೆ. ವಿಚಿತ್ರವೀರ್ಯನ ಕೈ ಹಿಡ್ದ್ ನೀ ಪಟ್ಟದ ರಾಣಿ ಆಗ್. ನೀ ದೈರ್ಯ ಇದ್ದೋಳು. ಬುದ್ದಿ ಮತ್ತೆ ಹಟ ಇದ್ದೋಳು. ನಿನ್ನಂದ ಚಂದ್ರವಂಸ ಬೆಳ್ಗೋಕು."

ಅಂಬೆ ಸುಮ್ಮಂಗೆ ಕುದ್ದದರ ನೋಡಿ ಭೀಷ್ಮರ್ ಹೇಳ್ದೊ "ರಾಜಮಾತೆನ ಮಾತ್‌ನ ಮರ್ಮ ತಿಳಿಯದಸ್ಟ್ ಬೋದಾಳ್ತಿ ನೀ ಅಲ್ಲ. ನಿನ್ನ ಅಪ್ಪ ಹಸ್ತಿನಾವತಿಗೆ ಒಂದು ಕಾಗ್ದನನೂ ಕಳ್ಸದೆ ನಾವ್ಗೆ ಅಪಮಾನ ಮಾಡ್ತಲೇ? ತೊಪ್ಪು ಅಂವಂದ್. ಮೂರು ಜನ ಅಠ್ಸುಗೂಡೆಗಳ ಬಾಳ ಸಕ್ತಿವಂತಂಗೆ ಮೊದುವೆ ಮಾಡಿಕೆ ಹೊರ್ಟತಲೆ ಅಂವ? ಅಂವಂಗೆ ನಿಮ್ಮ ಸುಕಂದ ಅಂವನ ರಾಜ್ಯದ ಆಡಳ್ತೆ ಹೆಚ್ಚಾತ್. ನಮ್ಮ ವಿಚಿತ್ರವೀರ್ಯ ಸೊಂಯಂವರ ಮಂಟಮೆಗೆ ಬಂದ್‌ದ್ ಅಂವನ ಸಕ್ತಿನ ಪಂತಕ್ಕೆ ಇಸಿತ್ಲೆ. ಈ ಮಾತ್ನ ಒಪ್ಪಿಕಣಕ್. ಆದರೆ ಸುಕದ ಸಂಸಾರ ಸಾಗಿಸಿಕೆ ತೋಳ್‌ನ ಬಲ ಮಾತ್ರ ಯೋಗ್ಯತೇಂತ ನೀ ತಿಳ್ಯಕಿಲ್ಲೇಂತ ನಾ ತಿಳ್ದನೆ. ನಿನ್ನ ತಂಗೆಕ ಅಂವನ ಮೊದ್ವೆ ಆಕೆ ಒಪ್ಪಿಕೊಂಡೊಳೊ. ನೀ ಬೇಡದ ಮಾತ್‌ನೆಲ್ಲಾ ಹೇಳಿಯ. ಈಗ ನಾ ನಿನ್ನ ಬಲತ್ಕಾರಲಿ ವಿಚಿತ್ರವೀರ್ಯಂಗೆ ಮೊದ್ವೆ ಮಾಡ್ಸಕ್. ಈ ದೇಸಲಿ ಅದೆಸ್ಟ್ ರಕ್ಕಸ ಮೊದ್ವೆಗ ನಡ್ಯೋದುಲ್ಲೆ? ನೀ ನಮ್ಮ ಒಳ್ಳೆತನನ ಅರ್ತ ಮಾಡಿಕಣಕು."

ಅಂಬೆ ದಡ್ಕನೆ ಎದ್ದ್ ನಿತ್ತತ್. ಅದರ ಮೋರೆ ಸಿಟ್ಟ್‌ಂದ ಕೊದ್ಯತಿತ್ತ್. "ಆಚಾರ್ಯ್ಂದ ರಕ್ಕಸ ಮೊದ್ವೆನ ಪಾಟನೋ? ನೀವು ನಿಮ್ಮ ದೊಡ್ಡಸ್ತಿಕೆನ ಒಳ್ಸಿಕಂಬಕಾಗಿ ಜೂವಬುಡಿಕೂ ತಯಾರ್ ಆಗೊಳರಿ. ನೀವು ಈ ಅಂಬೆನ ಏನ್‌ಂತ ತಿಳ್ಕಂಡಳರಿ? ಬಲತ್ಕಾರದ ಮೊದ್ವೆಂದ ಜೂವ ಬುಡ್ದೇ ಒಳ್ಳೇದ್. ನೀವು ಮೌಲ್ಯಗಳ ಬಗ್ಗೆ ಮಾತಾಡ್ವ ಬದ್ಲ್ ಮೊನ್ಸ್‌ನ ಬಗ್ಗೆ ಮಾತಾಡಿನಿ. ರಕ್ಕಸ ಮೊದ್ವೆನ ಸಮರ್ತನೆ ಮಾಡುವ ನೀವು ಅಂದ್ ಸಪತ ಮಾಡುವ ಬದ್ಲ್ ಎಲ್ಲರ ಹಿತದೃಷ್ಟಿಂದ ಸತ್ಯವತಿ ದೇವಿಯವರ ಬಲತ್ಕಾರಂದ ಏಳ್ಕಂಡ್ ಬಾತಿದ್ದರೆ ಆ ದಾಶರಾಜಂದ ಏನ್ ಮಾಡಿಕೆ ಆಗ್ತಿತ್ತ್? ಇನ್ನೊಮ್ಮೆ ಇದೇ ಮಾತ್‌ನ ಹೇಳ್ನೆ. ಗಂಡ್ ಯಾರ್‌ಂತ ಸೊಂಯಂವರ ಮಂಟಮೆಲಿ ಗೊತ್ತಾಗ್ತಿದ್ದರೆ ನಾ ನಿಮ್ಮ ರಥನ ಹತ್ತುವ ಮಾತೇ ಇತ್ಲೆ. ನಿಮ್ಮಂತ ಆಚಾರ್ಯರೇ ಅಲ್ಲನೋ ಹೆಣ್ಣ್‌ಗೆ ಸೊತಂತ್ರ ಕೊಡಿಕೆ ಬೊತ್ತ್‌ಂತ ಹೇಳ್ದೋವು. ನೀವು ನನ್ನ ಮೊದ್ವೆ ಆಕೊಂತ ನಾ ಹೇಳ್ದು ನಿಮ್ಮ ಪೊರ್ಲ್‌ಗೆ, ಸಕ್ತಿಗೆ ಮೊನ್ಸ್ ಮೊರ್ಳಾಗಿ ಅಲ್ಲ. ನನ್ನದ್ ದರ್ಮ ಒಪ್ಪುವ ಮಾತ್. ನಿಮ್ಮದ್ ಅನ್ಕೂಲಕ್ಕೆ ತಕ್ಕ ಹಾಂಗೆ ಮಾಡುವ ಚರ್ಚೆ. ನಿಮ್ಮಂತೋವು ಹಿಂಗೆ ಮಾಡಿಕೆ ಆಗದಿತ್ತ್."

ಅಂಬೆ ಇಸ್ಟ್ ಹೇಳಿ ಕುದ್ದತ್. ಮತ್ತೆ ಮಾತಾಡಿಕೆ ಸುರುಮಾಡ್ತ್. "ಆಚಾರ್ಯರೆ ಅಪ್ಪಂಗೆನಾವು ಹಸ್ತಿನಾವತಿನ ಸೊಸೆಕ್ಕ ಆದ್ ಇಸ್ಟ ಇತ್ಲೆ. ಇಸ್ಟ ಇರ್ತಿದ್ದರೆ ನೀವ್ಗನೂ ಬಾಕೆ ಹೇಳಿ ಕಳ್ಸ್‌ತಿದ್ದೊ. ನೀವು ಅದರ ನಿಮ್ಮ ಪ್ರತಿಷ್ಟೆನ ಪ್ರಸ್ನೆ ಮಾಡ್ದರಿ. ಬಾಕೆ ಹೇಳದಿದ್ದರೂ ಸೊಂಯಂವರ ಮಂಟಮೆಗೆ ಬಂದರಿ. ನೀವು ಬಾಕೆ ಮುಂದೆನೇ ಸಾಲ್ವ ಭೂಪತಿ

ಪಂತಲಿ ನಮ್ಮ ಗೆದ್ದುಟ್ಟು. ಸಾಲ್ವ ಭೂಪತಿನ ರಾಣಿಗ ಆಕಿದ್ದ ನಾವ್ಗೆ ನೀವು ಬಂದ್‌ದ್ ದಿಕ್ಕ್ ಕಾಣದಾಂಗೆ ಆಗಿತ್ತ್. ನೀವು ಸಾಲ್ವ ಭೂಪತಿನ ಗೆದ್ದರಿ. ನಾವು ಉಪಾಯ ಇಲ್ಲದೆ ನಿಮ್ಮ ರಥನ ಹತ್ತಿದೊ. ನಾವು ಮೊದುವೆ ಆಗಂವ ವಿಚಿತ್ರವೀರ್ಯಂತ ನಾವ್ಗೆ ಆಗಳೇ ಗೊತ್ತಿರ್‌ತಿದ್ದರೆ ನಾವು ರಥನ ಹತ್ತಿಕಂಬತಿಲ್ಲೆ. ಪಂತಲಿ ನಮ್ಮ ಗೆಲ್ಲಿಕಾಗದ ವಿಚಿತ್ರವೀರ್ಯನ ರಾಣಿಗ ಆದು ನಮ್ಮ ಹಕ್ಕ್ಂತ ಈಗ ನೀವು ಹೇಳ್ರೆ. ನಿಮ್ಮಿಂದಾಗಿ ಹಾಳಾಗುವ ಒಂದು ಹೆಣ್ಣ್‌ನ ಬಾಳ್‌ನ ಸರಿಮಾಡಿಕೆ ನಿಮ್ಮ ಸಪತ ಅಡ್ಡಿ ಬಂದದೆ. ನಿಮ್ಮ ತೊಪ್ಪುನ ಮೌಲ್ಯನ ಒಳ್ಳುದೂಂತ ಹೆಗ್ಗಳಿಕೆಲಿ ಹೇಳ್ರೆ. ಇಸ್ಟ ಇಲ್ಲದಂವನ ಕಟ್ಟಿಕಂಬೊದು ಜೂವ ಇರಿಕನ ಮುಟ್ಟ ಸಂಕಟ ಪಡ್ದು ಯಾವ ಮೌಲ್ಯ? ನೀವೇ ಹೇಳಿ".

ಈ ಪ್ರಸ್ನೆಗೆ ಉತ್ತರ ಹೇಳಿಕಾಗದೆ ಭೀಷ್ಮರ್ ಸೋತ್ ಹೋಗಿ ಸತ್ಯವತಿ ದೇವಿಯವ್ರ ಮೋರೆನ ನೋಡ್ದೊ. ರಾಜಮಾತೆನ ಮೋರೆಲಿ ತುಂಬಾ ಚಿಂತೆ ತುಂಬಿಕಂಡಿತ್ತ್. ಏನೋ ಕೆಟ್ಟ ಏಚನೆ ಬಾತ್. ಅವು ಒಂದ್ ತೀರ್ಮಾನಕ್ಕೆ ಬಾಕೆ ಹಂಞ ಹೊತ್ತ್‌ಹಿಡ್ತ್. ಅಕೆರಿಗೆ ಏನೋ ನಿಚ್ಚಯ ಮಾಡ್ದಾಂಗೆ ಅವು ಹೇಳ್ದೊ.

"ಕೂಸು ಭೀಷ್ಮಾ. ಅಂಬೆ ಹೇಳ್ದು ಸರಿ. ನೀ ಕಾಶೀರಾಜ್ಯಕ್ಕೆ ಹೋದ್, ವಿಚಿತ್ರವೀರ್ಯಂ ಗಾಗಿ ಇವರ ಕರ್ಕಂಡ್ ಬಂದದ್ ನನ್ನ ಮಾತ್‌ನ ನಡ್ಸಿಕ್ಕಾಗಿ, ನಂಗೆ ಬೆಲೆ ಕೊಟ್ಟಳ. ಇದರ ಎಲ್ಲಾ ತಪ್ಪು, ಒಪ್ಪುಗ ನಂಗೆ ಸೇರ್ದ್. ನಿನ್ನ ತ್ಯಾಗ ದೊಡ್ಡದ್. ನನ್ನ ಅಪ್ಪ ದಾಶರಾಜನ ಮಾತ್‌ನ ಕೇಳಿ ಬಂದ್‌ದ್ ನೀ ಸಪತ ಮಾಡ್ದ. ನನ್ನ ಮಂಜನೇ ಹಸ್ತಿನಾವತಿನ ಪಟ್ಟಲಿ ಕುದ್ರೊಕೂಂತ ನಾ ಆಸೆ ಪಟ್ಟಿಲ್ಲೆ. ದರ್ಮ ಪ್ರಕಾರ ಹಸ್ತಿನಾವತಿನ ಸಿಂಹಾಸನ ನಿಂಗೆ ಸೇರಕಾದ್. ಒಮ್ಮೊಮ್ಮೆ ಏನೇನೊ ಏಚನೇಗ ಬೇಡಾಂತೇಳ್ರೂ ಅದರ ಪಾಡ್‌ಗೆ ಅದ್ ಬಂದ್ ಹೋದೆ. ಚಿತ್ರಾಂಗದ ಬೊದ್ಕಿರ್‌ತಿದ್ದರೆ ಅಂವನೇ ಇವರ ಗೆದ್ದ್ ತಾತಿತ್ತ್. ಈಗ ಚಿತ್ರಾಂಗದನ ಸ್ತಾನಲಿ ನೀ ಒಳ. ಅಂಬಿಕೆ, ಅಂಬಾಲಿಕೆಗ ವಿಚಿತ್ರವೀರ್ಯನ ಒಪ್ಪಿಕೊಂಡೊಳೊ. ಅಂಬೆಗೆ ಒಂದು ಗಟ್ಟಿ ನೆಲೆನ ಅವಳ ಮೊನ್ಸ್‌ನಾಂಗೆ ಮಾಡ್ದು ನಮ್ಮ ದರ್ಮ. ನೀ ಯಾರಿಗಾಗಿ ಯಾರ ಎದ್‌ರ್ ನಿತ್ತ್ ಸಪತ ಮಾಡ್ಯೊಳೊನೋ ಆವಿಬ್ರೊರೂ ಈಗ ಇಲ್ಲೆ. ಇಂದ್‌ನ ದಿನಕ್ಕೆ ಮತ್ತ ನಾಳೆಗೆ ಒಳ್ಳೆದಾದೂಂತೇಳ್ರೆ, ಕಳ್ದದರ ಯಾವುದೋ ಒತ್ತಡಕ್ಕಾಗಿ ಮಾಡ್ದ ಸಪತನ ಮುರ್ದರೆ ಅದ್ ಅದರ್ಮ ಆದುಲ್ಲೇಂತ ನಂಗೆ ಕಂಡದೆ. ಈಗನ ಮಟ್ಟ್‌ಗೆ ನಂಗೆ ಕಾಂಬ ದಾರಿ ಇದೊಂದೇ. ನೀ ಈ ಅಂಬೆನ ಮೊದ್ವೆ ಆಗ್. ನಿಮ್ಮ ಇಬ್ಬರ್‌ಂದ ಹುಟ್ಟುವ ಕೂಸು ಕುರುವಂಸಕ್ಕೆ ಹೆಸ್ರ್ ತಾದು. ಇದರ ನೆನ್ಸಿರೆನೇ ನನ್ನ ಮೈ ಅಕ್ಕಿ ಹೊಡ್ದದೆ."

ಅವ್ವ ಹೇಳ್ದ ಈ ಮಾತ್‌ನ ಕೇಳಿ ಭೀಷ್ಮ ಮರಕಟ್ಟಿ ಹೋತ್. ರಾಜಮಾತೆನ ಅದೇಸದಾಂಗೆ ಕಾಶೀರಾಜನ ಮಗಕ್ಕಳ ಕರ್ಕಂಡ್ ಬಂದದ್ ಈಗ ನಂಗೇ ತಿರ್‍ಗಿ ನಿತ್ತತಲೇ. ಇದರ ನಾ ನೆನ್ಸಿತೇ ಇತ್ಲೆ. ಹಾಂಗಾದರೆ ನಾ ಕಾಶಿಗೆ ಹೋದೇ ತೊಪ್ಪುನೋ? ಮೊದುವೆ, ಸಂಸಾರದ ಕನ್ಸ್‌ಮೊನ್ಸ್‌ಲೂ ಗ್ರೇಸದೆ ಅದೆಸ್ಟ್ ವೊರ್ಸ ಆತ್? ಈ ಅಂಬೆ ಪೊರ್ಲುನೂ ಉಟ್ಟು, ಬುದ್ದಿವಂತಿಕೆಲಿನೂ ಯಾರಿಗೆ ಕಮ್ಮಿ ಇಲ್ಲೆ. ಪೊರ್ಲುನ ಗೂಡೆಗ

ಬುದ್ದಿವೊಂತರಾಗಿರ್ದು ಅಪೂರ್ಪ. ಹಾಂಗೇಂತ ನಾ ಕೊಟ್ಟಮಾತ್‌ಗೆ ತೊಪ್ಪಕೋ? ಒಂದ್ ಹೆಣ್ಣ್‌ಗಾಗಿ ನನ್ನ ಪ್ರತಿಜ್ಞೆನ ಮುರ್ಯೋಕೋ? ಭೀಷ್ಮಂತ ಹೇಳಿಕಂಬ ನಾ ದೇವವ್ರತ, ಕೊಟ್ಟ ಮಾತ್‌ಗೆ ತಪ್ಪೊಕೋ?

ಭೀಷ್ಮರ್ ತಲೆಕೊಡ್ಡಿಕೊಂಡೊ. "ರಾಜಮಾತೆ, ಇದೊಂದು ಕಸ್ಟದ ಪ್ರಸ್ನೆ. ನೀವು ಅಂಬೆ ಒಬ್ಬಳ ಗಮನಲಿ ಇಸಿಕಂಡ್, ಈ ಸಮಸ್ಯೆಗೆ ಪರಿಹಾರ ಮಾಡೊಕೂಂತ ಪ್ರಯತ್ನ ಮಾಡ್ರೆ, ಇಡೀ ಬರತಖಂಡಕ್ಕೆ ಒಂದು ಮಾದರಿಯಾಗಿ ನಿಲ್ಲುವ ಭೀಷ್ಮನೇ ಕೊಟ್ಟಮಾತ್‌ಗೆ ತೊಪ್ಪಿರೆ ಅದ್ ಪರ್ಪಂಚಕ್ಕೆ ಎಂತಾ ಸಂದೇಸನ ಕೊಟ್ಟದೇಂತ ಒಂದ್ ನಿಮ್ಸ ಏಚನೆ ಮಾಡಿ ನೋಡಿನಿ. ಕೊಟ್ಟ ಮಾತ್‌ನ ನಡ್ಸುದರ್‌ಂದ ದೊಡ್ಡ್‌ಮಾತ್ ಇರಿಕೆ ಸಾದ್ಯ ಇಲ್ಲೆ. ರಾಜಮಾತೆ, ದಯಮಾಡಿ ನನ್ನ ಮಾಪು ಮಾಡಿನಿ. ನನ್ನ ಜೂವ ಬೇಕರೆ ಕೊಟ್ಟನೆ, ಆದರೆ ನಾ ಕೊಟ್ಟ ಮಾತ್‌ಗೆ ತೊಪ್ಪಿಕಿಲ್ಲೆ."

ರಾಜಮಾತೆ ತಲೆದೂಂಗಿದೊ. "ನೀ ಕೊಟ್ಟಮಾತ್‌ಗೆ ತೊಪ್ಪಿಕಿಲ್ಲೇಂತ ನಂಗೆ ಗೊತ್ತಿತ್ತ್. ಕುಂಞಿ, ಅಂಬೆಗೊಂದು ನೆಲೆ ಆಕೊಲೆ. ಅದ್ ನನ್ನ ಕೆಲ್ಸ ಅಲ್ಲನೋ? ಅದ್ ನನ್ನದ್ ಮಾತ್ರ ಅಲ್ಲ. ಹಸ್ತಿನಾವತಿನ ಸಿಂಹಾಸನನ ರಕ್ಷಣೆ ಮಾಡುವ ನಿನ್ನದುನೂ ಹೌದು. ಹೇಳ್ ಕುಂಞಿ, ಅಂಬೆನ ಸಮಸ್ಯೆಗೆ ನಿಂಗೇನಾದರ್ ಪರ್ಹ್ಯಾರ ಹೊಳ್ದದೆನೋ?"

ಭೀಷ್ಮರ್ ಏಚನೆಲಿ ಬಿದ್ದೊ. ಮೊಂಯಿಂಸನ ಜೋವನಲಿ ಮೊದ್ವೆ ಆಕೇ ಆಕೂಂತ ಏನಾದರ್ ಉಟ್ಟೋ? ಮೊದುವೆ ಆಗದೆ ಬೊದ್ಕಿಕೆ ಆದುಲ್ಲೇನೋ? ಪರಶುರಾಮ ಗುರುಗ ಮೊದುವೆ ಆಗದೆ ಬೊದ್ಕಿತಿಲ್ಲೆನೋ? ಅವು ಏನ್ ಹೇಳ್ದೊ. ಈ ದೇಸಲಿ ಎಸ್ಟ್ ಜನ ರುಸಿ, ಮುನಿಗ ಮೊದ್ವೆ ಆಗದೆ ಒಳ್ದೊಳೊ. ಬ್ರಹ್ಮ ಚರ್‍ಯೆನ ಒಂದು ಸವಾಲಾಗಿ ನೋಡಿದ್, ದಿನ ಕಳ್ದದರ ನೆನ್ಸಿದ್ ಅವ್ಕೆ ಅವರ ಬಗ್ಗನೇ ಹೆಮ್ಮೆ ಇತ್ತ್. ಆದರೆ ಹಾಂಗೆ ಮೊದ್ವೆ ಆಗದೆ ಒಳ್ದವರ್‌ಲಿ ಹೆಣ್ಣ್‌ಗ ಯಾರೊಳೊ? ಜವ್ವಂತಿನೂ, ಪೊರ್ಲುನೂ ಇದ್ದ ಈ ಗೂಡೆಗೆ ಕಡ್ಡಾಯ ಮೊದ್ವೆ ಆಗದೆ ಇರ್‌ಂತ ಹೇಳ್ದು ಅದರ್ಮ ಆದೆ. ಬ್ರಹ್ಮಚಾರಿಣಿ ಆಗಿ ಅಂಬೆ ಜೂವಮಾನ ಇಡೀ ಕಳ್ಯೊಕೂಂತ ಹೇಳ್ದು ನನ್ನ ಸ್ವಾರ್ಥ ಆದೆ. ಬ್ರಹ್ಮಚಾರಿಣಿಯಾಗಿ ಜೋವನ ನಡ್ಸುವ ಅಗತ್ಯ ಅದ್ಕೆ ಏಕೆ ಬೇಕ್? ರೂಪಲಿ, ಗುಣಲಿ, ಆರೋಗ್ಯಲಿ, ಬುದ್ದಿಸಕ್ತಿಲಿ, ಸಾದನೆಲಿ ಕಮ್ಮಿ ಇದ್ದೊವೂನೂ ಅಪ್ಪನ ರುಣ ತೀರ್ಸಿಕೇಂತ ಮೊದ್ವೆ ಆಗಿ ಮಕ್ಕಳ ಹೆತ್ತವೆ. ಇದರ್ಲಿ ಹುಟ್ಟುವ ಮಕ್ಕ ಆರೋಗ್ಯ, ಬುದ್ದಿ, ಸಾಮರ್‌ತ್ಯಲಿ, ಸಕ್ತಿವಂತರಾಗುವೊ. ಅದರ್‌ಂದ ಈ ಅಂಬೆಗೆ ಏನಾದರೊಂದ್ ದಾರಿನ ತೋರ್ಸೋಕು. ದನಿ ತಗ್ಗಿಸಿ ಭೀಷ್ಮರ್ ಹೇಳ್ದೊ. "ನಂಗೆ ಎರ್ಡ್‌ದಾರಿ ಕಂಡದೆ. ಇದ್ ಕಾಶಿಗೆ ಹೋದಾದರೆ ಕಳಸಿ ಕೊಡಕ್. ಅದ್ ಬೇಡಾಂತೇಳಿರೆ ಇದ್ಕೆ ಯಾರ್ ಇಸ್ಟನೋ ಅವ್ಕೆ ಇದರ ಮೊದ್ವೆ ಮಾಡಿ ಕೊಡಕ್. ಅದ್ ಬೇಡಾಂತೇಳ್ರೆ ಬೇರೆ ಯಾವ ಪರ್ಹ್ಯಾರದ ದಾರಿ ನಂಗೆ ಕಾಂಬೊದುಲ್ಲೆ."

ತುಂಬಾ ಏಚನೆಲಿ ಮುಣ್‌ಂಗಿದ ಅಂಬೆನೇ ಪರ್ಹ್ಯಾರದ ದಾರಿ ತೋರ್ಸಿತ್. "ನೀವು ಅದ್ಯಾವುದರನೂ ಮಾಡ್ದು ಬೇಡ. ಆಚಾರ್ಯರ್ ಕಾಶಿಗೆ ಬಾರದೆ ಇರ್ತಿದ್ದರೆ ನಾ ಸಾಲ್ವ

ಭೂಪತಿನ ಮೊದ್ವೆ ಆಗ್ತಿದ್ದೆ. ಆಚಾರ್ಯರ್ ಬ್ರಹ್ಮಚಾರಿಗಂತ ಸಾಲ್ವಂಗೆ ಗೊತ್ತಿರ್ದು. ಇಲ್ಲರೆ ಅಂವಂಗೆ ಇದರ ಹೇಳಿ ಒಪ್ಪುಸಕ್. ಆಗ ಅಂವ ನನ್ನ ಮೊದ್ವೆ ಆದು ಅಂವನ ಧರ್ಮ ಆದೆ. ಅಂವ ಪರಿಸ್ಥಿತಿನ ಅರ್ತ ಮಾಡಿಕಂಡ್ ನನ್ನ ಮೊದ್ವೆ ಆದೂಂತ ನಾ ನೆನ್ಸಿನೆ."

ಸತ್ಯವತಿದೇವಿಯೊವ್ಕೆ ಅಂಬೆನ ಮಾತ್‌ನ ಕೇಳಿ ತುಂಬಾ ಸೋಜಿಗ ಆತ್. "ಮಗಾ, ನೀ ಈ ಮಾತ್‌ನ ಹೇಳಿಕಾಕನ ಸಾಕಸ್ಟ್ ಏಚನೆ ಮಾಡ್ಯಳನೋ? ಭೀಷ್ಮನೊಟ್ಟಿಗೆ ಹಸ್ತಿನಾವತಿಗೆ ಬಂದ ನಿನ್ನ ಸಾಲ್ವ ಭೂಪತಿ ಅದ್ ಹೇಂಗೆ ಒಪ್ಪಿಕೊಂಬೊದು? ಈಗ ಬಂದ ಸಮಸ್ಯೆಗೆ ಪರ್ಯಾರಾಂತ ನೀ ನೆನ್ಸಿದ್, ಅದ್ ಇನ್ನೊಂದು ಸಮಸ್ಯೆನ ತಂದರೆ?"

ಅಂಬೆ ಹೇಳ್ತ್, "ಆಕಿಲ್ಲೇಂತ ನಾ ನೆನ್ಸಿನೆ. ಸಾಲ್ವಭೂಪತಿಗೂ ಅಪ್ಪ ಬಾಕೆ ಕಾಗ್ದ ಕಳ್ಸಿತ್ತ್. ಸೊಂಯಂವರದ ಹಿಂದೆನ ದಿನ ಅಂವ ಕಾಶಿಗೆ ಬಾತ್. ಕಾಶಿನ ಹೂತೋಟಲಿ ನಾ ಅಂವಂಗೆ ಕಾಂಬಕೆ ಸಿಕ್ಕಿದೆ. ನಾ ಒಪ್ಪಿರೆ ಅಲ್ಲಿಂದಳೇ ನನ್ನ ಸೌಭಕ್ಕೆ ಕರ್‍ಕೊಂಡೋಗಿ ಪಟ್ಟದರಾಣಿ ಆಗಿ ಮಾಡ್ನೇಂತ ಹೇಳ್ತ್. ನಿನ್ನ ಬಿರ್ಸತ್ತಿಗೆನ ನಾಳೆ ಸೊಂಯಂವರ ಮಂಟಮೆಲಿ ತೋರ್ಸ್‌ಂತ ಹೇಳಿ, ಅಂವನ ಮಾತ್‌ನ ಒಪ್ಪಿಕಂಡತ್ಲೆ. ಮೊರ್ದಿನ ಸೊಂಯಂವರ ಮಂಟಮೆಲಿ ಅಂವ ಎಲ್ಲರನ ಸೋಲ್ಸಿ ಗೆದ್ದ್ ಮೆರ್ದತ್. ಆಚಾರ್ಯರ್ ಬಾದು ಎರ್ಡ್ ನಿಮ್ಸ್ ಕಳ್ಯತಿದ್ದರೆ ನಾ ಅಂವನ ಕುತ್ತಿಗೆಗೆ ಮಾಲೆ ಹಾಕಿ ಬುಡ್ತಿದ್ದೆ. ಅಂವಂಗೆ ನನ್ನಲ್ಲಿ ಮೋಹ ಇಲ್ಲದಿರ್ತಿದ್ದರೆ ಹಿಂದೆನ ದಿನ ಹೂತೋಟಲಿ ಆ ಮಾತ್‌ಗಳ ಹೇಳ್ತಿತ್ಲೆ. ಒಮ್ಮೆ ಮೋಹ ಹುಟ್ರೆ ಅದ್ ಬೇಗ ಮಾಂಯ ಆಕಿಲ್ಲೆ".

ಅಂಬೆನ ವಾದ ಬಾಳ ಬಲ ಇಲ್ಲದ ಮಾತ್‌ಂತ ಭೀಷ್ಮರಿಗೆ ಆತ್. ಸಾಲ್ವ ಭೂಪತಿ ಅಂಬೆನ ಒಪ್ಪಿಕೊಂಬೊದೋ? ಒಮ್ಮೆ ಮಾತ್ರ ನೋಡಿ, ಮಾತಾಡ್ದ ಮಾತ್‌ಕತೆಗ ಮೋಹಾಂತ ಹೇಳಿಕಂಡ್ ನೆಂಪ್‌ಲಿ ಇಸಿಕಂಬಕೆ ಅಂವ ಏನ್ ಕವಿನೋ? ಇಲ್ಲರೆ ಚಿತ್ರ ಬುಡ್ಸೊಂವನೋ? ಅಂವ ಸಕ್ತಿನ ಪಂತ ಆಗಿ ತಕಂಡ ಒಬ್ಬ ರಾಜ. ಅಂವನ ಹುಟ್ಟುಕಾಡ್ ಮೊಂಯಿಂಸ ಆದರೂ, ಮಾಡ್ದ ಕೆಲ್ಸಂದ ಅಂವ ಕ್ಷತ್ರಿಯನೆ. ಸೊಂಯಂವರ ಮಂಟಮೆಂದ ಅಂವ ಸೋತ್ ಹೊರಗೆ ಹೋಕನ ಕೈಲಾಗದವನಾಂಗೆ ಅಂಬೆನ ಕಡೆಗೆ ಕರುಣೆನ ನೋಟಲಿ ನೋಡ್ದರ ಭೀಷ್ಮರಿಗೆ ನೆಂಪಾತ್. ಹಾಂಗೆ ಅಕೆರಿಗೆ ಬುಟ್ಟು ಹೋಗಂವ ನೋಡ್ದ ನೋಟದಾಂಗೆ ಇದ್ದ ಅಂವನ ಮೋರೆನೂ ನೆಂಪಾತ್. ಅಂತಂವ ಇದರ ಒಪ್ಪಿ ಕೊಂಬೊದೋ? ಒಂದು ಸಮಯ ಅಂವ ಒಪ್ಪಿಕಂಡರೆ ಹಸ್ತಿನಾವತಿನ ಒಂದು ದೊಡ್ಡ ತಲೆ ಬೇನೆ ನಿತ್ತಾಂಗಾತ್. ಇಲ್ಲರೆ ಸಮಸ್ಯೆಗ ಹೆಚ್ಚುವೆ. ಸೊಂಯಂವರ ಮಂಟಮೆಲಿ ಸೋತ ಸಾಲ್ವ ಭೂಪತಿ ಹಸ್ತಿನಾವತಿನ ಮಿತ್ರ ಆಗಿ ಒಳ್ಯಕೆ ಸಾದ್ಯನೇ ಇಲ್ಲೆ. ಅಂವ ಇದರ ಒಪ್ಪಿಕಂಡರೆ ಕಿಚ್ಚಿನೊಟ್ಟಿಗೆ ಗಾಳಿ ಸೇರಿದಾಂಗಾದೆ.

ಭೀಷ್ಮರಿಗೆ ತಾನ್ ತನ್ನ ದಾರಿಲೇ ಏಚನೆ ಮಾಡ್ದೇಂತ ತಿಳ್ಕಂಡೊ. ಸೊಂಯಂವರ ಮಂಟಮೆಲಿ ನಡ್ದದರ ಸಾಲ್ವ ಭೂಪತಿ ಮರ್‍ಯೋಕಾದೆ. ಅಲ್ಲಿ ಸಕ್ತಿನೇ ಪಂತ. ಆದರ್‌ಂದ ಅಂವ ಹಸ್ತಿನಾವತಿನ ಮೇಲೆ ಸೇಡ್ ತೀರ್ಸಿಕೊಂಬೊದು ನ್ಯಾಯ ಅಲ್ಲ. ಧರ್ಮನೂ ಅಲ್ಲ. ಸೋಲ್‌ನ ಮರ್‍ತ್ದ್, ಮೊನ್ಸ್‌ನ ಮರ್ಕಂದ, ಇಲ್ಲರೆ ಅಂವನಲ್ಲಿ ಅಣ್‌ಂಗಿದ

ಪ್ರೀತಿಂದ ಅಂವ ಅಂಬೆನ ಕರ್ಕಂಡರೆ ಅದ್ ಒಂದು ಅಂವನ ದೊಡ್ಡ ಗುಣ ಆದೆ. ಅಂತ ಉದಾರ ಮೊನ್ಸ್ ಅಂವಂಗಿರ್ಲಿ. ಈ ಅಂಬೆನ ಕಾಟ ಒಮ್ಮೆ ನಂಗೆ ತೊಪ್ಪಲಿ.

ಅಕೆರಿಗೆ ಭೀಷ್ಮರ್ ಹೇಳ್ದೊ. "ಅವ್ವಾ, ಅಂಬೆ ನಿನ್ನ ಇಸ್ಟ ಇದ್ದ ಹಾಂಗೆ ಆಗಲಿ. ನಿನ್ನ ಪ್ರಯತ್ನಲಿ ನಿಂಗೆ ಜಯ ಸಿಕ್ಕಲಿ. ನಿನ್ನ ಸಾಲ್ವ ಭೂಪತಿನ ಹಕ್ಕಲೆ ಕಳ್ಸಿ ಕೊಡಿಕೆ ಏರ್ಪಾಡ್ ಮಾಡ್ನೆ. ಸೊಯಂವರ ಮಂಟಮೆಲಿ ಅಂವ ಸೋತದರ್ಂದ ಅಂವಂಗೆ ನನ್ನ ಮೇಲೆ ಸಿಟ್ಟ್ ಇರ್ದು. ನಿನ್ನ ನಮ್ಮ ರಥ ಸೌಭದ ಗಡಿ ಮುಟ್ಟ ಕರ್ಕೊಂಡೋದೆ. ಇಂದ್‌ನ ಸ್ತಿತಿಲಿ ನಮ್ಮ ರಥ ಗಡಿ ದಾಟರೆ ಅಪಾಯ ಬಾದು. ನಿನ್ನಂದಾಗಿ ಅಂವನ ಸಿಟ್ಟ್ ತಣ್ಣಂಗಾಗಲಿ. ನಿನ್ನ ಒಟ್ಟಿಗೆ ವೇದ ಕಲ್ತ ಆಸ್ತಾನ ಪಂಡಿತರ ಒಬ್ಬರ ಕಳ್ಸಿ ಕೊಟ್ಟನೆ. ಚಿಂತೆ, ಭಯ ಇಲ್ಲದೆ ನೀ ಸಾಲ್ವ ಭೂಪತಿಯಲ್ಲಿಗೆ ಹೋಗು. ಅಂವ ನಿನ್ನ ಪ್ರೀತಿಂದ ಕರ್ಕಂಡ್ ಸೌಭ ದೇಶದ ಪಟ್ಟದ ರಾಣಿನ ಆಗಿ ಮಾಡಲಿ".

*****

## ಹೋಳು – 04

# ಕೂಸುನ ಬಲಿತಕಂಡತ್ ಆ ರಣಮಾರಿ

ಎದ್ರಿಕೆ ಆದುಲ್ಲೆ. ಎದ್ರಿಕೆ ಆಗದ್‌ಂತ ರಾಜ ಪಂಡಿತರ್ ಕಟ್ಟ್ ನಿಟ್ಟಾಗಿ ಹೇಳ್ಯೊಳೊ. ಇಸ್ಟ್ ದಿನ ಉಸಾರ್‌ಲಿ ಓಡಾಡಿಕಂಡಿದ್ದಂವ, ಹಾಂಗಾಕು, ಹಿಂಗಾಕೂಂತ ಹೇಳಿಕಂಡ್‌ದ್ ಕೆಲ್ಸನ ಮಾಡ್ಸಿಕಂಡಿದ್ದಂವ ಈಗ ಮಂಚಲಿ ಮೊಲ್ಗಿ ಏಚನೆ ಮಾಡಿಕಂಡ್ ಇರುವ ಹಾಂಗಾಗುಟ್ಟು. ಬಾಣ ಹೆಟ್ಟಿ ಎರ್ಡ್ ದಿನ ಕಳ್ತ್. ಆ ಬಾಗ ಕೊಳ್ಯಕೆ ಸುರಾಗುಟ್ಟು. ಇನ್ನ್ ರೇಸಿ ಮೆನಿ ಆದರೆ ಸುತ್ತೋಳೂ ಕೆಟ್ಟ ನಾತ ಹಬ್ಬುದು. ಅದರೆಲ್ಲಾ ಸೈಸಿಕಂಡಿರ್‌ದರ್‌ಂದ ಈ ಬಾಣನ ಎಳ್ದ್ ಬುಟ್ಟರೆ ಏನ್?

ಭೀಷ್ಮರ್ ಅವರಸ್ಟಕ್ಕೆ ಅವೇ ಪ್ರಸ್ನೆನ ಹಾಕೊಂಡೊ. ಬಾಣನ ಎಳ್ದ್ ತೆಗ್ದರೆ ಈ ನರ್ಕಂದ ಬುಡ್ಗಡೆ ಆದು. ಆದರೆ ಈ ಯುದ್ಧ ನಿಲ್ಲುದ್ಲೆ. ಸಾಯಕೆ ಮುಂದೆ ಯುದ್ಧ ನಿಲ್ಲಿಸಿಕಾದರೆ ಎಸ್ಟ್ ಒಳ್ಳೆದಿತ್ತ್? ಆಗ ತೃಪ್ತಿಂದ ಕಣ್ಣ್ ಮುಚ್ಚ್‌ತಿದ್ದೆ. ಹಾಸಿಗೆಲಿ ಮೊಲ್ಗಿ ಸಾಯ್ದುರನೇ ಕಾಯಕಾತ್. ದ್ರೋಣರ ಎಜಮಾನ್ಕೆಲಿ ಕಾಳಗ ನಡ್ದದೆ. ದ್ರೋಣರ್ ಕೌರವರ್‌ಂದಳೂ ಪಾಂಡವರ ಹೆಚ್ಚ್ ಹಚ್ಚಿಕೊಂಡೊವು. ಈಗ ಬೇರೆ ದಾರಿ ಇಲ್ಲದೆ ಪಾಂಡವರಿಗೆ ಎದ್ರ್ ನಿತ್ತೊಳೊ. ಅವರ ಮೊನ್ಸ್ ಹೇಂಗುಟ್ಟೋ?

ಭೀಷ್ಮರಿಗೆ ಗುರು ದ್ರೋಣರ್ ಹಸ್ತಿನಾವತಿಗೆ ಬಂದ ಸುರುನ ದಿನಗ ನೆಂಪಾದೊ. ನೋಡೋವ್ಕೆ ಅವು ಒಬ್ಬ ಹಾರಂವ. ಆದರೆ ಅವು ಯಾಗೋಳೂ ತಾನ್ ಹಾರವಾಂತ ಹೊರಗೆ ತೋರ್ಸಿಕಂಬತಿಲ್ಲೆ. ಹಾರೋವು ಮೇಲ್ಜಾತಿಯೋವೂಂತ ನೊಂಬುತಿಲ್ಲೆ. ಲೋಕಲಿ ಇರ್‍ದು ಎರ್ಡೇ ಜಾತಿ. ಒಂದು ದುಡ್ಡಿದ್ದವರ್ದ್, ಇನ್ನೊಂದು ಬಡವರ್ದ್ ಎಂತ ಬಯ ಇಲ್ಲದೆ ಹೇಳ್ತಿದ್ದೊ. ಅವರ ಬೊದ್‌ಕ್ ಅವ್ಕೆ ಕಲ್ಸಿದ ಪಾಟ ಅದ್.

ಪಾಂಚಾಲ ದೇಶದ ಅರ್‍ಸು ದ್ರುಪದ ಮತ್ತೆ ಇವು ಒಟ್ಟಿಗೆ ಕಲ್ತೋವು. ಓದಿಕಾಕನ ಅರ್‍ಸು ಮಂಙ ದ್ರುಪದ ಬಡ ಹಾರಂವರ ಹೈದ ದ್ರೋಣನ ಹಕ್ಕಲೆ ಏನೇನೋ ಆಸೆನ ತುಂಬಿಸಿತ್ತ್. ತಾನ್ ಅರ್ರೊತ್ತಿಗೆ ಪಡ್ದ ಮೇಲೆ ಪಾಂಚಾಲಕ್ಕೆ ಬಂದರೆ ದ್ರೋಣನ ಆಸ್ಥಾನದ ವಿದ್ವಾಂಸ ಆಗಿ ಕುಲ ಪುರೋಹಿತ ಆಗಿ ಮಾಡ್ನೇಂತ ಏನೇನೋ ಆಸೆನ ತುಂಬಿಸಿತ್. ಬಡ ಹಾರಂವ ದ್ರೋಣ, ದ್ರುಪದನ ಮಾತ್‌ನ ನೊಂಬಿತ್. ದ್ರುಪದ ಪಾಂಚಾಲ ದೇಶದ ರಾಜ ಆಕನ ತನ್ನ ಬಡತನ ಕಳ್ದ್ ಹೋತ್‌ಂತ ನೆನ್ಸಿತ್. ಪಾಂಚಾಲಕ್ಕೆ ಹೋಕನ ಅರ್ರೊತ್ತಿಗೆನ ಹಾಂಕಾರಂದ ದ್ರುಪದ ಇವರ ಗುರ್ತೇ ಇಲ್ಲದಂವನಾಂಗೆ ನಡ್ಕಂಡ್ ಇವ್ಕೆ ಅಪಮಾನ ಮಾಡ್ತ್. ಅಂದ್‌ಂದ ದ್ರೋಣರ್ ಹುಡ್ಕಿಕೆ ಸುರು ಮಾಡ್ದೊ ದ್ರುಪದನ ಸೋಲ್ಸುವ ಒಬ್ಬ ಸಕ್ತಿವೊಂತನ.

ಅವರ ಹಸ್ತಿನಾವತಿಗೆ ಬಾಕೆ ಮಾಡ್ದೇ ಈ ಹುಡ್ಕಾಟ. ಅದರ ಅವು ಒಂದು ಸಲನೂ ಹೇಳ್ತಿಲ್ಲೆ. ಅವರೊಟ್ಟಿಗೆ ಮಾತಾಡ್ದ ಸುರುನ ಮಾತ್‌ಕತೆಲಿ, ಅವರ ಮೇಲೆ ನಂಗೆ ಗೌರವ ಬಾತ್. ನೂರೊಂದು ಕೌರವರಿಗೆ, ಐದ್ ಜನ ಪಾಂಡೋವ್ಕೆ ಅವೇ ಬಿಲ್ಲ್ ವಿದ್ಯೆ ಕಲ್ಸಿಕೆ ಯೋಗ್ಯ ಗುರೂಂತ ನಾ ತೀರ್ಮಾನ ಮಾಡ್ದೆ, ಮೂರೇ ದಿನಲಿ ನನ್ನ ತೀರ್ಮಾನ ಸರಿಯಾಗುಟ್ಟು ಎಂತ ನಂಗೆ ಗೊತ್ತಾತ್. ಇದೆಲ್ಲಾ ಭೀಷ್ಮರಿಗೆ ನೆಂಪಾತ್. ದ್ರುಪದಂದಾದ ಅಪಮಾನನ ಒಮ್ಮೆ ಆದರ್ ಅವು ನನ್ನೊಟ್ಟಿಗೆ ಹೇಳ್ತಿದ್ದರೆ, ನಾ ಆಗಳೇ ದ್ರುಪದನ ಕರ್ಸಿ, ಅವರ ಕಾಲ್‌ಗೆ ಬೀಳ್ಸ್‌ತಿದ್ದೆ. ದ್ರೋಣರ್ ಅರ್ಜುನನಲ್ಲಿ ಎಲ್ಲರ್‍ನೂ ಮೀರ್ಸುವ ಸಾಮರ್ಥ್ಯ ಇರ್ದರ ಗುರ್ತಿಸಿ, ತಾವು ಕಲ್ತ ವಿದ್ಯೆ ಎಲ್ಲನನೂ ಅವಂಗೆ ಕಲ್ಸಿದೊ. ಹಟ ಹಿಡ್ದ್ ದ್ರುಪದನ ಮೇಲೆ ಸೇಡ್ ತೀರ್ಸಿಕೊಂಡೊ. ಆ ದ್ರುಪದನ ಮಂಜಂದಾಗಿ ಇಂದ್ ಸಾವುನ ಎದ್ರಿಸಿಕಂಡ್ ತಾನ್ ಮೊಲ್ಲುಗ್ವಂಗಾದೆ.

ಭೀಷ್ಮರಿಗೆ ಏಕಲವ್ಯನ ನೆಂಪಾತ್. ಕಾಡ್ ಮೊಂಯಿಂಸರ ಹೈದ ಬಿಲ್ಲ್ ವಿದ್ಯೆನ ಕಲ್ಯೋಕೂಂತ ದ್ರೋಣಾಚಾರ್ಯರ ಹುಡ್ಕಿಕಂಡ್ ಹಸ್ತಿನಾವತಿಗೆ ಬಂದುಟ್ಟು. ದ್ರೋಣರ್ ಅಂವಂಗೆ ಬಿಲ್ಲ್ ಬುಡ್ದರ ಕಲ್ಸಿಕೆ ಒಪ್ಪಿಕೊಂಡೊ. ಅವು ಯಾಗೋಳೂ ಜಾತಿ ಮೂಲನ ಕೆದ್ಕಿದೊವು ಅಲ್ಲ. ಜಾತಿ ಬೇದನ ಮಾಡ್ದೋವುನೂ ಅಲ್ಲ. ಒಳ್ಳ ಜಾತಿ, ಮೇಲ್ಜಾತೀಂತ ಹೇಳ್ದು ಎಲ್ಲಾ ಹುಚ್ಚು ತನಾಂತ ಹೇಳ್ತಿದ್ದೊ. ಎಲ್ಲೊವು ಕೂಡು ಜಾತಿಗಾಂತ ಧೈರ್ಯಲಿ ಹೇಳ್ತಿದ್ದೊ. ಕಾಡ್ ಮೊಂಯಿಂಸ ಹೈದಂಗೆ ಒಬ್ಬಂಗೆ ಬಿಲ್ಲ್ ಬಾಣ ಬುಡ್ದರ ಕಲ್ಸಿ ದೇಶಲೆಲ್ಲಾ ಬೆರ್ಗಾಗುವ ಹಾಂಗೆ ಮಾಡೊಕೂಂತ ಅವು ನೆನ್ಸಿಕೊಂಡಿದ್ದೊ. ಆದರೆ ಅರ್ಜುನ ಮಾತ್ರ ಇದರ್‌ಂದ ಹೊಟ್ಟೆ ಕಿಚ್ಚಿ ಪಟ್ಟತ್. ಅಂವ ಕಲ್ಯವ ರಬಸನ ನೋಡಿ ನನ್ನಂದ ಮುಂದೆ ಅಂವ ಹೋದೇಂತ ಅರ್ಜುನನ ಹೊಟ್ಟೆಲಿ ಕೆಸ ಕೊಯ್ದಾಂಗಾತ್. ಅದರ್‌ಂದಾಗಿ ಅರ್ಜುನ ಕಾಡ್ ಮೊಂಯಿಂಸರಿಗೆ ಬಿಲ್ಲ್ ವಿದ್ಯೆ ಕಲ್ಯವ ಹಕ್ಕ್ ಇಲ್ಲೇಂತ ದೊಡ್ಡ ಜಗಳ ತೆಗ್ತ್. ಕ್ಷತ್ರಿಯ ಬೀಜಕ್ಕೆ ಹುಟ್ಟದ ಅರ್ಜುನಂಗೂ ಬಿಲ್ಲ್ ವಿದ್ಯೆ ಕಲ್ಯವ ಹಕ್ಕಿಲ್ಲೇಂತ ದುರ್ಯೋಧನ ವಾದ ಮಾಡ್ತ್. ಅವರಿಬ್ಬರ ಚರ್ಚೆನ ತೀರ್ಮಾನ ಮಾಡಿಕೆ ಆಸ್ಥಾನದ ವಿದ್ವಾಂಸರ ಅಭಿಪ್ರಾಯ ಕೇಳುವ ಹಾಂಗಾತ್. ಇದ್ ದೊಡ್ಡ ಚರ್ಚೆಗೆ ಕಾರ್ಣ ಆತ್.

ಭೀಷ್ಮರಿಗೆ ಈ ವಾದ-ವಿವಾದಗಳ ನೆಂಪಾಗಿ ನೆಗೆ ಬಾತ್. ವಿದ್ವಾಂಸರಲ್ಲಿ ಕೆಲವು ಜನಗ ಹುಟ್ಟಿಕೆ ಅಪ್ಪನೇ ಕಾರ್ಣ ಅದರ್‌ಂದ ಅರ್ಜುನ ಕ್ಷತ್ರಿಯಾ ಅಲ್ಲಾ ಅಂತ ಹೇಳ್ದೊ. ಕೆಲವು ಜನ ಅಯ್ಯೆ ಇತ್ಲರೆ ಮಕ್ಕ ಹೇಂಗೆ ಹುಟ್ಟುವೆ. ಅಯ್ಯೆನೇ ಕಾರ್ಣಾಂತ ಹೇಳ್ದೊ. ಅರ್ಜುನನ ಅವ್ವ ಕುಂತಿದೇವಿ ಯದು ಕುಲಕ್ಕೆ ಸೇರ್ದವ್ಳು. ಅದ್ ಕ್ಷತ್ರಿಯ ಹೆಣ್ಣ್ ಅಲ್ಲ. ಅಪ್ಪನೂ, ಅವ್ವನೂ ಕ್ಷತ್ರಿಯ ಕುಲಕ್ಕೆ ಸೇರಿದೊವು ಅಲ್ಲದರ್‌ಂದ ಅರ್ಜುನ ಕ್ಷತ್ರಿಯ ಅಲ್ಲಾಂತ ಹೇಳ್ದೊ. ಕಾಡ್ ಮೊಂಯಿಂಸರ ಹೈದ ಏಕಲವ್ಯಂಗೇ ಬಿಲ್ಲು ವಿದ್ಯೆ ಕಲ್ಸಿಕಾಗದ್‌ಂತ ಎಲ್ಲಾ ವಿದ್ವಾಂಸರ್ ಒತ್ತಿ ಒತ್ತಿ ಹೇಳ್ದೊ. ಇದರೆಲ್ಲಾ ಕೇಳಿ ಕೇಳಿ ಪಾಪ ಏಕಲವ್ಯಂಗೆ ತನ್ನಂದಾಗಿ ಈ ಹಗರಣ, ನಾ ಇಲ್ಲಿ ಇರ್ದೇ ಇಲ್ಲೇಂತ ಬೇಜಾರ್‌ಂದ

ಅಲ್ಲಿಂದ ಹೊರ್ಪ್ಟ್ ಹೋತ್. ಹಸ್ತಿನಾವತಿನ ರಕ್ಷಣೆ ಮಾಡುವ ನಂಗೆ ಏಕಲವ್ಯಂಗೆ ಏನೂ ಮಾಡಿಕೆ ಆತ್ಲೇಂತ ಭೀಷ್ಮರ್ ಬೇಜಾರ ಮಾಡಿಕೊಂಡೊ.

ಆದರೆ ದ್ರೋಣರ್‌ಗೆ ಏಕಲವ್ಯನ ಮೇಲೆ ಬಾಳ ಪ್ರೀತಿ ಇತ್ತ್. ಇಸ್ಟ್ ಉಸಾರ್‌ನ ಹೈದಂಗೆ ನಾ ಬಿಲ್ಲ್ ವಿದ್ಯೆನ ಕಲ್ಸಿತ್ತರೆ ತೊಪ್ಪಾಕಿಲ್ಲೆನೋಂತ ಅವು ಏಚನೆ ಮಾಡಿ ಅಂವಂಗೆ ಗುಟ್ಟ್‌ಲಿ ಬಿಲ್ಲ್ ವಿದ್ಯೆನ ಕಲ್ಸ್‌ತಿದ್ದೊ. ಇದ್ ಭೀಷ್ಮರಿಗೂ ಗೊತ್ತಿತ್ತ್. ಅಕೆರಿಗೆ ಈ ಸುದ್ದಿ ಅರ್ಜುನಂಗೂ ಗೊತ್ತಾತ್ ಅಂವ ಇದರ ತಿಳ್ದ್‌ದ್ ಗಲಾಟೆ ಮಾಡ್ತ್. ಅಂವನ ಸುಮ್ಮನಿರ್ಸಿಕ್ಕಾಗಿ ದ್ರೋಣರ್ ಏಕಲವ್ಯನ ಹೆಬ್ಬೆರ್ಳ್‌ನ ಗುರುದಕ್ಷಿಣೆ ಆಗಿ ಪಡ್ದೊ. ಹಗೆ ತೀರ್ಸಂವ ಯೋಗ್ಯತೆಗಳ ಮರ‍್ಯಕಾದೆ. ದ್ರೋಣರ್ ದ್ರುಪದನ ಅರ್ಜುನಂದ ಸೋಲಿಸಿ ಹಗೆ ತೀರ್ಸಿಕಂಡೊ. ಆ ಏಕಲವ್ಯ ಈಗ ಕೌರವರ ಪಾಳ್ಯಲಿ ಉಟ್ಟು. ಗುರು ದ್ರೋಣರ ಮುಂದಾಳ್ತನಲಿ ಅರ್ಜುನನ ಎದ್ರ್ ನಿತ್ತ್ ಸೇಡ್ ತೀರ್ಸಿಕೆ ಕಾದ್‌ಕೊಂಡುಟ್ಟು.

ಭೀಷ್ಮರಿಗೆ ದ್ರೋಣರ ಮೇಲೆ ಪ್ರೀತಿ ಇತ್ತ್. ದ್ರೋಣರ್ ಯಾಗೋಳೂ ಮೋರೆಗೆ ತಕ್ಕ ಹಾಂಗೆ ಮಾತಾಡ್ತಿತ್ತೆ. "ಜ್ಞಾನ ಇದ್ದೋವು ಮಾತ್ರ ಬ್ರಾಂಬರ್. ನಾ ಬಿಲ್ಲ್ ವಿದ್ಯೆಲಿ ಪಳ್ಗಿದಂವ ಆದರೂ ನಿಮ್ಮಸ್ಟ್ ಜ್ಞಾನಿ ಅಲ್ಲ. ನಿಮ್ಮ ಬುದ್ಧಿವಂತಿಕೆನ ಎಳ್ಳ್‌ನ ಏಳ್ ಭಾಗದಷ್ಟ್‌ನೂ ನನ್ನಲ್ಲಿಲ್ಲೆ. ಬುದ್ಧಿವೊಂತರ್ ಮಾತ್ರ ಕಾಲ್‌ಮುಟ್ಟಿ ನಮಸ್ಕಾರ ಮಾಡಿಕೆ ಸರಿಯಾದೊವು."–ಎಂತ ದ್ರೋಣರ್ ಎಸ್ಟೋ ಸಲ ಭೀಷ್ಮರೊಟ್ಟಿಗೆ ಹೇಳ್ತಿದ್ದೊ. ಮೊನ್ನೆ ಅವರ ಸೇನೆನ ಯೆಜಮಾನಿಕೆ ಮಾಡಿಕಾಕನ ಅವು ನನ್ನ ಕಾಲ್ ಹಿಡ್ದ್ ನಮಸ್ಕಾರ ಮಾಡಿಯೇ ಬುಟ್ಟೊ. ತನ್ನ ಜಾತಿನೇ ಮೇಲೇಂತೇಳ್ವ ಯಾವ ಬ್ರಾಂಬರ್, ಬ್ರಾಂಬರ್ ಅಲ್ಲದವರ ಕಾಲ್ ಮುಟ್ಟಿ ನಮಸ್ಕಾರ ಮಾಡಿವೆ? ದ್ರೋಣರ್ಲಿ ನಾ ಕಂಡ ದೋಸ ಒಂದೇ. ದ್ರುಪದಂದ ಆದ ಅಪಮಾನನ ಮರಿಯಕಾಗದೇ ಇದ್ದದ್. ಮಾಪು ಮಾಡ್ದು ಎಲ್ಲದರ್‌ಂದ ದೊಡ್ಡ ಗುಣ. ಹಸ್ತಿನಾವತಿನ ರಾಜಗುರುಗ ಆಗಿ ದ್ರೋಣರ್ ದ್ರುಪದನ ಮಾಪು ಮಾಡಕಾಗಿತ್ತ್. ದ್ರುಪದನ ಮಗಳ್ ದ್ರೌಪದಿನ ಸೆರಂಗ್‌ಗೆ ದುಶ್ಯಾಸನ ಕೈ ಹಾಕಿ ಎಳ್ದದಕ್ಕೆ ಕುರುಕ್ಷೇತ್ರ ಕಾಳಗ ನಡ್ಕಂಡ್ ಉಟ್ಟು. ದ್ರುಪದನ ಮಂಜ ಶಿಖಂಡಿ, ಯಾರ್‌ಂದಲೂ ಸೋಲ್ಸಿಕಾಗದಂವಾಂತ ಹೆಸ್ರ್ ಪಡ್ಡ ನನ್ನನ ಮಂಚಂದ ಏಳದಾಂಗೆ ಮಾಡ್ತ್. ಇನ್ನೊಬ್ಬ ಉಟ್ಟು ಪಾಂಡವ ಸೇನೆನ ಎಜಮಾನ ದೃಷ್ಟದ್ಯುಮ್ನ, ಅಂವ ಅದೇನ್ ಮಾಡಿ ಬುಟ್ಟದೆನೋ?

ದ್ರೋಣರ್ ತಮ್ಮ ಮಂಜ ಅಶ್ವತ್ಥಾಮಂದಲೂ ಹೆಚ್ಚ್ ಅರ್ಜುನನ ಪ್ರೀತಿಸಿದೊ. ಗುರು ಪರಶುರಾಮರ್‌ಂದ ಕಲ್ತದರ ಎಲ್ಲದರನೂ ಅಂವಂಗೆ ದಾರೆ ಎರ್ದೊ. ಅರ್ಜುನ ಇಡೀ ದೇಸನ ಸುತ್ತಿದ್ ಲೋಕಜ್ಞಾನನ ಹೆಚ್ಚಿಸಿಕಂಡತ್, ತುಂಬಾ ತುಂಬಾ ಶಸ್ತ್ರವಿದ್ಯೆನ ಪಟ್ಟ್‌ಗಳ ಕೈವಸ ಮಾಡಿಕಂಡತ್. ಈಗ ಅಂವನ ಸೋಲ್ಸೋವು ಯಾರ್ ಒಳೊ?

ಕೌರವ, ಪಾಂಡವರ ಶಸ್ತ್ರ ವಿದ್ಯೆ ಮುಗ್ದ ದಿನ ಎಲ್ಲರ ಸಾಮರ್ತ್ಯನ ಪರೀಕ್ಷೆ ಮಾಡಿಕೆ ಗುರುದ್ರೋಣರ್ ಒಂದು ಪರೀಕ್ಷೆ ಮಾಡ್ದೊ. ಭೀಮ ಗದಾಯುದ್ದಲಿ ಬಿರ್ಸಾಂತ ಹೇಳ್ಸಿಕಂಡತ್. ಅರ್ಜುನ ಬಿಲ್ಲ್ ವಿದ್ಯೆಲಿ ಮೆರ್ದತ್. ಆಗ ಎಲ್ಲಿತ್ತೋ? ಅಂವ, ಆ ಕರ್ಣ

ಸ್ಪರ್ದೆ ನಡ್ಯೆವ ಜಾಗೆಗೆ ಬಾತ್. ತನ್ನನ ಸೋಲ್ಸುಂತ ಪಂತ ಒಡ್ಡಿತ್. ತಾನ್ ಪರಶುರಾಮರ ಶಿಷ್ಯಾಂತ ಪರ್ಚಯ ಮಾಡಿಕಂಡತ್. ತನ್ನಂದ ದೊಡ್ಡಂವ, ತುಂಬಾ ಪರಾಕ್ರಮಿನಾಂಗೆ ಕಾಂಬ ಕರ್ಣನ ನೋಡಿ ಅರ್ಜುನನ ಮೊನ್ಸ್‌ಲಿ ಅಳ್‌ಕ್ ಹುಟ್ಟಿತ್. ಆಗ ಕರ್ಣನ ಜಾತಿ, ಬೊಳಿಗಳ ಇಚಾರ್ಸಿದ್ ದ್ರೋಣರ ಬಾವ ಕೃಪಾಚಾರ್ಯರ್. ಹಸ್ತಿನಾವತಿನ ಸೂತ ಅಧೀರಥನ ಸಾಕ್‌ಮಂಜ ಎಂತ ಅಂವ ಹೇಳಿಕನ ಕರ್ಣ ಪೆಂಗನಾಂಗೆ ಆತ್. "ಧೃತರಾಷ್ಟ್ರ ದೊರೆನ ಸೂತನ ಮಂಜನೊಟ್ಟಿಗೆ ಕ್ಷತ್ರಿಯ ಮಂಜ ಆದ ನಾ ಕಾದಾಡಿಕಿಲ್ಲೆ"– ಎಂತ ಅರ್ಜುನ ಹೇಳಿ ತಾನ್ ಸೋಲುದರ ತೊಪ್ಪಿಸಿಕಂಡತ್. ಅರ್ಜುನನ ಸೊಕ್ಕುನ ಮುರ್‍ಯಕೆ ಕಾದ್‌ಕಂಡಿದ್ದ ದುರ್ಯೋಧನ ಕರ್ಣನ ಸಮದಾನ ಮಾಡಿ ಅಂವಂಗೆ ಅಂಗದೇಸದ ಅರಸೊತ್ತಿಗೆನ ಕೊಟ್ಟ್ ಅಂವಂಗೆ ಕ್ಷತ್ರಿಯತನನ ಕೊಟ್ಟ್ ಕಾಪಾಡ್ತ್. ಆದರೆ ದೊಡ್ಡ ಜಾಣನಾದ ಅರ್ಜುನ, ಏಕಲವ್ಯನ ಪ್ರಕರಣೆನ ಉದಾರ್ಣೆ ಕೊಟ್ಟ್‌ದ್, ಬೀಜ–ಕ್ಷೇತ್ರವಾದನ ಮುಂದೆ ಇಸಿ ಕರ್ಣನ ಕ್ಷತ್ರಿಯಾಂತ ಒಪ್ಪಿ ಕಂಬಕೆ ಆದುಲ್ಲೇಂತ ಹೇಳ್ತ್. ಕೃಪಾಚಾರ್ಯರ್ ಅರ್ಜುನನ ಕಡೆನಿತ್ತ್‌ದ್ ವಾದ ಮಾಡ್ದೊ. ಯಾರೂನೂ ಅರ್ಜುನಂಗೆ ಎದ್‌ರ್ ಹೇಳ್ತ್‌ಲ್ಲೆ. ಕರ್ಣ ಯಾರ್‌ಂತ ಈಗಳೂ ಅರ್ಜುನಂಗೆ ಗೊತ್ತಿಲ್ಲೆ.

ಅದೇ ಅರ್ಜುನ ಗುರುದ್ರೋಣರ ಹೇಳಿಕೆನಾಂಗೆ ಹಸ್ತಿನಾವತಿನ ನೂರಐದ್ ರಾಜಕುಮಾರರ ಎಜಮಾನ್ಕೆ ಹೊತ್ತ್‌ಕಂಡ್ ಪಾಂಚಾಲ ದೇಸಕ್ಕೆ ಒಮ್ಮಿಂದೊಮ್ಮೆಗೇ ನುಗ್ಗಿ, ಕಾವಲ್ ಬಟರ ಹೊಡ್ದ್, ದ್ರುಪದನ ಹೆಡೆಮುಡಿ ಕಟ್ಟಿ ತಂದ್ ಗುರುಗಳ ಪಾದಕ್ಕೆ ಬೀಳ್ಸಿತ್. ಬಡತನದ ಕಾರ್ಣಕ್ಕಾಗಿ ಹಿಂದೆ ದ್ರುಪದಂದ ಅಪಮಾನ ಹೊಂದಿದ ದ್ರೋಣರ್ ಅಂವನ ತಾರಾಮಾರ ಬೊಯ್ದೊ. ಎಡ್ದ ಕಾಲ್‌ಂದ ಅಂವನ ಕುಂಡೆಗೆ ಮೆಟ್ಟಿ ದೂಡಿ, ಹಿಂದೆ ತಾವುಗೆ ಆದ ಅಪಮಾನಕ್ಕೆ ಹಗೆ ತೀರ್ಸಿಕಂಡೊ. ಪಾಂಚಾಲ ದೇಸನ ಎರ್ಡ್ ಬಾಗ ಮಾಡಿ ಒಂದರ ಹಸ್ತಿನಾವತಿಗೆ ಸೇರ್ಸಿ, ದ್ರುಪದನ ಬುಡ್ಗಡೆ ಮಾಡಿ ಕಳ್ಸಿದೊ. ಅಂತಾ ಅಪಮಾನನ ಯಾರುನೂ ಮರ್‍ಯಕಿಲ್ಲೆ. ದ್ರುಪದ ತನ್ನ ಮಕ್ಕಳೊಟ್ಟಿಗೆ ಹಸ್ತಿನಾವತಿನ ಮೇಲೆ ದ್ವೇಶ ಬಾವ ಹಾಂಗೆ ಮಾಡಿರೊಕು. ಶಿಖಂಡಿನ ಇದಕೇಂತಳೇ ನನ್ನ ಎದ್ರ್ ಕಳ್ಸಿರೊಕು. ಅಂವನ ಮೊನ್ಸ್‌ನೊಳಗೆನ ಈ ವಿಸಯ ಪಾಂಡೋವ್ಕೆ ತಿಳ್ದಿರಿಕಿಲ್ಲೆ. ಇದೆಲ್ಲಾ ದ್ರುಪದನ ಕೆಲ್ಸ. ಆದರುನೂ ಭೀಷ್ಮರಿಗೆ ಮೊನ್ಸ್‌ನೊಳಗೆ ಒಂದ್ ಸಂಸಯ ಹುಟ್ಟಿಕಂಡಿತ್ತ್. ಅಂಬೆನೇ ಸಿಖಂಡಿ ಆಗಿ ಹುಟ್ಟಿ ಬಂದತಾ? "ಗಂಡೂ ಅಲ್ಲದ ಹೆಣ್ಣೂ ಅಲ್ಲದ ಜೂವ ಆಗಿ ಹುಟ್ಟಿ ನಿನ್ನ ಕೊಂದನೆ...!"

ಭೀಷ್ಮರ್ ಒಂದು ಮಗ್ಗ್‌ಲ್‌ಂದ ಇನ್ನೊಂದ್ ಮಗ್ಗ್‌ಲ್‌ಗೆ ಹೊಣ್ಕಿ ಮೊಲ್ಗಿದೊ. ಹತ್ತ್ ದಿನ ಕುರುಸೇನೆನ ಮುಂದಾಳಾಗಿ ಕಾಳಗ ಮಾಡ್ದೆ. ಏನ್ ಪ್ರೋಜನ? ಒಬ್ಬ ಪಾಂಡವನ ಕೂಡಾ ಹೊಡ್ದ್ ಮೊಲ್ಗಿಸಿಕೆ ಆತ್ಲೆ, ನಾ ಎತ್ತಿ ಆಡ್ಸಿದ ಮಕ್ಕಳನಾ ಹೇಂಗೆ ಹೊಡ್ದ್‌ದ್ ಮೊಲ್ಗ್‌ಸಲಿ? ಪಾಂಡುರಾಜನ ಅಪ್ಪಾಂತೇಳಿ ತಿಳ್ದ್‌ದ್ ಬೆಳ್ದೊವು. ಸತ್ಯವತಿದೇವಿಯೊವು ಮೊದ್ವೆಗೆ ಮುಂದನೇ ಪರಾಶರ ಮುನಿಗಳ್‌ಂದ ದ್ವೈಪಾಯನರ ಪಡ್ದೋವು. ವಿಚಿತ್ರವೀರ್ಯ ಕಾಯ್ಲೆಂದ ಸತ್ತ ಮೇಲೆ ಸತ್ಯವತಿದೇವಿಯವರ ಅಪ್ಪಣೆನ

ಹಾಂಗೆ ನಿಯೋಗ ಧರ್ಮಲಿ ದ್ವೈಪಾಯನರ್‌ಂದ ಅಂಬಿಕೆ, ಅಂಬಾಲಿಕೆಗೆ ಗಬ್ಬ ನಿಲ್ಲುವಾಂಗೆ ಮಾಡ್ದೊ. ಅಂಬಿಕೆನ ಹೊಟ್ಟೆಲಿ ದೃತರಾಷ್ಟ್ರ ಹುಟ್ಟಿತ್. ಅಂವ ಹುಟ್ಟಿಕಾಕನನೇ ಕಣ್ಣ್ ಕಾಣದಂವ. ಅಂಬಾಲಿಕೆ ಪಾಂಡುನ ಹೆತ್ತತ್, ಅಂವ ಹುಟ್ಟುಕನನೇ ಕಾಯ್ಲೆಸ್ತ. ಕೌರವರ್ ದೃತರಾಷ್ಟ್ರನ ಮಕ್ಕ. ಆದರೆ ಪಾಂಡವರ್ ಪಾಂಡುನ ಮಕ್ಕ ಅಲ್ಲ. ಪಾಂಡುನ ಒಪ್ಪಿಗೆಂದಳೇ ಕುಂತಿ ಯುಧಿಷ್ಟಿರ, ಭೀಮ, ಅರ್ಜುನ, ಮಾದ್ರಿ ನಕುಲ, ಸಹದೇವರ ಪಡ್ಡದ್. ಆದರೆ ದುರ್ಯೋಧನ ಪಾಂಡೊವು ಹುಟ್ಟಿದ್ ಧರ್ಮಕ್ಕೆ ವಿರೋದಾಂತ ಎಲ್ಲಿ ಬೇಕೋ ಅಲ್ಲಿ ಹೇಳಿ ಕಂಡೇ ಬಂದದೆ. ಸೂತನ ಮಂಜಂತ ಹೇಳಿಕಂಡ ಕರ್ಣಂಗೆ ದುರ್ಯೋಧನ ಅಂಗ ದೇಶದ ರಾಜನ ಪಟ್ಟ ಕಟ್ಟಿತ್. ಪಾಂಡೋವ್ಕೆ ಸೂಜಿ ಮೊನೆ ಊರುವಸ್ಟ್ ಜಾಗೆನನೂ ಕೊಡಿಕಿಲ್ಲೇಂತ ಹೇಳ್ತ್. ತಾನ್ ಸಾಯ್ದೂ ಅಲ್ಲದೆ ಕುರು ಸಾಮ್ರಾಜ್ಯ ಅಳ್ಯಕೆ ಕಾರ್ಣ ಆದೆ.

ದುರ್ಯೋಧನನ ಪಾಂಡವರ ಹಗೆತನಕ್ಕೆ ಅವರ ಹುಟ್ಟು ಕಾರಣ ಆಗಿರಿಕಿಲ್ಲೇಂತ ಭೀಷ್ಮರ್ ಎಸ್ಟೋ ಸರ್ತಿ ಬಿಚನೆ ಮಾಡ್ತಿದ್ದೊ. ಗಂಗಾದೇವಿ, ಸತ್ಯವತಿದೇವಿ, ದ್ವೈಪಾಯನರ್ ಇವು ಯಾರ್‌ನೂ ಕ್ಷತ್ರಿಯರ್ ಅಲ್ಲ. ಬಿತ್ತ್ ಮತ್ತೆ ಬೂಮಿನ ತತ್ವಕ್ಕೆ ಇಲ್ಲಿ ಬೆಲೆ ಇಲ್ಲೆ. ಹಾಂಗಿರಿಕನನೂ ದುರ್ಯೋಧನ ಪಾಂಡವರ ಅಷ್ಟೊಂದು ಹಗೆಲಿ ಕಾಣೋಕಾದರೆ ಅದಕ್ಕೆ ಯುಧಿಷ್ಠಿರಂಗೆ ಯುವರಾಜ ಪಟ್ಟ ಕಟ್ಟಿದ್ ಕಾರಣ ಆಗಿರೋಕು. ಕುರು, ಪಾಂಡವರಲ್ಲಿ ಹಿರ್‍ಯ ಮೊಂಯಿಂಸ ಆದ ಯುಧಿಷ್ಠಿರನ ಯುವರಾಜಾಂತ ಧೃತರಾಷ್ಟ್ರ ಒತ್ತಾಯಲಿ ಒಪ್ಪಿಕಂಡತ್. ದೃತರಾಷ್ಟ್ರ ಸತ್ತ ಮೇಲೆ ಯುಧಿಷ್ಠಿರ ಕುರು ಸಾಮ್ರಾಜ್ಯದ ಸಾಮ್ರಾಟ ಆದೆ. ಅದಕ್ಕೆ ಯುದ್ದಲಿ ಪಾಂಡವರ ಮುಗ್ಸಿಕೆ ನೋಡ್ದೆ.

ಈ ಯುದ್ಧ ಮುಗ್ಯಕಾದರೆ ದುರ್ಯೋದನ ಸಾಯೋಕು. ಪಾಂಡವರ್ಲಿ ಒಬ್ಬ ಸತ್ತರೂ ಯುದ್ದ ಮುಂದರ್‍ಸುದಿಲ್ಲೇಂತ ಯುಧಿಷ್ಠಿರ ಯುದ್ಧ ಸುರಾಕನನೇ ಹೇಳಿಟ್ಟು. ಆದರೆ ಪಾಂಡವರ್ಲಿ ಯಾರ ಕೊಲ್ಲುದು? ಯುಧಿಷ್ಠಿರ, ನಕುಲ, ಸಹದೇವರ ಕೊಲ್ಲಿಕೆ ದುರ್ಯೋಧನಂಗೆ ಮೊನ್ಸ್ ಬಾಕಿಲ್ಲೆ. ಗುರು ದ್ರೋಣರ್ ಅವರ ಕೊಲ್ಲುವೊನೋ? ಕರ್ಣಂಗೆ ತನ್ನ ಹುಟ್ಟ್‌ನ ಗುಟ್ಟು ಗೊತ್ತಾದ ಮೇಲೆ ಅಂವ ಹಲ್ಲ್ ಕಿತ್ತ ಹಾವುನಾಂಗೆ ಆಗುಟ್ಟು. ಇನ್ನ್ ಭೀಮ, ಅರ್ಜುನರ ಕೊಲ್ಲಿಕೆ ಯಾರ್‌ಂದ ಆದು? ನನ್ನ ಹಾಂಗೆ ದ್ರೋಣರ್ ಒಂದು ಹಂಞ ದಿನ ಕಳ್ಯಕೆ ಯುದ್ಧ ಮಾಡುವೊ. ಈ ಯುದ್ಧಕ್ಕೆ ಯಾವ ಅರ್ತನೂ ಇಲ್ಲೆ.

ತಾನ್ ಮೊಲ್ಗಿದ ಮನೆನ ಎದ್ರ್ ಬಾಕಿಲ್‌ಲಿ ಹೆಜ್ಜೆನ ಸಬ್ದ ಕೇಳ್ಸಿತ್. ಗುರು ದ್ರೋಣರ್ ದುರ್ಯೋದನನ ಒಟ್ಟಿಗೆ ಒಳಗೆ ಬಂದೊ. ಇಬ್ಬರ ಮೋರೆನೂ ಚಪ್ಪೆ ಆಗಿತ್ತ್. ಇದರ ಅರ್ತ ಏನ್? ದ್ರೋಣರ್ ಸೋತೋದೋನೋ? ಇವರ ಸೋಲ್ಸಂವ ಪಾಂಡವರ ಸೈನ್ಯಲಿ ಇರಂವ ಒಬ್ಬನೆ. ಅಂವ ಅರ್ಜುನ. ಮುದಿ ಗುರುಗೆ ಹೊಂತಗಾರ ಶಿಷ್ಯ ತಿರ್‍ಗಿ ನಿತ್ತತೆ?

ಬಂದೊವು ಮಂಚದ ಎದ್ರಿಗೆ ಇಸಿದ ಕುದ್ರುವ ಪೀಟದ ಮೇಲೆ ಕುದ್ದೊ. ಹಂಞ

ಹೊತ್ತು ಯಾರ್‌ನೂ ಮಾತಾಡ್ತ್‌ಲ್ಲೆ. ಅಕೆರಿಗೆ ದ್ರೋಣರೇ ತಲೆ ಬೊಗ್ಗಿಸಿ ಕಂಡ್‌ದ್ ಹೇಳ್ದೊ. 'ಆಚಾರ್ಯರೇ ಹೇಂಗೆ ಹೇಳೋಕೂಂತ ಗೊತ್ತಾದ್ಲೆ. ಇಂದ್ ಅಭಿಮನ್ಯುನ ಕೊಂದು ಬುಟ್ಟೊ.'

ಭೀಷ್ಮರ್‌ಗೆ ಸಿಡ್ಲ್ ಬೊಡ್ದಾಂಗಾತ್. ಅವ್ಕೆ ಇದರ ನೊಂಬಿಕೆನೇ ಆತ್ಲೆ. ಅವರ ಕಣ್ಣ್‌ನ ರೆಪ್ಪೆಗ ಪಟಪಟಾಂತ ಬೊಡ್ತ್‌ಕಂಡತ್. ಮಾತಾಡಿಕೆ ಗಂಟ್ಲ್ ಕಟ್ಟಿದಂಗಾತ್. ಎದೆ ಬಡ್ತ ಜೋರಾತ್. ಎದೆಗೆ ಹೆಟ್ಟಿದ ಬಾಣ ಜೋರ್‌ಲಿ ಕುತ್ತಿದಂಗಾತ್. ತುಂಬಾ ಬೇನೆಂದ ಅವು ಹೇಳ್ದೊ. "ನೀವು ಹೇಳ್ದು ನಿಜನೋ ಗುರುಗಳೇ? ಭೀಮಾರ್ಜುನರ್ ಬೊದ್ಕಿರಿಕಾಕನ ಅಭಿಮನ್ಯುನ ಕೊಂದೋಂತೇಳ್ರೆ ಇದ್ ನೊಂಬುವ ಮಾತ್‌ನೋ?"

ದ್ರೋಣರ್ ತಲೆ ಎತ್ತಿ ಹೇಳ್ದೊ "ಆಚಾರ್ಯರೇ ನಾ ಹೇಳ್ದು ನಿಜದ ಮಾತ್‌ನೇ. ಪಾಂಡವರ್‌ಲ್ಲಿ ಯಾರಾದರೊಬ್ಬನ ಕೊಂದ್‌ದ್ ಈ ಯುದ್ಧನ ಮುಗ್ಸೊಕೂಂತ ದುರ್ಯೋಧನ ಅಪ್ಪಣೆ ಮಾಡಿತ್ತ್. ಕೃಷ್ಣಾರ್ಜುನರ್ ರಣರಂಗಕ್ಕೆ ಬಾತ್ಲರೆ ಆ ಪ್ರಯುತ್ನ ಮಾಡಕ್‌ಂತ ನಾ ಹೇಳ್ದೆ. ದುರ್ಯೋಧನನ ಹೇಳಿಕೆನಾಂಗೆ ತ್ರಿಗರ್ತದ ಮಹಾರಾಜಾ ಸಂಶಪ್ತಕ ತನ್ನ ತಮ್ಮಂದರೊಟ್ಟಿಗೆ ಕುರುಕ್ಷೇತ್ರದ ಹೊರಗೆ ನಿತ್ತ್‌ದ್. ಅಲ್ಲಿಗೆ ಯುದ್ಧಕ್ಕೆ ಬರುವಾ ಹಾಂಗೆ ಕೃಷ್ಣಾರ್ಜುನರ ಕರ್ದತ್. ಅವು ಕುರುಕ್ಷೇತ್ರಂದ ದೂರಾದ ಮೇಲೆ ನಾ ಚಕ್ರಾಕಾರಲಿ ಒಂದು ಕೋಟೆನ ಕಟ್ಟಿಸಿದೆ. ಒಮ್ಮೆ ಒಳಗೆ ಹೋದರೆ ಅದರ್‌ಂದ ಹೊರಗೆ ಬಾಕೆ ಆಗದಾಂಗೆ ಆ ಚಕ್ರವ್ಯೂಹ ಕೋಟೆ ಇತ್ತ್. ಕೋಟೆನ ಮುಂದೆನ ಬಾಕಿಲ್‌ಲಿ ಸಿಂಧೂ ದೇಸದ ರಾಜ ಜಯದ್ರಥ ಮತ್ತೆ ಅಂವನ ಇಪ್ಪತ್ತ್ ಸೋದರರ ನಿಲ್ಸಿದೆ. ಒಳಗೆ ಉರುಂಟುಲಿ ದುರ್ಯೋಧನ, ಕರ್ಣ ದುಶ್ಯಾಸನ ಮತ್ತೆ ಅಂವನ ಮಕ್ಕಳ ಯುದ್ಧಕ್ಕೆ ತಯಾರಾದ ರೀತಿಲಿ ನಿಲ್ಲಿಸಿದೆ. ಅದೇಕೋ ಇಂದ್ ಪಾಂಡವೋವ್ಕೆ ಜಯದ್ರಥನ ಮತ್ತೆ ಅಂವನ ಸಕ್ತಿವೊಂತ ಸೋದರರ ಸೋಲ್ಸಿ ಒಳಗೆ ಬಾಕೆ ಆತ್ಲೆ. ಆಗ ಗಲಿಬಿಲಿಲಿ ಅಭಿಮನ್ಯು ಅದೇಂಗೋ ನುಣ್ಚಿಕಂಡ್ ರಥನ ಒಳಗೆ ನುಗ್ಗಿಸಿ ಬುಟ್ಟತ್. ಒಳಗೆ ನಡ್ದ ಕೂಟ ಯುದ್ಧಲಿ ಅಂವನ ಕೊಂದ್ ಬುಟ್ಟೊ."

ಭೀಷ್ಮರಿಗೆ ತುಂಬಾ ಬೇನೆ ಆತ್. ಎದೆ ಬೇನೆಂದಳೂ ಮೊನ್ಸ್‌ಗೆ ತುಂಬಾ ಬೇನೆ ಆಗಿತ್ತ್. ಅಭಿಮನ್ಯುನ ಸಣ್ಣದರ್‌ಂದಳೇ ನೋಡ್ದೊವು ಅವು. ಅಂವನಲ್ಲಿ ಕುರು ಸಾಮ್ರಾಜ್ಯದ ಚಕ್ರವರ್ತಿ ಆಗುವ ಎಲ್ಲಾ ಲಕ್ಷಣಗ ಇದ್ದೊ. ಹತ್ತ್ ದಿನಗಳ ಯುದ್ಧಲಿ ಒಂದ್ ಸಲ ಅಂವ ಎದ್ರಾಗಿತ್ತ್. ಅಂವ ಕೃಷ್ಣನ ತಂಗೆ ಸುಭದ್ರೆಯ ಹೊಟ್ಟೆಲಿ ಅರ್ಜುನಂಗೆ ಹುಟ್ಟಿದಂವ. ಅಭಿಮನ್ಯುನ ಓಡಾಟ, ಬಾಣ ಪ್ರಯೋಗ ಮಾಡ್ವ ರೀತಿ ನೀತಿಗೆ ಯಾರಾದರುನೂ ಬೆರ್ಗ್ ಆಕೇ ಆಕು. ಅಂವನಲ್ಲಿ ಜವ್ವಣಿಕೆ ಇತ್ತ್, ಹುರ್ಪು ಇತ್ತ್. ಆದರೆ ಯುದ್ಧರಂಗದ ಅನ್ಬವ ಇತ್ಲೆ. ಅಂವನ ಸೋಲ್ಸಿಕೆ ಭೀಷ್ಮರ್ ತಮ್ಮ ಎಲ್ಲಾ ಅನ್ಬವನ ಬಳ್ಸಕಾತ್. ಸೋತರೂ ಅಂವ  ನೆಗಾಡ್ತಿತ್. ಇನ್ನೊಮ್ಮೆ ಎದ್ರಾಕನ ನಿಮ್ಮ ನಾ ಗೆದ್ದೇ ಗೆಲ್ಲುಂವೇಂತ ಹೇಳ್ವ ಆತ್ಮ ವಿಸ್ವಾಸದ ನೆಗೆ ಅದ್. ಸಿಕಂಡಿನ ಬಾಣ ಎದೆಗೆ ಹೆಟ್ಟಿದ ದಿನನೇ ಯುದ್ಧ ನಿತ್ತ್ ಬುಡ್ತಿದ್ದರೆ ಅಭಿಮನ್ಯು ಬೊದ್ಕಿಕಂಬತಿತ್ತ್. ಇಂವನ ಕೊಂದದರ್‌ಂದ ಕುರು ಸಾಮ್ರಾಜ್ಯದ ಭವಿಷ್ಯ

ಮಸ್ಕಾತ್. ದುರ್ಯೋಧನನ ಹಟ ಯಾರ್‍ಯಾರನ ಇನ್ನ್ ಬಲಿ ತಕಂಡದೆನೋ? ಭೀಷ್ಮರ್ ಅಂವನ ನೋಡಿದ್ರೊ. ಮೋರೆ ಬಾಡಿ ಹೋಗಿತ್ತ್. ಅಭಿಮನ್ಯುನ ಕೊಂದದರ್‌ಂದ ಬೇಜಾರ್‌ಲಿ ಉಟ್ರೊ?

ಈಗ ದುರ್ಯೋಧನ ಮಾತಾಡ್ತ್. "ಅಭಿಮನ್ಯುನ ಕೊಲ್ಲುದು ನನ್ನ ಉದ್ದೇಶ ಆಗಿತ್ಲೆ ಅಜ್ಜಪ್ಪಾ. ಚಕ್ರವ್ಯೂಹನ ಯುಧಿಷ್ಠಿರನೋ, ಭೀಮನೋ, ನಕುಲ ಸಹದೇವರೋ, ಒಳಗೆ ಬಾತಿದ್ದರೆ ಅವರ ಎಲ್ಲೋವೂ ಸುತ್ತೋಳು ಮುತ್ತಿಗೆ ಹಾಕಿ ಕೊಲ್ಲೊಕೂಂತ ನಾ ನೆನ್ಸಿಕಂಡಿದ್ದೆ. ಆದರೆ ಒಳಗೆ ಬಂದಂವ ಅಭಿಮನ್ಯು. ನಾ ಅಂವ ಅಷ್ಟೊಂದು ಉಸಾರ್‌ನ ಹೈದಾಂತ ತಿಳ್ದತ್ಲೆ. ಒಳಗೆ ಬಂದಂವ ನಮ್ಮ ಎಲ್ಲರ್‍ನೂ ಸೋಲ್ಸಿ ಬುಟ್ಟತ್. ನನ್ನ ಮಂಜ ಲಕ್ಷ್ಮಣ ಕುಮಾರನ ಕೊಂದತ್. ಅಂವನ ಹಾಂಗೆ ಬುಟ್ಟರೆ ನಾವ್ಗೆ ಉಳ್ಗಾಲ ಇಲ್ಲೇಂತ ನಾವು ಎಲ್ಲೋವೂ ಅಂವ ಮುತ್ತಿಗೆ ಹಾಕಿ ಕೊಂದ್‌ಬುಟ್ರೊ. ದುಶ್ಯಾಸನ ಮಂಜಂದ ಅಭಿಮನ್ಯು ಸತ್ತತ್. ಹೇಳಿ ಅಜ್ಜಪ್ಪಾ, ಇದರ್‍ಲಿ ಯರ್‍ದಾದರೂ ತೊಪ್ಪು ಉಟ್ಟೋ?"

ಏನ್ ಹೇಳ್ದು? ಯುದ್ಧಾಂತೇಳ್ರೆ ಸಾವು ಇದ್ದದೇ. ಯಾರ್ ಸತ್ತವೇಂತೇಳ್ದು ಕಾಲನೇ ನಿರ್ಣಯ ಮಾಡ್ದೇಂತ ನೆನ್ಸಿಕಂಡ್ ಭೀಷ್ಮರ್ ಎದ್‌ರ್ ಮಾತಾಡ್‌ತ್ಲೆ. ಅವರ ಕಣ್ಣೆದ್ರ್ ತುಂಟ ನೆಗೆನ, ಬಿರ್ಸ ಹೈದ ಅಭಿಮನ್ಯುನ ಕೊಂಡಾಟದ ಮೋರೆ ಬಂದ್ ಹೋತ್. ಸಂಮಂದಲಿ ಅಂವ ಮರಿ ಮಂಜ ಆಕು. ಅಂವನ ಸರ್‍ದಿ ಮುಗ್ದ್ ಸತ್ತ್‌ಹೋತ್. ರಣರಂಗಲಿ ಸಂಮಂದಗಳ್ಗೆ, ಮೊನ್ಸನ ಮರ್‍ಕಕ್ಕೆ ಬೆಲೆ ಇಲ್ಲೆ. ಆದರೆ ದುರ್ಯೋಧನನ ಮೋರೆಲಿ ಕಾಂಬ ಬೇನೆ ಅಭಿಮನ್ಯು ಸತ್ತದರ್‌ಂದ ಅಲ್ಲ. ಇಂವನ ಮಂಜ ಲಕ್ಷ್ಮಣ ಕುಮಾರ ಸತ್ತುಟ್ಟು. ದ್ರೋಣರ ಕಡೆ ನೋಡಿಕಾಕನ ಅವು ಆಗಾಗ ಎಡ್ದ ಕೈನ ನೋಡಿ ಕಂಬತಿದ್ರೊ. ಹೋ ಅವರ ಎಡಗೈ ಹೆಬ್ಬೆರ್‍ಳ್ ಕಾಂಬೊದ್ಲೆ. ಅದ್ ಇರಕಾಗಿದ್ದ ಜಾಗೆಲಿ ನೆತ್ತರ್ ಹೆಪ್ಪುಗಟ್ಟಿಟ್ಟು. ಬೇನೆಂದ ಮೋರೆ ಕಿವ್ಚಿದಾಂಗೆ ಕಂಡದೆ. ಇದ್ ಹೇಂಗಾತ್?

ದ್ರೋಣರ್ ಅವೇ ಹೇಳ್ದೊ. 'ಅಭಿಮನ್ಯುನೊಟ್ಟಿಗೆ ಎದ್ರಾಳಾಗಿ ಸುರುಗೆ ಯುದ್ಧ ಮಾಡ್ದಂವ ನಾ. ಅಂವ ಅಂವನ ಅಪ್ಪ ಅರ್ಜುನಂದಲೂ ಗಟ್ಟಿಗ. ಒಂದರ ಹಿಂದೆ ಒಂದು ಬಾಣನ ಬುಟ್ಟದ್ ನನ್ನ ಬಿಲ್ಲ್‌ನನೇ ಮುರ್‍ದ್ ಬುಟ್ಟತ್. ಮತ್ತೊಂದ್ ಬಾಣಂದ ನನ್ನ ಎಡ್ದ ಕೈನ ಹೆಬ್ಬೆರ್‍ಳ್‌ನನೇ ಹಾರ್‍ಸಿತ್. ಕಳ್ಳ ನೆಗೆ ನೆಗಾಡ್‌ಕಂಡ್, "ಗುರುಗಳೇ, ಆ ಹೆಬ್ಬೆರ್‍ಳ್‌ನ ಎಲ್ಯುಟ್ಟೊಂತ ಹುಡ್ಕಿದ್ ಏಕಲವ್ಯಂಗೆ ಕೊಟ್ಟ್‌ಬುಡಿ."– ಎಂತ ಹೇಳ್ತ್. ಈ ದುರ್ಯೋಧನನ ಸೋಲ್ಸಿ ದೊಡ್ಡಪ್ಪಂದ ತೊಡೆ ಮುರ್‍ಸಿಕಂಬಕನ ಮುಟ್ಟ ಬೊದ್ಕಿಕ– ಎಂತ ಹಂಗ್‌ಸಿತ್. ಕರ್ಣನ ಬಿಲ್ಲ್‌ನ ಮುರ್‍ದ್, "ನಿನ್ನ ಕೊಲ್ಲಂವ ನನ್ನ ಅಪ್ಪ"– ಎಂತ ಹಿಯಾಳ್‌ಸಿತ್. ಅಭಿಮನ್ಯುನ ಕೊಲ್ಲದೆ ನಾವ್ಗೆ ಬೇರೆ ದಾರಿನೇ ಇತ್ಲೆ.

ಭೀಷ್ಮರ ಮೋರೆಲಿ ದುಕ್ಕ ಕಂಡತ್. ಎಳ್ತ್ ಕರ್‍ಕ್ ಹೈದ ಅಭಿಮನ್ಯು, ದುರ್ಯೋಧನ, ದ್ರೋಣ, ಕರ್ಣರಂತಾ ದೊಡ್ಡ ಸಕ್ತಿವಂತರ ಗೆಲ್ಲುವಂತವ ಅಂವಾಗಿತ್ತ್. ಅಂವ ಇರ್‍ತಿದ್ದರೆ ಮುಂದೆಗೆ ಅಂವ ಎಂತಾ ವೀರ ಆಗ್ತಿತ್ತೋ ಏನೋ? ಕುರುಸಾಮ್ರಾಜ್ಯನ ಎಲ್ಲಾ ಆರ್ಯಾವರ್ತಕ್ಕೆ ಅಲ್ಲದೆ ದಕ್ಷಿಣಾಪಥಕ್ಕೂ ಹಬ್ಬಿಸಿ ಬುಡ್ತಿತ್ತ್. ಅಂವನ ಪರಾಕ್ರಮ

ಬೆಳ್ಗಿಕೆ ಮುಂದೆನೇ ಬೊಳ್ಪು ಕೆಟ್ಟ್‌ಹೋತ್. ಯುದ್ಧಾಂತೇಳ್ವ ಹೆಮ್ಮಾರಿ ಅದೆಸ್ಟ್ ಜನರ ತಿಂದ್ ಹಾಕಿದೆನೋ? ಇಡೀ ಆರ್ಯಾವರ್ತ ಪಾಲ್ಗೊಂಡ ಈ ಮಹಾಯುದ್ಧ ಮುಗ್ಯಕಾಕನ, ಎಳೆ ಮಕ್ಕ ಮತ್ತೆ ಗಂಡಂದರ್ ಸತ್ತೋದ ಮುಂಡೆಗ ಮಾತ್ರಾ ಉಳ್ಯೋವೊ. ಹಾಂಗಾಕೆ ಬೊತ್ತ್. ಈ ಯುದ್ಧ ಮುಂದರ್ಯಕೆ ಬೊತ್ತ್.

ಮೊನ್ಸಲಿ ನಡ್ಯೋದರ ಹೊರಗೆ ತೋರ್ಸಿಕಣದೆ ಭೀಷ್ಮರ್ ಸಮದಾನಲಿ ಹೇಳ್ದೊ. "ಆಚಾರ್ಯ ದ್ರೋಣರೇ, ಆದ್ದ್ ಆಗಿ ಹೋತ್, ಎದೆಗೆ ಹೆಟ್ಟಿದ ಈ ಬಾಣ ನಿದಾನಲಿ ಇಸ ಕುಡ್ದಾಂಗೆ ಹಂತ ಹಂತಲಿ ನನ್ನ ಕೊಂದದೆ. ನೀವು ಈಗ ಎಡ್ಡ ಕೈನ ಹೆಬ್ಬೆರ್ಳ್ನ ಕಳ್ಕಂಡಳರಿ. ಮುಂದೆನಾಂಗೆ ಯುದ್ಧ ಮಾಡಿಕೆ ಇನ್ನ್ ನೀವ್ಗೆ ಆಕಿಲ್ಲೆ. ಬೆರ್ಳ್‌ಗೆ ಬಂದದ್ ಕೊರ್ಳ್‌ಗೆ ಬಾಕೆ ಎಸ್ಟೊತ್ತ್ ಉಟ್ಟು? ಲಕ್ಷ್ಮಣ ಕುಮಾರ ಮತ್ತೆ ಅಭಿಮನ್ಯು ಮುಂದೆ ಕುರು ಸಾಮ್ರಾಜ್ಯನ ಆಡಳ್ತೆ ಮಾಡಬೇಕಾದೊವು. ಅಭಿಮನ್ಯು ಕುರುಸಾಮ್ರಾಜ್ಯನ ಇಡೀ ಬರತ ಖಂಡಕ್ಕೆ ಹಬ್ಬುಸುವ ದೊಡ್ಡ ಸಕ್ತಿವೊಂತ ಆಗಿತ್ತ್. ಈ ದುರ್ಯೋಧನನ ಹಟಂದ ಬರತಖಂಡಕ್ಕೆ ಕಪ್ಪು ಬಳ್ದಾಂಗಾಗುಟ್ಟು. ನೀವಾದರೂ ದುರ್ಯೋಧನಂಗೆ ಇದ್ದ ಇಸಯನ ಇದ್ದ ಹಾಂಗೆ ಅರ್ತ ಮಾಡ್ಸಿನಿ, ಯುದ್ಧ ನಿಲ್ಸಿಕೆ ಬುದ್ಧಿ ಹೇಳಿ."

ದುರ್ಯೋಧನ ತಲೆ ಬೊಗ್ಗಿಸಿಕಂಡ್ ಹೇಳ್ತ್. "ಆದರೆ ಅಜ್ಜಪ್ಪಾ, ಈಗ ಇದೆಲ್ಲಾ ನಮ್ಮ ಕೈಮಿಾರಿ ಹೋಗುಟ್ಟು. ಈ ಸಮಯಲಿ ಯುದ್ಧನ ನಿಲ್ಸಿಕೆ ಯಾರ್‌ಂದೊಳೂ ಆಕಿಲ್ಲೆ"

ಭೀಷ್ಮರಿಗೆ ದುರ್ಯೋಧನನ ಮಾತ್ನ ಕೇಳಿ ಸಿಟ್ಟ್ ಬಾತ್. ಆದರೆ ಸಿಟ್ಟ್‌ಂದ ಕೆಲ್ಸ ಆಕಿಲ್ಲೇಂತ ಅವರ ಬುದ್ಧಿ ಹೇಳ್ತ್. ಅವು ಅಡ್ಡಿ ಮಾಡುವ ಸೊರಲಿ "ಹಾಂಗೇನಿಲ್ಲೆ. ನೀ ಒಪ್ಪಿರೆ ನಾ ಯುದ್ಧನ ನಿಲ್ಸುಂವೆ. ನಾ ಒಂದ್ ಮಾತ್ನ ಹೇಳ್ರೆ ಸಾಕ್, ಯುಧಿಷ್ಠಿರ ಕೃಷ್ಣನ ಕರ್ಕಂಡ್ ಇಲ್ಲಿಗೆ ಬಾದು. ಅವರಿಬ್ಬೊರ ನಾ ಒಪ್ಪುಸುಂವೆ. ಅವು ಒಪ್ಪಿರೆ ಪಾಂಡವೊರ್ ಯಾರೂ ಅಡ್ಡಿಮಾಡಿಕಿಲ್ಲೆ. ಹೇಳ್ ಕುಂಞಿ, ಯುದ್ಧ ನಿಲ್ಲಿಸಿಕೆ ನಿನ್ನ ಒಪ್ಪಿಗೆ ಉಟ್ಟೊ?"

ಈ ಮಾತ್‌ಗೆ ದ್ರೋಣರ್ ಉತ್ತರ ಕೊಟ್ಟೊ. "ಆಚಾರ್ಯರೇ ದುರ್ಯೋಧನ ಸುಳ್ಳು ಹೇಳ್ತಿಲ್ಲೆ. ಈಗ ಪಾಂಡೋವು ರಾಜಿ ಪಂಚಾತಿಕೆಗೆ ಒಪ್ಪಿಕೆ ಸಾದ್ಯನೇ ಇಲ್ಲೆ. ಅಭಿಮನ್ಯು ಸತ್ತ ಸುದ್ದಿ ತಿಳ್ದ್ ಅರ್ಜುನ ಸಿಟ್ಟ್‌ಲಿ ಕೊಣ್ದದೆ. ಭೀಮ ಮತ್ತೆ ಅವರ ಸಂಗಾತದೊವು ಚಕ್ರವ್ಯೂಹದ ಒಳಹೊಗಿಕೆ ತಡ್ದದ್ ಜಯದ್ರಥಂತ ಅಂವನ ಮೇಲೆ ಸಿಟ್ಟ್‌ಲಿ ಹಾರ್ರೆ. ನಾಳೆ ಸೂರ್ಯ ಹುಟ್ಟಿಕೆ ಮುಂದೆ ಜಯದ್ರಥನ ತಲೆನ ಕಡ್ದೇ ತೀರ್ನೇಂತ ಅಂವ ಪ್ರತಿಜ್ಞೆ ಮಾಡಿಟ್ಟು. ತಲೆ ಕಡ್ಯಕೆ ಆಗದಿದ್ದರೆ ಕಿಚ್ಚಿಗೆ ಹಾರಿ ಸತ್ತದೆ ಗಡ. ಹೇಳಿ ಆಚಾರ್ಯರೇ ಈಗ ಯುದ್ಧ ನಿಲ್ಲಿಸಿ ರಾಜಿ ಪಂಚಾತ್ಕೆನ ಮಾತಾಡಿಕೆ ಆದೆನೋ?"

ಭೀಷ್ಮರ್ ಒಮ್ಮೆ ಉಸ್ರುನ ಮೇಲೆ ಎಳ್ಕಂಡ್ ಕೆಳಗೆ ಬುಟ್ಟೊ. "ದುರ್ಯೋಧನಾ ಯುದ್ಧಾಂತೇಳ್ರೆ ಹಾಂಗೇ ಕುಂಞಿ. ಒಮ್ಮೆ ಸುರಾತ್‌ಂತೇಳ್ರೆ ಮತ್ತೆ ಅದ್ ಯಾರ ಕೈಲೂ ಸಿಕ್ಕುದ್ಲೆ. ನೀ ಅಭಿಮನ್ಯುನ ಕೊಲ್ಲಿಸಿ ಎಂತಾ ಕಸ್ಟನ ತಂದಕಂಡ?"

ದುರ್ಯೋಧನ ಸಿಟ್ಟ್‌ಲಿ ಹಾರ್ತ್. "ಅಜ್ಜಪ್ಪಾ, ನನ್ನ ಮಂಜ ಲಕ್ಷ್ಮಣನೂ ಸತ್ತುಟ್ಟು.

ನೀವು ಅಭಿಮನ್ಯು ಸತ್ತದಕ್ಕೆ ಮಾತ್ರ ದುಕ್ಕಪಟ್ಟರೆ ಇಂದ್ ನಾ ಮಂಜ ಇಲ್ಲದಂವ ಆಗಳೆ. ನಾಳೆ ನನ್ನ ತಂಗೆ ದುಶ್ಶಳೆ ಮುಂಡೆ ಆದರ್‍ಲಿ ಉಟ್ಟು. ನಾವು ಈಗ ಕಳ್ದದರ ನೆನ್ನಿಕಂಡ್ ಕುದ್ರೊಕೋ, ಅಲ್ಲಾ ನಾಳೆ ನಡ್ಯವ ಅನಾಹುತನ ತೊಪ್ಪುಸುದು ಹೇಂಗೇಂತ ಏಚನೆ ಮಾಡಿ ಒಂದು ತೀರ್ಮಾನಕ್ಕೆ ಬರೊಕೋ? ಹೇಂಗೇ?"

ದುರ್ಯೋಧನನ ಮಾತ್ ಭೀಷ್ಮರ ಮೊನ್ಸ್‌ಗೆ ನಾಟಿತ್. ಅವು ಏಚನೆ ಮಾಡಿಕೆ ಸುರು ಮಾಡ್ದೊ. ಲಕ್ಷ್ಮಣಕುಮಾರ ಯಾವ್ದರ್‍ಲೂ ಅಭಿಮನ್ಯುಗೆ ಸಮ ಅಲ್ಲ. ಆದರೆ ಪುತ್ರಶೋಕ ಯಾಗೋಳೂ ಇದ್ದದೆ. ದುರ್ಯೋಧನನ ಕಾಟಕ್ಕೆ ಕಿಚ್ಚ್ ಕೊಡಕಾದಂವ ಅಂವನ ಮಂಜ. ಈಗ ಅದೇ ಮಂಜನ ಕಾಟಕ್ಕೆ ಅಪ್ಪನೇ ಕಿಚ್ಚ್ ಕೊಡಕಾದ ಕಾಲ ಬಂದುಟು. ಇದ್ ಇಂವಂದ ಆದೆನೋ ಇಲ್ಲೆನೋ? ಇಂವಂಗೆ ಹೇಳಿಕಂಬಕೆ ತೊಂಬತ್ತೊಂಬತ್ ತಮ್ಮಂದರ್ ಒಳೊ. ಗಾಂಧಾರ ದೇಸದ ಸುಬಲ ರಾಜನ ಹನ್ನೊಂದು ಜನ ಮಗಕ್ಕಳ್‌ಲಿ ದೃತರಾಷ್ಟ್ರಂಗೆ ಹುಟ್ಟಿದೊವು. ಅವರ್‍ಲಿ ದುಶ್ಯಾಸನನ ಮೇಲೆ ಎಲ್ಲರ್‌ಂದ ಹೆಚ್ಚ್ ಪ್ರೀತಿ. ನೂರು ಜನ ಕೌರವರ್‌ಂದ ಮೇಲೆ ಅಕೆರಿಗೆ ಹುಟ್ಟಿದವ್ಳು ದುಶ್ಶಳೆ. ಅವಳ ಮೇಲೆ ಎಲ್ಲೋವ್ಕೂ ತುಂಬಾ ಪ್ರೀತಿ. ಅದ್ ಎಲ್ಲರ ಕೊಂಡಾಟದ ತಂಗೆ. ಅದ್ ಪಾಂಡೋವ್ಕನೂ ತಂಗೆನೇ. ತನ್ನ ತಂಗೆನ ಗಂಡ ಜಯದ್ರಥನ ಕೊಂದೇ ಕೊಂದನೇಂತ ಅರ್ಜುನ ಪ್ರತಿಜ್ಞೆ ಮಾಡಿಟು. ಸೇಡ್‌ನ ಮೊನ್ಸ್‌ಲಿ ಹೊತ್ತವಂಗೆ ಸಂಮಂದಗ ಕಾಂಬೊದಿಲ್ಲೆ. ಆದರೆ ಈಗ ಇಂವ ಜಯದ್ರಥನ ಕೊಂದ್‌ದ್ ಏನ್ ಸುಕ? ಜಯದ್ರಥ ಸತ್ತರೆ ಅಭಿಮನ್ಯು ಮತ್ತೆ ಎದ್ದ್ ಬಂದದೆನೋ?

ಭೀಷ್ಮರ ಏಚನೆ ಮುಂದರ್‍ತ್. ಯುದ್ಧ ಭೀಕರ ರೂಪಕ್ಕೆ ತಿರ್‍ಗಿಟು. ನಾ ಸೇನಾಧಿಪತಿ ಅಗಿ ಇದ್ದಸ್ಟ್ ದಿನ ಕೌರವ ಪಾಳ್ಯಲಿ ಆಗಲೀ ಪಾಂಡವ ಪಾಳ್ಯಲಿ ಆಗಲೀ ದೊಡ್ಡ ನಷ್ಟ ಆತ್ಲೆ. ಈಗ ಸಾವುನ ತಂದ್‌ಕಂಡಾಗುಟು. ಇಂದ್ ಎಳ್ತ್ ಎರ್‍ಡ್ ಜೂವಗಳ ಕಳ್ಕಂಡಾಗುಟು. ಜಯದ್ರಥ ಅದಕ್ಕೊಂದು ನೆಪ ಮಾತ್ರ. ಅಂವನ ಕೊಲ್ಲಿಕಾಗದಿದ್ದರೆ ಕಿಚ್ಚಿಗೆ ಹಾರಿ ಸತ್ತನೇಂತ ಹೇಳುವ ಅರ್ಜುನಂಗೆ ಅಂವನ ಸಾಮರ್ತ್ಯದ ಮೇಲೆ ಎಸ್ಟ್ ಇಸ್ವಾಸ ಉಟ್ಟು? ಇದ್ ಅಂವನ ಆತ್ಮ ಇಸ್ವಾಸನೋ? ಅಭಿಮನ್ಯು ಬುಟ್ಟ್ ಹೋದ ದುಕ್ಕನ ಸೈಸಿಕ್ಕಾಗದೆ ಹೋದ ಬೇನೆನೋ?

ನಾ ಎಜಮಾನಿಕೆಲಿ ಇರ್‍ತಿದ್ದರೆ ಅಭಿಮನ್ಯು ಸಾಯಕೆ ಬುಡಿಕಿತ್ಲೆ. ಕಾಳಗ ಕೊಡುವ ಸ್ತಿತಿಲಿ ನಾ ಇರ್‍ತಿದ್ದರೆ ಈಗಳೂ ನಾ ಜಯದ್ರಥನ ಕಾಪಾಡ್ತಿದ್ದೆ. ಹೆಬ್ಬೆರ್‍ಳ್ ಕಳ್ಕಂಡ ದ್ರೋಣರ್‌ಂದ ಅದ್ ಆಕಿಲ್ಲೇಂತ ಅರ್ಜುನನ ಪ್ರತಿಜ್ಞೆ ಸೂರ್ಯದೇವ್ರ ಬೊಳ್ಪುನಸ್ಟೆ ಸತ್ಯಮಾಡಿ ತೋರ್ಸಿದೆ. ಜಯದ್ರಥನ ಕೃಷ್ಣಾರ್ಜುನರ ಕೈಯಿಂದ ಕಾಪಾಡಿಕೆ ಸಾದ್ಯ ಆತ್ಲರೆ ಈ ದೊಡ್ಡ ಕಾಳಗದ ಪಲಿತಾಂಶ ನಾಳೆನೇ ತಿಳ್ಯೋದು. ಇಸ್ಟ್ ಹೇಳ್ರೂ ಈ ಜಯದ್ರಥ ಬೊದ್ಕಿಕೆ ಯೋಗ್ಯ ಮೊಂಯಿಂಸನೋ?

ಭೀಷ್ಮರ್‌ಗೆ ಜಯದ್ರಥನ ಕತೆ ನೆಂಪಾತ್. ಸಿಂದೂ ದೇಶದ ದೊಡ್ಡ ಸಕ್ತಿವಂತ ಆಜಾನುಬಾಹು ಆಗಿದ್ದ ದೊರೆ ಜಯದ್ರಥ ತನ್ನ ಇಪ್ಪತ್ತ್ ಜನ ಭೀಮಕಾಯದ, ಅತಿ

ಬಲಿಷ್ಟ ಸೋದರರ ಕೂಡಿಕಂಡ್ ಯುದ್ಧಕ್ಕೆ ಹೊರ್ಟರೆ ಅವರ ಎದ್‌ರ್‌ಸೋವೇ ಇರ್ತಿಲ್ಲೆ. ತನ್ನ ಅವ್ವನ ಗಾಂಧಾರದೇಶಕ್ಕೆ ಹೋಕನ ನೊಡುಲಿ ಸಿಕ್ಕುವ ಸಿಂಧೂದೇಶ ಯಾಗೋಳೂ ತುಂಬಿಕಂಡ್ ಹರ್‍ಯತಿದ್ದ ಸಿಂಧೂನದಿಂದಾಗಿ ಬಾಳ ಸಂಪತ್ತ್‌ನ ದೇಶ ಆಗಿತ್ತ್. ಅದರ ಕುರುಸಾಮ್ರಾಜ್ಯಕ್ಕೆ ಸೇರ್ಸಿ ಬುಡೊಕೂಂತ ಎಸ್ಟೋ ಸಲ ದುರ್ಯೋಧನ ಭೀಷ್ಮರಲಿ ಹೇಳಿಟು. "ನಾವಾಗಿ ಕಾಲ್ ಕೆರ್ದ್‌ಕಂಡ್ ಜಗಳಕ್ಕೆ ಹೋಗಿ ಇಲ್ಲದ ರಗಳೆನ ತಂದ್‌ಕಂಬೊದು ಬೇಡ. ಜಯದ್ರಥನೇ ಸಂದರ್ಭ ಸೃಷ್ಟಿಸಿರೆ ಮತ್ತೆ ಬುಡ್ಡು ಬೇಡ."– ಎಂತ ಭೀಷ್ಮರ್ ಆಗಾಗ ದುರ್ಯೋಧನನ ಆಸೇಂತೇಳ್ವ ಕಿಚ್ಚಿಗೆ ನೀರ್ ಹ್ಯೊತಿದ್ದೊ. ಯುದ್ಧಂದ ಆಗದ ಮಾತ್ ನೆಂಟಸ್ತಿಕೆಂದ ಆದೂಂತ ಹೇಳಿದ ಕರ್ಣನ ಮಾತ್‌ಗೆ ತಾವೇ ಮುಂದೆ ನಿತ್ತ್ ದುಶ್ಶಳೆನ ಜಯದ್ರಥಂಗೆ ಧಾರೆ ಎರ್ದ್ ಕೊಟ್ಟೊ. ಒಂದಲ್ಲ ಒಂದ್ ದಿನ ಉಪಯೋಗಕ್ಕೆ ಬಾದೂಂತ ದುರ್ಯೋಧನ ಆಗಂದಳೇ ಜಯದ್ರಥನ ಮೊನ್ಸ್‌ಲಿ ಪಾಂಡವರ ಮೇಲೆ ದ್ವೇಷ ಬಾವ ಹಾಂಗೆ ವಿಷ ಬೀಜನ ಬಿತ್ತಿಕಂಡೇ ಇತ್ತ್. ದ್ರೌಪದಿ ಸ್ವಯಂವರಕ್ಕೆ ಜಯದ್ರಥ ಹೋಗಿದ್ದಂವ ಮತ್ಸ್ಯಯಂತ್ರನ ಬೇಧಿಸಿಕೆ ಆಗದೆ ಹ್ಯಾಪೆ ಮೋರೆ ಹಾಕಂಡ್ ಬಂದಿತ್ತ್. ಆದರೆ ದ್ರೌಪದಿನ ಪೊರ್ಲುನ ಮರ್‍ಯಕಾಗದೆ ಅಂವ ಕಾದ್‌ಕಂಡಿತ್ತ್. ಮೋಸದ ಚದ್ರಂಗಾಟಲಿ ಕೌರವರ್ ಗೆದ್ದ ಮೇಲೆ ಒಮ್ಮೆನಾದರೂ ದ್ರೌಪದಿನ ಸಂಗ ಮಾಡೊಕೂಂತ ಆಗಾಗ ದುರ್ಯೋಧನನ ಎದ್ರ್ ಹೇಳ್ತಿತ್ತ್. ದ್ರೌಪದಿನ ಪಡ್ಯದಿದ್ದರೆ ತನ್ನ ಗಂಡ್ ಜಲ್ಮ ವ್ಯರ್ಥಾಂತ ಹೇಳ್ತಿತ್ತ್. ತುಂಬಿದ ಸಭೆಲಿ ಉರ್ಬುಳಿ ದ್ರೌಪದಿನ ಎಳ್ದ್ ತಂದ್ ಅಪಮಾನ ಮಾಡೊಕೂಂತ ಕಾದ್‌ಕಂಡಿದ್ದ ದುರ್ಯೋಧನ ಒಂದು ಸಲನೂ ತನ್ನ ತಂಗೆನ ಗಂಡ ಜಯದ್ರಥನ ಬಾಯಿಗೆ ಬಾರದ ಈ ಮಾತ್‌ನ ಹೇಳಿಕಾಗದ್‌ಂತ ಹೇಳ್ತಿತ್ಲೆ.

ಪಾಂಡವರ್ ಕಾಡ್‌ಲಿ ವಾಸ ಮಾಡಿರಿಕಾಕನ ದ್ರೌಪತಿ ತನಿಗೆ ಒಂಟಿ ಆಗಿ ಸಿಕ್ಕುದೂಂತ ಎಸ್ಟೋ ಸಲ ಜಯದ್ರಥ ಹೊಂಚಿ ಹಾಕಿಕಂಡಿತ್. ಒಂದು ದಿನ ಧೌಮ್ಯಮುನಿನ ರಕ್ಷಣೆಲಿ ದ್ರೌಪದಿನ ಎಲೆಮನೆಲಿ ಬುಟ್ಟ್ ಪಾಂಡೊವು ಬೇಟೆಗೇಂತ ಹೋಗಿದ್ದೊ. ದ್ರೌಪದಿನ ಬಲಾತ್ಕಾರಂದಾದರುನೂ ಪಡ್ಯೊಕೂಂತ ಜಯದ್ರಥ ಮಾನ ಮೊರ್‍ಯಾದಿನ ಬುಟ್ಟ್‌ದ್ ಮದತುಂಬಿದ ಗೂಳಿನಾಂಗೆ ಎಲೆಮನೆಗೆ ಹೊಕ್ಕ್ ದ್ರೌಪದಿನ ಹೊತ್ತ್‌ಕೊಂಡ್ ಹೋಗಿ ತನ್ನ ರಥಲಿ ಕುದ್ರಿಸಿತ್. ಅದ್ ಹೆದ್ರಿ ಬೊಬ್ಬೆ ಹೊಡ್ಯಕಾಕನ ಅದರ ಬಾಯಿಗೆ ಸೀರೆ ಅರ್‍ವೆ ತುಂಬಿಸಿ, ಅದರ ಅಲ್ಲೆ ನೆಲಲಿ ಅಡ್ಡ ಹಾಕಿ ತಾನ್ ಬಾಳ ದಿನಂದ ಕಂಡ್‌ಕಂಡ್‌ದ್ದ ಕನ್ಸನ ನೆನ್ಸ್ ಮಾಡೊಕೂಂತ ಅದರ ಮೇಲೆ ಹರ್‌ಂಬುಳಿ ಹತ್ತಿಕೆ ಹೋತ್. ಅಸ್ಟರ್ಲಿ ದ್ರೌಪದಿನ ಬೊಬ್ಬೆನ ಕೇಳಿ ಭೀಮಸೇನ ಬಂದ್ ಜಯದ್ರಥನ ಮೆಟ್ಟಿ ಮೆಟ್ಟಿ ಅಂವ ಮೇಲೆ ಎದ್ರ್‌ದಾಂಗೆ ಮಾಡ್ತ್. ಅಂವನ ತಲೆನ ತನ್ನ ಗಧೆಂದ ಒಡ್ದ್ ಹಾಕೊಕೂಂತ ಭೀಮ ಗದೆನ ಎತ್ತಿಕಾಕನ ಅಲ್ಲಿಗೆ ಬಂದ್ ಮುಟ್ಟಿದ ಯುಧಿಷ್ಠಿರ ಅಂವನ ತಡ್ತ್. ಇತ್ಲರೆ ದುಶ್ಶಳೆ ಅಂದೇ ಮುಂಡೆ ಆಗ್ತಿತ್ತ್. ಭೀಮ ಅಂವನ ಅಲ್ಲಿಗೆ ಬುಟ್ಟತ್ಲೆ. ಅಂವನ ತಲೆನ ಅಲ್ಲಲ್ಲಿ ಬೋಳಿಸಿ ಐದ್ ಜುಟ್ಟುಗಳ ಬುಟ್ಟ್‌ದ್, ಬೋಳ್ಸಿದ

ಜಾಗೆಲಿ ಸುಣ್ಣದ ಬೊಟ್ಟು ಇಸಿ, ಕುಂಡೆಗೆ ಕಾಲ್‌ಲಿ ಮೆಟ್ಟಿ ಅಲ್ಲಿಂದ ಓಡ್ಸಿತ್. ಅಪಮಾನಂದ ಜಯದ್ರಥ ಹಿಮಾಲಯ ಪರ್ವತಕ್ಕೆ ಹೋಗಿ ಅಲ್ಲಿದ್ದ ಸಾಧು ಸನ್ಯಾಸಿಗಳ್‌ಂದ ಇಸೇಸ ಯುದ್ಧ ಮಾಡುವ ಪಟ್ಟ್‌ಗಳ ಕಲ್ತ್‌ಕಂಡ್ ಬಾತ್. ಅಂವನ ತಮ್ಮಂದರ್‌ಗೂ ಅದರ ಕಲ್ಸಿತ್. ಇತ್ಲರೆ ಅಂವಂಗೆ ಭೀಮ, ಮತ್ತೆ ಅಂವನ ಸಂಗಾತಿಗ ಚಕ್ರವ್ಯೂಹನ ಹೊಗಿಕಾಕನ ತಡ್ಯಕೆ ಆಗ್ತಿತ್ತೆ.

ಅರ್ಜುನ ನಾಳೆ ಜಯದ್ರಥನ ಕೊಂದರೆ ಆಗ ದುರ್ಯೋಧನನ ಸೇಡ್ ಇನ್ನೂನು ಹೆಚ್ಚಾದು. ಆಗ ಅಂವ ಏನೆಲ್ಲಾ ಮಾಡ್ದನೋ ಏನೋ? ಜಯದ್ರಥ ಸತ್ತರೆ ಯುದ್ಧ ಇನ್ನೂ ಜೋರಾದು. ಜಯದ್ರಥನ ಕೊಲ್ಲಿಕೆ ಆತ್ಲರೆ ಅರ್ಜುನ ತನ್ನ ಪ್ರತಿಜ್ಞೆನ ಹಾಂಗೆ ಕಿಚ್ಚಿನ ಕೊಂಡಕ್ಕೆ ಹಾರಕಾದೆ. ಅರ್ಜುನ ಸತ್ತರೆ ಯುಧಿಷ್ಠಿರಂಗೆ ಯುದ್ಧನ ಮುಂದರ್ಸುವ ಮೊನ್ಸ್ ಬಾಕಿಲ್ಲೆ. ಆಗ ಯುದ್ಧ ನಿತ್ತದೆ. ಆದರೆ ಹಾಂಗಾಗುವ ಸಂದರ್ಭ ಬಾಳ ಕಮ್ಮಿ. ನಾಳೆ ಜಯದ್ರಥ ಸಾಯ್ದು ನಿಚ್ಚಯ. ದುರ್ಯೋಧನ ಅಂವನ ಮಂಜನ ಸಾವುಂದ ಕಂಗಾಲಾಗುಟ್ಟು. ಅಭಿಮನ್ಯುನ ಕೊಂದದಕ್ಕಾಗಿ ಇಂವಂಗೆ ತಾನ್ ಮಾಡ್ದ್ ತೊಪ್ಪುಂತ ಗೊತ್ತಾಗುಟು. ಅರ್ಜುನ ಮಾಡ್ದ ಪ್ರತಿಜ್ಞೆಂದ ದುರ್ಯೋಧನನ ಮೊನ್ಸ್‌ನ ಸಕ್ತಿ ಪಾತಾಳಕ್ಕೆ ಇಳ್ದುಟು. ಈಗ ಅಂವಂಗೆ ಒಂದೆರ್ಡ್ ಸಮ್ದಾನದ ಮಾತ್ನ ಹೇಳ್‌ತ್ಲರೆ ಅಂವ ಪೂರ ಕಂಗಾಲಾದೆ.

ಸಮ್ದಾನ ಮಾಡ್ವ ಸೊರಲಿ ಭೀಷ್ಮರ್ ಹೇಳ್ದೊ. "ನಿನ್ನ ಬೇನೆ ನಂಗೆ ಅರ್ತ ಆದೆ ಕುಂಞಿ. ತೊಪ್ಪು ತಿಳಿಬಡ. ನಾ ಕುರುಸಾಮ್ರಾಜ್ಯನ ಏಳ್ಗೆನ ಇಡಿ ಆಗಿ ನೋಡ್ದೆ. ನಿನ್ನ ಮಂಜ ಆದರೆ ಏನ್? ಅಭಿಮನ್ಯು ಆದರೆ ಏನ್? ನಂಗೆ ಇಬ್ಬೊರುನೂ ಒಂದೇ. ಈಗ ನಂಗೆ ನನ್ನ ಸೊಂತ ನೆಂಟಸ್ತನ ಕಾಂಬೊದ್ಲೆ. ಕುಂಞಿ, ನಾ ಮೊನ್ಸ್‌ನ ಸಂಕಟಂದ ಹೇಳ್ದ ಮಾತ್ನ ನೀ ಮೊನ್ಸ್‌ಗೆ ಹಚ್ಚಿಕಂಬಡ. ಆದರೆ ಕುಂಞಿ ನೀ ಯುದ್ಧದ ಭೀಕರತೆ ಒಮ್ಮೆ ನೋಡು. ಮೊಣ್ಣ್‌ಲಿ ಮೊಣ್ಣಾಗಿ ಹೋವ ನಮ್ಮಂತಾ ಮುದಿ ಕೊರ್ಡ್‌ಗ ಬೊದ್ಕಿದ್ ಒಳ್ದವೆ. ಸಾವು ಸಾವ್ರ ಕನ್ಸ್‌ನ ಮೊನ್ಸ್‌ಲಿ ಕಾಂಬತಿದ್ದ ಲಕ್ಷ್ಮಣಕುಮಾರನಂತೋವು, ಅಭಿಮನ್ಯುನಂತೊವು ನಮ್ಮ ಕಣ್ಣೆದ್ರ್‌ನೇ ಸತ್ತೋದವೆ."

ಒಂದೆರ್ಡ್ ಗಳ್ಗೆ ದುಃಖಂದ ಸುಮ್ಮಂಗಿದ್ದ ಭೀಷ್ಮರ್ ದುರ್ಯೋಧನನ ಸಮ್ದಾನ ಪಡ್ಸಿದೊ. "ನೀ ಚಿಂತೆಮಾಡಕೂಂತ ಇಲ್ಲೆ ಕುಂಞಿ. ಜಯದ್ರಥನ ನೀ ಒಳ್ಸಿಕಂಬ. ಭೀಮಸೇನನ ತಡ್‌ಹಿಡ್ದ ಜಯದ್ರಥ ಮತ್ತೆ ಅಂವನ ಸಕ್ತಿವಂತ ತಮ್ಮಂದರ್ ಅರ್ಜುನಂಗೆ ಹೆದ್ರುವ ಅಗತ್ಯನೇ ಇಲ್ಲೆ. ಕೆಬಿಕೊಟ್ಟ್ ಕೇಳ್. ನಾಳೆ ಜಯದ್ರಥನ ಕುರುಸೇನೆನ ಹಿಂದೆ ಗುಟ್ಟ್‌ಲಿ ಅಣ್‌ಂಗಿಸಿ ಇಸ್. ಆಚಾರ್ಯ ದ್ರೋಣರ್ ಸೈನ್ಯದ ಮುಂದೆ ನಿತ್ತ್‌ದ್ ಅರ್ಜುನ ನೊಟ್ಟಿಗೆ ಕಾಳಗ ಕೊಡಲಿ. ಅರ್ಜುನ ಗೆದ್ದ ಮೇಲೆ ಅಲ್ಲನೋ ಮುಂದೆನ ಮಾತ್? ಆದರೆನೂ ನೀ, ದುಶ್ಯಾಸನ, ಕರ್ಣ, ಅಶ್ವತ್ಥಾಮ ಮತ್ತೆ ಇತರ ಈರರ್ ಎರಡ್ನೇ ಹಂತಲಿ ಅರ್ಜುನನ ತಡ್ಯಲಿ. ಜಯದ್ರಥನ ಇಪ್ಪತ್ತ್ ಜನ ಈರ ತಮ್ಮಂದರ್ ಅಂವಂಗೆ ಬದ್ರತೆ ಕೊಡಲಿ. ನೋಡೊಮೊ. ಅರ್ಜುನ ಅದ್ ಹೇಂಗೆ ಅಂವನ ಪ್ರತಿಜ್ಞೆನ ಗೆದ್ದದೇಂತ?"

ಈಗ ದುರ್ಯೋಧನನ ಮೋರೆ ಅರ್ಳಿತ್. ಅಂವ ಎದ್ದ್ ನಿತ್ತ್ ಕೈ ಮುಗ್ತ್. "ಅಜ್ಜಪ್ಪಾ, ಈಗ ನಂಗೆ ಧೈರ್ಯಬಾತ್. ನಿಮ್ಮ ಹರ್ಸಟ ನಾವ್ಗೆ ಇರ್ಲಿ. ಅರ್ಜುನನ ಪ್ರತಿಜ್ಞೆನ ಮುರ್ದ್ದ್ ನಾಳೆನೇ ಯುದ್ಧ ಮುಗಿವಾಂಗೆ ನೋಡಿಕಂಡನೆ."

ಭೀಷ್ಮರ್ ಧರ್ಮಕ್ಕೆ ಜಯ ಆಗಲೀಂತ ಹರ್ಸಿದೊ. ಗುರುದ್ರೋಣರ ಒಟ್ಟಿಗೆ ದುರ್ಯೋಧನ ಹೊರ್ಟ್ಹೋದ ಮೇಲೆ ಬಿಡದಿ ಕಾಲಿ ಆತ್. ಆಗ ಅವರ ಕೆಬಿಲಿ ಆ ಮಾತ್‌ಗ ತಿರ್ಗ ಕೇಳ್ತ್.– "ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ"–

*****

# ಹೋಳು - ೦5

# ನೀರ್‌ಲಿ ಅರ್ಳಿದ ಪ್ರೇಮ ಕಮಲ

ಸೌಭದೇಸದ ಗಡಿಗೆ ಮುಟ್ಟಿ ಅದರ ಕರ್ಕಂಡ್ ಬಂದ ರಥ ಅಲ್ಲಿ ನಿತ್ತತ್. ಹಸ್ತಿನಾವತಿಂದ ಸೌಭಕ್ಕೆ ಎರ್ಡ್ ದಿನದ ದಾರಿ. ಎರ್ಡ್ ಇರ್ಳ್‌ಗಳ ಚತ್ರಲಿ ಕಳ್ದ್‌ದ್ ಅದರ ಹಕ್ಕಲೆನೇ ಇದ್ದ ಕುದುರೆ ಲಾಯಲಿ ಕುದ್ರೆನ ಬದಲ್ಸಿ, ದಾರಿನ ಮುಂದರ್ಸಕಾತ್. ಹಸ್ತಿನಾವತಿಂದ ಹೊರ್ಡಿಕಾಕನ ತನ್ನ ದಿರ್ಸ್‌ಗಳ ತಕಂಬಕಾಗಿತ್ತ್‌ಂತ ಅಂಬೆಗೆ ನೆಂಪಾದೇ ಈಗ. ಇನ್ನ್ ಹಂಞ ಹೊತ್ತ್‌ಲಿ ಸೌಭಕ್ಕೆ ಮುಟ್ಟಿ ಸಾಲ್ವಭೂಪತಿನ ಮೋರೆ ನೋಡ್ದ ಮೇಲೆ ಎಲ್ಲನೂ ಸರಿಯಾದೂಂತ ತನ್ನ ತಾನೇ ಸಮ್ಧಾನ ಮಾಡಿಕಂಡತ್.

ದಾರಿಲಿ ಬಾಕನ ಹಸ್ತಿನಾವತಿನ ಪತಾಕೆ ಹಾರ್ತಿದ್ದ ರಥನ ದಾರಿನ ಉದ್ದಕ್ಕೂ ನಿತ್ತ್‌ದ್ ಜನಂಗ ಗೌರವಂದ ನೋಡ್ತಿದ್ದದರ, ಅದ್ ಗಮನ್ಸ್‌ತಿತ್ತ್. ಕೆಲೊವು ಜನ ಗೌರವಂದ ಕೈ ಮುಗ್ಯೋತಿದ್ದೊ. ಅದ್ ಭೀಷ್ಮಾಚಾರ್ಯರಿಗೆ ಜನಂಗ ಸಲ್‌ಸುವ ಗೌರವ ಆಗಿರೊಕು. ಅವು ದೊಡ್ಡೊವು. ಅವರ ಬದ್ಲಿಗೆ ಬೇರೆ ಯಾರ್ ಇರ್ತಿದ್ದರುನೂ, ಅದ್ಕೆ ಎರ್ಡ್ ಬೊಡ್ದ್, ಬಲತ್ಕಾರಂದ ವಿಚಿತ್ರವೀರ್ಯನೊಟ್ಟಿಗೆ ಅಂತಪುರಕ್ಕೆ ತಳ್ಳ್‌ತಿದ್ದೊ. ಆರ್ಯಾವರ್ತಲಿ ಹೆಣ್ಣ್‌ನ ಮೊನ್ಸ್‌ನ ಅರ್ತ ಮಾಡಿಕಂಡ್ ಗೌರವಂದ ಕಾಂಬ ಬುದ್ಧಿ ಒಬ್ಬ ಕ್ಷತ್ರಿಯಂಗೆ ಆದರುನೂ ಕಂಡತಲೆ? ಸಾಲ್ವ ಭೂಪತಿಗುನೂ ಹಾಂಗೇ ಅನ್ಸುದು. ಅಕೆರಿಗುನೂ ಸಾಲ್ವ ಭೂಪತಿನ ರಾಣಿ ಆಗುವ ಭಾಗ್ಯದ ಗಳ್ಗೆ ಹಕ್ಕಲೆ ಬಂದುಟು.

ವಿಚಿತ್ರವೀರ್ಯನ ಮೋರೆನ ಒಮ್ಮೆ ಅಂಬೆ ನೆನ್ಸಿಕಂಡತ್. ಮಿಾಸೆ, ಗಡ್ಡನ ನುಣ್ಣಂಗೆ ಬೋಳ್ಸಿಕಂಡ, ಗಂಡ್‌ಸ್ತನ ಮೋರೆಲಿ ಹಂಞನೂ ಎದ್ದ್ ಕಾಣದ, ಚಪ್ಪೆ ಮೋರೆಅಂವಂದ್. ಹಸ್ತಿನಾವತಿಲಿ ಭೀಷ್ಮರ್ ಸತ್ಯವತಿದೇವಿನೊಟ್ಟಿಗೆ ಚರ್ಚೆ ಮಾಡಿಕಾಕನ ಮಾತ್‌ನ ನೊಡುಲಿ ಒಂದೇ ಒಂದ್ ಮಾತ್‌ನ ಹೇಳಿಕೆ ಅಂವಗಾತ್ಲೆ. ಒಂದು ರೀತಿಲಿ ಅಂವ ಅಂವಂಗೂ ಅಲ್ಲಿ ನಡ್ಯತಿದ್ದ ಮಾತ್‌ಗೂ ಯಾವ ಸಂಮಂದನೇ ಇಲ್ಲದಾಂಗೆ ಇತ್ತ್. ಮಾತ್‌ಗಳ ಕೇಳಿನೂ ಕೇಳದಾಂಗೆ ಅಲ್ಲಿಂದ ಅಂವ ಎದ್ದ್ ಹೊರ್ಟ್ಹೋತ್. ರಥಕ್ಕೆ ಕೈ ಮುಗ್ಯವ ಈ ಜನಂಗ ವಿಚಿತ್ರವೀರ್ಯನ ನೋಡ್ಯೊಳೊನೋ ಇಲ್ಲೆನೋ? ಅಂವಂನ ಗಂಡ್‌ಂತ ನೆನ್ಸಿಕೆ ಯಾರ್‌ಂದಳೂ ಆಕಿಲ್ಲೆ. ಹೆಣ್ಣ್‌ಂತ ಹೇಳಿಕೆ ಅಂವನ ಗಂಡ್ ದಿರಿಸ್ ಅಡ್ಡಿ ಬಂದದೆ.

ಅವಳ ಮೊನ್ಸ್ ಕಾಶಿನ ಕಡೆಗೆ ಹೋತ್. ಸಕ್ತಿನ ಪಂತ ಆಗಿ ಇಸಿದ ಸೊಂಯಂವರದ ಕಾಗ್ದಗಳ ಇಡೀ ಆರ್ಯಾವರ್ತದ ರಾಜರ್, ಮಹಾರಾಜರ್‌ಗಳಿಗೆ ಅಪ್ಪ ಕಳ್ಸಿಕಾಕನ ಅಂಬೆ ತನ್ನ ತಂಗೆಕಳೊಟ್ಟಿಗೆ ಅಸಮದಾನನ ಹೇಳಿಕಂಡಿತ್ತ್. "ಅಪ್ಪ ನಮ್ಮ ಮೂರ್ಜನನ ಒಬ್ಬಂಗೇ ಕಟ್ಟಿಕೆ ಹೊರ್ಟ್ಹೊಳೊ. ಸೊಂಯಂವರಲಿ ಮೊದೋಳ್ಗೆ ಗೂಡೆಗೆ ಗಂಡ್‌ನ

ಆಯ್ಕೆ ಮಾಡುವ ಹಕ್ಕ್ ಇದ್ದದೆ. ಸಕ್ತಿನನೇ ಪಂತ ಆಗಿ ಇರ್ದರ್‌ಂದ ನಾವ್ಗೆ ಇಲ್ಲಿ ಆಯ್ಕೆ ಮಾಡುವ ಸೊತಂತ್ರನೇ ಇಲ್ಲೆ. ಯಾವ ಭಾಗ್ಯಕ್ಕೆ ಇದರ ಸೊಂಯಂವರಾಂತ ಕರ್‍ಯೋಕು? ಸೊಂಯಂವರನ ಮಾಡಿಕಾಕನ ನಮ್ಮ ಒಟ್ಟಿಗೆ ಒಂದು ಮಾತ್‌ನನೂ ಕೇಳೋಕೂಂತ ಅಪ್ಪಂಗೆ ಗ್ರೇಕೆ ಹುಟ್ಟಿತ್ಲೆ. ಸೊಂಯಂವರದ ದಿನ ಜವ್ವಣೆಗರ್‌ಂದ ಹಿಡ್ದ್ ಮುದಿ ಪ್ರಾಯಸ್ತರವರೆಗೆ ಜನ ಬಂದ್ ಸೇರುವೆ. ಕನ್ನೆ ಗೂಡೆಗ ಆದ ನಮ್ಮನ ಮೊದ್ವೆ ಆಗುವ ಬಯ್ಕೆ ಯಾವ ಗಂಡ್‌ಸ್‌ಗೆ ಇರ್ದುಲ್ಲೆ? ಬಲ ಹೆಚ್ಚಿಸಿ, ರಾಜ್ಯನ ದೊಡ್ಡದ್ ಮಾಡಿಕೆ ಇದ್ ಒಂದು ನೆವನ. ನೆತ್ತರ್ ಹರ್‍ಯವ ಮೊದ್ವೆ ಮಂಟಮೆಲಿ ಎಲ್ಲರ್‌ಂದ ಹೆಚ್ಚ್ ನೆತ್ತರ್ ಹರ್‍ಸುವ ಗಂಡ್‌ನೊಟ್ಟಿಗೆ ನಮ್ಮ ಮೊದುವೆ ಸಿಂಯಿ ಮೊನ್ಸ್‌ನ ಗಂಡ್‌ನೊಟ್ಟಿಗೆ ಅಲ್ಲ."

ಅಂಬಿಕೆ, ಅಂಬಾಲಿಕೆಗ ಅದ್‌ಕ್ಕೇನ್ ಎದ್ರ್ ಹೇಳ್ತ್‌ಲ್ಲೆ. ಸಣ್ಣದರ್‌ಂದಳೂ ಅಸ್ಟೆ. ಅವ್ಕೆ ಬಣ್ಣದ ಅರ್‍ವೆ ಉಡ್ದರ್‍ಲಿ, ಸಿಂಗಾರದ ಒಡವೆನ ಹಾಕಂಬದರ್‍ಲಿ, ಬಯ್ಕೆ ಹೆಚ್ಚ್. ಇದ್ ಕಾವ್ಯಶಾಸ್ತ್ರ ಓದಿಕಾಕನ, ಅವು ತಮ್ಮ ಸರೀರನ ಸಿಂಗಾರ ಮಾಡಿಕಂಬದರ್‍ಲೆ ಸಂತೋಸ ಪಡ್ತಿದ್ದೊ. ಕಾಶಿಲಿ ದೇಸ-ಪರ್ದೇಸದ ತರತರದ ಪೊರ್‍ಮಳದ ಎಂಣೆಗ ಸಿಕ್ಕ್‌ತಿತ್ತ್. ಎಲ್ಲಾ ಬಗೆನ ಪೊರ್‍ಮಳದ ಎಂಣೆಗಳ ಅವು ತರ್‍ಸ್‌ತಿದ್ದೊ. ಆಗಾಗ ಅದರೆಲ್ಲಾ ಅವು ಮೈ ಕೈಗೆ ಪೂಜಿಕಂಬತಿದ್ದೊ. ತುಟಿಗ ಕೆಂಪು ಕಾಂಬಕೆ ಏನೇನೋ ರಂಗ್‌ನ ಮೆತ್ತ್‌ತಿದ್ದೊ. ಕೈ ಬೆರ್‍ಳ್‌ಗಳ ಉಗುರುಗಳ ಉದ್ದಕ್ಕೆ ಬೆಳ್ಸಿ, ಲಾಯ್ಕ್‌ಲಿ ಅದರ ಕೊಡಿಗಳ ಕತ್ರಿಸಿ, ಅದ್ಕೆ ರೂಪ ಕೊಡ್ತಿದ್ದೊ. ಉಗುರುಗ ಪೊರ್‍ಲು ಕಾಂಬಕೆ ಅದಕ್ಕೆ ಬಣ್ಣನ ಮೆತ್ತ್‌ತಿದ್ದೊ. ಅದರ ನೋಡಿ ಅವರ ಶೂರ್ಪನಖಿ ಎಂತ ಕರ್ದರೂ ಅವ್ಕೆ ಬೇಜಾರಾಗ್ತಿತ್ಲೆ. ಅವರ ದಿನಗ ಹಾಂಗೆ ತಮ್ಮ ಸಿಂಗಾರ ಮಾಡಿಕಂಬೊದರ್‍ಲಿ, ಮುತ್ತು, ರತ್ನ, ಚಿನ್ನದ ನಗಗಳ ಹಾಕಿಕಂಡ್, ಕನ್ನಡಿ ಮುಂದೆ ಕುದ್‌ಕಂಡ್ ತಮ್ಮ ಪೊರ್‍ಲುನ ನೋಡಿ ತಾವೇ ಕುಸಿ ಪಡ್ದರ್‍ಲಿ, ಆಸ್ಥಾನಲಿರುವ ಹೊಂತಗಾರ ಸೈನಿಕರ ಮೈ ಕಟ್ಟ್‌ನ ಬಣ್ಣನೆ ಮಾಡಿಕಂಬದರ್‍ಲಿ, ಅರಮನೆಲಿ ತಿರ್‍ಗಾಡ್‌ದರ್‍ಲಿ ಅವು ಕಾಲ ಕಳ್ಯತಿದ್ದೊ. ಅವರ್‌ಂದ ಯಾವ ರೀತಿನ ಉತ್ತರನ ಪಡ್ಯಕೆ ಸಾದ್ಯ ಇತ್ಲೆ.

ಅಪ್ಪ ಬಲ ಪ್ರದರ್ಶನನ ಪಂತ ಆಗಿ ಇಸುವ ಬದ್ಲಿಗೆ ಸೊಂಯಂವರನ ಮಾತ್ರ ಮಾಡ್ತಿದ್ದರೆ ಸಾಕಿತ್ತ್. ಆಗ ಮೊನ್ಸಿಗೆ ಒಪ್ಪಿದಂವನ ಆರಿಸಿಕಂಬ ಅವಕಾಸ ನಾವ್ಗೆ ಇರ್‍ತಿತ್ತ್. ಭೀಷ್ಮಾಚಾರ್‍ಯರ್ ಸೊಂಯಂವರ ಮಂಟಮೆಗೆ ಬಂದ ಮೇಲೆನೂ ಸಾಲ್ವ ಭೂಪತಿನ ಮೊದ್ವೆ ಆಕೆ ಆಗ್ತಿತ್ತ್. ಕ್ಷತ್ರಿಯ ಆದಂವ ಒಬ್ಬ ಎಸ್ಟ್ ಬೇಕಾದರ್ ಹೆಣ್ಮಕ್ಕಳ ಮೊದ್ವೆ ಆಕೆ ಸಾದ್ಯ ಇರುವ ಈ ಸಮಾಜಲಿ, ತನ್ನ ಮೂರು ಜನ ಮಗಕ್ಕ ಒಬ್ಬನನೇ ಕೈ ಹಿಡ್ದರೆ ಜೀವನಲಿ ನಿಜವಾದ ಸುಕ ಸಿಕ್ಕಿಕಿಲ್ಲೇಂತ ಅಪ್ಪಂಗೆ ಹೊಳ್ಯಕೆ ಸಾಧ್ಯನೇ ಇಲ್ಲೆ. ಯಾಗೋಳು ಬೀದಿಲಿರುವ ಕಾಟ್ ನಾಯ್ಗಳಾಂಗೆ ಕಚ್ಚಾಡಿಕಂಡ್ ಇರುವ ಅಂವನ ಆಸ್ತಾನದ ಪಂಡತರ್‍ಲಿ, ಹೆಣ್ಮಕ್ಕಳಿಗೆ ಸೊತಂತ್ರ ಕೊಡಿಕಾಗದ್‌ಂತ ಹೇಳ್ವ ಮಾತಿಗೆ ಒಮ್ಮತ ಇತ್ತ್. ಒಮ್ಮೆ ಆಸ್ತಾನ ಪಂಡಿತ ಒಬ್ಬ ಹೆಣ್ಮಕ್ಕಳಿಗೆ ಹೃದಯನೇ ಇಲ್ಲೇಂತೇಳ್ವ ಶ್ಲೋಕನ ಓದಿಕಾಕನ ಇಡೀ ಸಭೆನೇ ಸಂತೋಸ ಪಟ್ಟಿತ್ತ್. ಮೊಂಯಿಂಸರ ಸರೀರದ ಬಗ್ಗೆ ಹನೀಸ್ ಜ್ಞಾನನೂ ಇಲ್ಲದಂವ

ಒಬ್ಬ ಬರ್ದ ಆ ಶ್ಲೋಕನ ಪಂಡಿತರ್ ಹೊಗೊಳ್ದೊ. ತನ್ನ ತಂಗೆಕಳೊಟ್ಟಿಗೆ ಆ ಶ್ಲೋಕನ ಹೇಳಿಕಾಕನ ಅವು ಯಾರೂ ಅದರ ಇರೋದ ಮಾಡ್ತ್‌ಲ್ಲೆ. ಸೀರೆ, ಚಿನ್ನ, ಮತ್ತೆ ಸಿಂಗಾರಲೇ ಮುಣ್‌ಂಗಿದ, ಅದೇ ದೊಡ್ಡದ್‌ಂತ ಹೇಳ್ವವರ ಮೆದ್‌ಳ್ ಸರ್‍ಯಾಗಿ ಕೆಲ್ಸ ಮಾಡಿಕಿಲ್ಲೆ.

ತಂಗೆಕಳೊಟ್ಟಿಗೆ ಗಂಡನ ಹಂಚಿಕಂಬದರ್ಲಿ ಅಂಬೆನ ಇರೋದ ಇತ್ತ್. ಅದರ ಆವ್ವನೊಟ್ಟಿಗೆ ತನ್ನ ಮೊನ್ಸ್‌ಲಿ ಇರ್ದರ ಹೇಳ್ತ್. ಹಟ ಹಿಡ್ದ್ ಒಂದೆರ್ಡ್ ಸರ್ತಿ ಉಂಬೊದರ ನಿಲ್ಸಿತ್. ಅವ್ವ ಮೊರ್ಟತ್. ಅಪ್ಪ ಕರ್‍ಗಿತ್ತೆ. ಅದರ್‌ಂದ ಹೆಚ್ಚ್ ಅದೇನ್ ಮಾಡ್ದು? ಸೊಂಯಂವರದ ಪಂತ ಬದ್ಲಾತ್ತೆ. ಅಂಬೆಗೆ ದಿಕ್ಕೇ ಕಾಣದಾತ್.

ಅದ್ ಸಣ್ಣದಿರಿಕನ ಹಟ ಹಿಡ್ದ್ ಶಸ್ತ್ರ ವಿದ್ಯೆ, ಕುದ್ರೆ ಸವಾರಿ ಕಲ್ತಿತ್ತ್. ಶಾಸ್ತ್ರ ವಿದ್ಯೆನ ಕಲ್ಯೊಕುಂತ ಅದರ ಆಸೆನ ಹೇಳಿಕಂಬಕನ ಕುಲಪುರೋಹಿತ ಹೆಣ್ಣ್‌ಗೆ ಶಾಸ್ತ್ರವಿದ್ಯೆ ಕಲ್ಸಿಕಾಗದ್‌ಂತ ರಂಪ ಮಾಡ್ತ್. ಅಪ್ಪನೂ ಸುರುಗೆ ಹಿಂದೇಟ್ ಹಾಕ್ತ್. ಹೆಣ್ಣ್ ಕಲ್ತ್‌ದ್ ಏನಾಕೂಂತ ಪ್ರಸ್ನೆ ಮಾಡ್ತ್. ತನಿಗೆ ಗಂಡ್‌ಸಂತಾನ ಆಕಿಲ್ಲೇಂತ ಗೊತ್ತಾದ ಮೇಲೆ ಒಪ್ಪಿಕಂಡತ್.

ಅದ್ಕೆ ಶಾಸ್ತ್ರ ವಿದ್ಯೆ ಹೇಳಿಕೊಡ್ತಿದ್ದ ಪುರೋಹಿತ ದಿನಾ ಬೊಳ್ಪುಗೆ ಪಾಟ ಮಾಡಿಕೆ ಮುಂದೆ ಹೆಣ್ಣ್‌ಗೆ ಶಾಸ್ತ್ರ ವಿದ್ಯೆ ಕಲ್ಸಿಕೊಟ್ಟ್‌ದ್ ನಾ ಯಾವ ನರ್ಕಕ್ಕೆ ಹೋಂವೆನೋಂತ ದಿನಾ ಹೆದ್ರಿಕಂಡೇ ಇತ್ತ್. ಅದ್ ನಿಲ್ಲಿಕೆ ದಿನನೂ ಅಂವಂಗೆ ಹತ್ತ್ ಚಿನ್ನದ ನಾಣ್ಯನ ಕೊಡಕಾಗಿತ್ತ್. ಹಣಕಂಡರೆ ಹೆಣನೂ ಬಾಯ್ಬುಟ್ಟದೆ ಅಲ್ಲನೋ? ಆಗ ಅವ್ಕೆ ಸೊರ್ಗ, ನರ್ಕ ಯಾವ್ದುನೂ ನೆಂಪಾದ್ಲೆ. ಅಸ್ಟಕ್ಕೇ ಅದ್ ಮುಗ್ಯತಿತ್ತೆ. ಪ್ರತಿ ಶುಕ್ರವಾರ ಸ್ತ್ರಿ ವಿದ್ಯಾದಾನ ಪಾಪಪರಿಹಾರಕ್ಕೇಂತ ಹೋಮ ಮಾಡಿಕೆ ನೂರು ಚಿನ್ನನ ನಾಣ್ಯಗಳ ತಕಂಬತಿತ್ತ್. ಅರಮನೆಂದ ದೊಡ್ಡ ಪಾತ್ರಲಿ ಹಾಲ್, ತುಪ್ಪ, ಜೇನ್‌ನ ಹೋಮ ಮಾಡಿಕೇಂತ ತಕಂಡೋಗ್ತಿತ್ತ್. ಅಂವ ಹೋಮ ಮಾಡ್ತಿತ್ತೋ ಇಲ್ಲೆನೋ? ಅಂತಾ ಹೆಸ್ರ್‌ನ ಹೋಮ ನಡ್ಸುದರ ಅಂಬೆ ಯಾರ ಬಾಯಿಂದಳೂ ಕೇಳ್ತಿತ್ತೆ. ಆದರೆ ಅಸ್ಟ್ ಕೊಟ್ಟತ್ತರೆ ಅಂವ ಶಾಸ್ತ್ರ ವಿದ್ಯೆ ಹೇಳಿಕೊಡ್ತಿತ್ತೆ. ಅಂಬಿಕೆ ಮತ್ತೆ ಅಂಬಾಲಿಕೆಗೆ ಶಸ್ತ್ರ ಮತ್ತೆ ಶಾಸ್ತ್ರ ವಿದ್ಯೆಲಿ ಹಂಞನೂ ಆಸಕ್ತಿ ಇತ್ತೆ. ಸರೀರಕ್ಕೆ ಗಮನ ಕೊಡೊವು ಬುದ್ಧಿಗೆ ಗಮನ ಕೊಡ್ದುಲ್ಲೆ. ಎಂತದರ ನೋಡಿ ಇವು ವಿಚಿತ್ರವೀರ್ಯನ ಒಪ್ಪಿಕಂಡೊ. ಇವು ಮೊದ್ವೆ ಆದ್ ಅಂವನ ಅಲ್ಲ. ಹಸ್ತಿನಾವತಿನ ಮಿತಿ ಇಲ್ಲದ ಸಂಪತ್ತ್‌ನ.

ಅಂಬೆಗೆ ತಂಗೆಕಳ ಮುಂದೆನ ಬೊದ್‌ಕ್‌ನ ನೆಂದ್ ಬಾಳ ಬೇಜಾರಾತ್. ಮೊನ್ಸ್‌ನ ಮಟ್ಟಂದ ಬುದ್ಧಿನ ಮಟ್ಟಕೆ ಏರಿಕೆ ಅವ್ಕೆ ಆತ್ತೆ. ಅಂಬೆ ಏಚನೆ ಮಾಡದೆ ಯಾವ್ದರ್‍ನೊ ಒಪ್ಪುತಿತ್ತೆ. ಆಡಳ್ತೆ ಮಾಡವರ ಕೆಟ್ಟ ಆಚರಣೆನ ಮತ್ತೆ ಪುರೋಹಿತ ಪಂಗಡದ ದೊಡ್ಡಸ್ತಿಕೆನ ಅದ್ ಸಮರ್ತನೆ ಮಾಡ್ತಿತ್ತೆ. ಅದೆಸ್ಟೋ ಶ್ಲೋಕಗ ಕಾಶಿ ವಿದ್ಯಾಪೀಟಲಿ ಹುಟ್ಟಿ ದೇಶ ಇಡೀ ಹರ್‌ಂಡ್‌ತಿತ್ತ್. ಶಾಸ್ತ್ರಲಿ ಅದೆಸ್ಟು ಅರ್ತ ಇಲ್ಲದ ಶ್ಲೋಕಗ ಇದ್ದನೋ? ನಾಕ್ ವರ್ಣದ ಹೆಮ್ಮಕ್ಕಳಿಗೆ, ಶೂದ್ರರಿಗೆ ಮತ್ತೆ ಕಾಡ್ ಮೊಂಯಿಂಸರ್‌ಗೆ ವೇದಶಾಸ್ತ್ರ ಕಲಿವ ಹಕ್ಕ್ ಇಲ್ಲೆ. ಇದರ ರಾಜನೂ ಒಪ್ಪಿಕಂಡಿತ್ತ್. ಅದ್ಕೆ ಸೇರಿಕಂಡ್ ಹೊಸ ಹೊಸ

ಶ್ಲೋಕಗಳ ಬರ್ಯೋದರ್ಲಿ ಆಸ್ಥಾನದ ಪಂಡಿತರ್ ಏಚನೆ ಮಾಡಿಕಂಡಿದ್ದೊ. ತನ್ನಂತವೇ ಪ್ರಾಯಶ್ಚಿತ ಹೋಮ ಮಾಡಿಸಿ, ಬ್ರಾಂಬ್ರ್‌ಗೆ ಭೂಮಿದಾನ, ಗೋದಾನ, ವಸ್ತ್ರದಾನ, ದವಸಧಾನ್ಯ ದಾನ, ಚಿನ್ನನ ದಾನ ಮಾಡಿ, ಕಲ್ತಕಂಬ ವಿದ್ಯೆ ಬಡ ಹೆಮ್ಮಕ್ಕಳಿಗೆ ದಕ್ಕಿಕೆ ಸಾಧ್ಯನೇ ಇಲ್ಲೆಂತೇಳ್ವ ಮಾತ್ ಅದ್ಕೆ ಪೂರಾ ಗೊತ್ತುಟ್ಟು. ಒಬ್ಬರ್‌ಂದ ಒಬ್ಬನ ಹಿಂಡುವ ಈ ಪದ್ಧತಿನ ನಿಲ್ಸುವ ಅಧಿಕಾರ ಮತ್ತೆ ಸಾಮರ್ತ್ಯ ಇರುವ ಕ್ಷತ್ರಿಯರ್, ಪುರೋಹಿತ ಜನರೊಟ್ಟಿಗೆ ಸೇರಿಕಂಡ್ ಒಟ್ಟಿಗೆ ಈ ವ್ಯವಸ್ಥೆನ ಹಾಳ್‌ಮಾಡ್ದರ, ಬಾಳ ದುಕ್ಕಂದ ನೋಡ್ದರ ಬುಟ್ಟರೆ ಅದ್ ಬೇರೆ ಏನ್‌ನ ಸಾ ಮಾಡುವ ಹಾಂಗಿತ್ಲೆ.

ಶಸ್ತ್ರವಿದ್ಯೆ ಕಲ್ತದರ್‌ಂದ ಅದ್ ಕಾಶಿ ರಾಜ್ಯಲಿ ಎಲ್ಲಿ ಬೇಕರೂ ಬಯ ಇಲ್ಲದೆ ಸಂಚಾರ ಮಾಡ್ತಿತ್. ಗಂಡುಡುಗೆ ತೊಟ್ಟ್ ಅದ್ ಕುದ್ರೆ ಹತ್ತಿ ಹೊರಗೆ ಸಂಚಾರ ಮಾಡಿಕೆ ಹೊರ್ಟರೆ ರಸ್ತೆನ ಎರ್ಡ್ ಪುಡೆಲಿ ನಿತ್ತ ಪ್ರಜೆಗ "ಇಂವ ಯಾರ್ ಹೊಸ್ಬ?"–ಎಂತ ಅಚ್ಚರಿಲಿ ನೋಡ್ತಿದ್ದೊ. "ನೀ ಗಂಡಾಗಿ ಹುಟ್ಟಕಾಗಿತ್ ಮಗಳೇ"–ಎಂತ ಅವ್ವ ಹೇಳಿಕಾಕನೆಲ್ಲಾ, "ಯಾವ ಗಂಡ್‌ಂದ ನಾ ಕಮ್ಮಿ ಒಳೆ? ಹೇಳ್"–ಎಂತ ಅದ್ ಅವ್ವನ ಪ್ರಸ್ನೆ ಮಾಡ್ತಿತ್. ಒಮ್ಮೊಮ್ಮೆ ಅದ್ಕೆ ಈ ಅಂಬಿಕೆ, ಅಂಬಾಲಿಕೆ ಇವರ್‌ಲಿ ಒಬ್ಬನಾದರುನೂ ಗಂಡಾಗಿ ಹುಟ್ಟಿದ್ದರೆ ಒಳ್ಳೆದಿತ್ತ್‌ಂತ ಗ್ರೇಕೆ ಬಾತಿತ್.

ಹಳ್ಳಲಿ ಈಜುದುಂತೇಳ್ರೆ ಅದ್ಕೆ ಪ್ರಾಣ. ಸೊಂಯಂವರದ ಒಂದು ದಿನಕ್ಕೆ ಮುಂದೆ ಕಾಶಿನ ಉಪವನಕ್ಕೆ ಗಂಡ್ ವೇಸಲಿ ಅದ್ ಒಬ್ಬಳೇ ಹೋಗಿತ್. ಕಾವಲ್ ಕಾಯೋವ್ಕೆ ತನ್ನ ಗುರ್ತುನ ತಿಳ್ಸಿ, ಉಪವನದ ಒಳಗೆ ಒಂದು ನರಪಿಳ್ಳೆನನೂ ಬುಡಿಕೆ ಬೊತ್, ಕಾವಲ್‌ನೊವುನೂ ಬಾಕೆ ಬೊತ್ ಎಂತ ಮೂರು ಮೂರು ಸರ್ತಿ ಒತ್ತಿ ಹೇಳಿ, ಎಚ್ಚರ್ಕೆ ಕೊಟ್ಟ್‌ದ್ ಒಳಗೆ ಹೋಗಿತ್. ಸಕ್ತಿನ ಪಂತಕ್ಕೆ ಇಸಿದ್ ನಡ್ಯವ ಸೊಂಯಂವರ ಅದ್ಕೆ ಇಸ್ಟ ಇತ್ಲೆ. ಅದ್ಕೆ ಬದ್ಲಾಗಿ ಏನ್ ಉಪಾಯ ಮಾಡೋಕೂಂತನೂ ಅದ್ಕೆ ಹೊಳ್ತಿಲ್ಲೆ. ಉದ್ಯಾನದ ಹೂದೈಗ, ಮರ ಬೊಳ್ಳಿಗ, ಪೊದೆಗ, ಪಾತೆಗ, ತುಂಬಿಗ, ಚಿಲಿಪಿಲಿ ಸದ್ದ್ ಮಾಡುವ ಹಕ್ಕಿಗ, ಕೊಣ್ಯವ ನವಿಲ್‌ಗ, ಹಾಡ್‌ವ ಕೋಗಿಲೆಗ, ಮಾತಾಡ್ವ ಗಿಳಿಗ, ಮೊಲಗ, ಜಿಂಕೆಗ, ಹಳ್ಳಲಿರುವ ತರತರದ ಮೀನ್‌ಗ ಬೂಮಿತಾಯಿನ ಒಟ್ಟಿಗೆ ಸೇರಿಕೆ ಸಾಯ ಮಾಡ್ತಿದ್ದೊ. ಮೊನ್ಸ್‌ಗೆ ಬೇಜಾರಾಕನೆಲ್ಲಾ ಅದ್ ಅಲ್ಲಿಗೆ ಬಾತಿತ್. ಕುಸಿ ಬಂದಸ್ಟ್ ಹೊತ್ತ್ ಈಜಿ ಎಲ್ಲದರನೂ ಮರ್ಯತಿತ್. ದೊಡ್ಡ ಕೆರೆಲಿ ಒಬ್ಬನೇ ಈಜಿಕಾಕನ, ಮ್ಯೊಂಯಿಂಸನ ಸಣ್ಣತನ, ಮತ್ತೆ ಭೂತಾಯಿನ ದೊಡ್ಡತನ ಅದ್ಕೆ ತಿಳ್ಯತಿತ್. ಆಕಾಸನ ನೋಡಿಕಂಡ್, ಬಾಯಿಲಿ ನೀರ್ ತುಂಬುಸಿ, ತುಟಿಂದ ನೀರ್‌ನ ದೂರಕೆ ಹಾರ್ಸ್ತಾ, ಮಂಕಣೆ ಮೊಲ್ಗಿಕಂಡ್ ಈಜ್‌ಕನ ಬಾಣನ ನೀಲಬಣ್ಣ ಕೆರೆನ ನೀರ್‌ಲಿ ಕಂಡ್‌ದ್ ಬಾಣನೂ ಬೂಮಿನೂ ಒಂದಾದಾಂಗೆ ಗ್ರೇಸಿಕಂಡ್ ಆ ಬಾಣ, ಈ ಬೂಮಿನ ಸಣ್ಣ ಕೂಸು ತಾನ್ ಎಂತ ಹೇಳ್ವ ಒಂದು ಪೊರ್ಲುನ ರೂಪ ಮೊನ್ಸ್‌ಲಿ ಹುಟ್ಟ್‌ತಿತ್. ಬಾಣನ ನೀಲ ಬಣ್ಣ ನೀರ್‌ಲಿ ಕಾಂಬಕಾಕನ ತಾನೇ ಬೂಮಿಂತ ನೆನ್ಸಿಕಂಡ್ ಮೈಮರ್ತ್ ಈಜಿಕನ ಅದರ ಗೋಸ್ಟಿಗೇ ಬಾರದಾಂಗೆ ಅಲ್ಲಿಗೆ ಒಬ್ಬ ಗಂಡ್ ಹೈದ ಬಾತ್.

ಉಪವನದ ಒಳಗೆ ಬಂದ ತೇರ್‌ನ ಅದ್ ನೋಡ್ತ್. ಅದರ ಬುಡಂವ ತೇರ್‌ಂದ ಕೆಳಗೆ ಇಳ್ದ್ ಕುದುರೆಗಳ ಬಿಚ್ಚಿ, ಹಳ್ಳಕ್ಕೆ ತಂದ್ ನೀರ್ನ ಕುಡ್ಸಿತ್. ಸೊಂಪುಲಿ ಬೆಳ್ದ ಹುಲ್ಲುನ ಕುದ್ರೆಗ ಮೇಯಕೆ ಬುಟ್ಟತ್. ಸರೋವರಲಿ ಈಜುವ ಜೂವನ ನೋಡಿ ಅಂವಂಗೆ ಕೂಡಾ ಈಜೊಕೂಂತಾಗಿ ಅಂವನೂ ಬರೇ ಚಡ್ಡಿಲಿ ನೀರ್‌ಗೆ ಹಾರ್‍ತ್. ಎರ್ಡ್ ಕೈಯಿಂದ ಬಲಲಿ ನೀರ್‌ನ ತಳ್ಳಿಕಂಡ್ ಅದರ ಹಕ್ಕಲೆ ಬಾತ್. ಅಂವ ಈಜುವ ರಬಸನ ನೋಡಿ ಅದ್ ದಂಗಾತ್. ಅದರ ಬಾಯಿ ಕಟ್ಟಿ ಹೋತ್. ಅಂವ ಅದರ ಹಕ್ಕಲೆ ಬಾಕನ ಅದರ ಮೋರೆ ಬೆಳ್ಚಿಕಂಡತ್. "ಓ ದೇವ್ರೇ ನಾ ಇದೇನ್ ಮಾಡ್ದೆ? ಅಲ್ಲಿ ದಂಡೆಲಿ ಬಿಚ್ಚಿಸಿದ ಅರ್ವೆಗಳ ನೋಡಿ ಈಜಂವ ಗಂಡ್‌ಂತ ನೆನ್ಸಿದ್ ಗುರ್ತಮಾಡಿಕೊಮ್ಮೋಂತ ಬಂದೆ. ನೀ ಯಾರೇ ಆಗಿರ್ ತೊಪ್ಪು ತಿಳ್ಯಬಡ. ನನ್ನ ಹಕ್ಕಲೆ ಯಾವ್ದೇ ಕೆಟ್ಟ ಏಚನೆ ಇಲ್ಲೆ. ಗೊತ್ತಿಲ್ಲದೆ ನಡ್ದ ಕೆಲ್ಸಕ್ಕೆ ನನ್ನನ ಮಾಪು ಮಾಡ್."– ಎಂತ ಒಂದೇ ಉಸ್ರ್‌ಲಿ ಸಂಸ್ಕೃತ ಬಾಸೆಲಿ ಹೇಳಿ ಮೋರೆನ ತಿರ್‍ಗಿಸಿತ್. ಅಂವ ಮಾತಾಡ್ವ ರೀತಿನ ನೋಡಿ ಅಂವ ಕಾಶಿ ದೇಸದಂವ ಅಲ್ಲಾಂತ ಅದ್ಕೆ ತಿಳ್ದತ್. ಇನ್ನೇನ್ ಅಂವ ದಂಡೆನಹಕ್ಕಲೆ ಹೋಕೆ ಈಜ್‌ಕಂಡ್ ಹೋದೇಂತ ಗೊತ್ತಾಕನ ಅದ್ ಗಂಬೀರ ಸೊರಲಿ ಹೇಳ್ತ್. "ನಿಲ್ಲ್ ಉಪವನಕ್ಕೆ ಅಪ್ಪಣೆ ಇಲ್ಲದೆ ಒಳಗೆ ಬಂದಳ. ಕಾಶೀ ರಾಜನ ಮಗಳ ಈ ಸ್ತಿತಿಲಿ ನೋಡ್ಯಳ. ಎರ್ಡ್‌ನೂ ದೊಡ್ಡ ಅಪರಾದ. ಇಲ್ಲಿನ ಶಾಸನದ ಪ್ರಕಾರ ನಿಂಗೆ ಮರಣದಂಡನೆ ಆಕು. ಏನ್ ನೀ ಅಪರಾಧ ಮಾಡಿ ತೊಪ್ಪಿಸಿಕೊಣಕೂಂತ ಮಾಡ್ಯೊಳೊನೋ ಹೇಂಗೆ?"

ಅಂವ ದಂಡೆಗೆ ಮೋರೆ ಮಾಡಿ ನಿತ್ತಿತ್. ಹಾಂಗೆ ಅಂವ ಹೇಳ್ದ್, "ಅಲ್ಲಿ ದಂಡೆ ಮೇಲೆ ಗಂಡ್‌ಗ ಹಾಕುವ ಅರ್ವೆಗಳ ನೋಡಿ ಈಜಿಕಂಡಿರ್ವ ಹೈದ ಗಂಡ್‌ಂತ ತಿಳ್ದ್ ಬಂದಂವ ನಾ. ನಂಗೆ ರಾಜಕುಮಾರಿನ ಈ ಅವಸ್ತೆಲಿ ನೋಡ್ವೇಂತ ಗ್ರೇಕೆ ಕನ್ಸ್‌ಮೊನ್ಸ್‌ಲಿನೂ ಇತ್ಲೆ. ಕುದ್ರೆಗ ಬಾಳ ದಣ್ದ್‌ಕಂಡಿದ್ದೊ. ಕುಡ್ಯಕಾಗಿ ಬುಸುಗುಟ್ಟುತಿದ್ದೊ. ನನ್ನಲ್ಲಿ ಕೆಟ್ಟ ಏಚನೆ ಇರ್ತಿದ್ದರೆ ನಾ ನಿನ್ನ ಸುಮ್ಮಂಗೆ ಬುಡ್ತಿದ್ದೆನೋ? ನಾ ನಿನ್ನ ಈಗ ಏನ್ ಮಾಡ್ರುನೂ ಇಲ್ಲಿ ತಡ್ಯಕೆ ಯಾರೊಳೊ? ನಾ ಈ ಸರೋವರಕ್ಕೆ ಬಾಕೆ ಮಾಡ್ದ ಸಮಯ ಸಂದರ್ಬನ ಏಚನೆ ಮಾಡ್? ನಿನ್ನ ರಾಜ್ಯಲಿ ಹೊರಗೆಂದ ಬಂದೋವ್ಕೆ, ಮೂಕ ಪ್ರಾಣಿಗಳಿಗೆ ಕುಡ್ಯವ ನೀರ್‌ನ ವ್ಯವಸ್ಥೆ ಏನೇನೂ ಸರಿ ಇಲ್ಲೆ. ಸರಿ ಇರ್ತಿದ್ದರೆ ನಾ ಏಕೆ ಇಲ್ಲಿಗೆ ಬನ್ನೆ? ನೀ ಕಾವಲ್ ಕಾಯ್ವವರ ಮೇಲೆನ ನಂಬಿಕೆಂದ ಇಲ್ಲಿ ಸಾಬೀತಾಗಿ ಈಜಿಯ. ಅದ್ ಸರಿ ಇರ್ತಿದ್ದರೆ ಇಸ್ಟ್ ಸುಲಬಲಿ ನಂಗೆ ಉಪವನಕ್ಕೆ ಬಾಕೆ ಆಗ್ತಿತ್ತೋ? ಈ ಎರ್ಡ್ ದೋಸಕ್ಕೆ ನಿನ್ನ ಅಪ್ಪ ಪ್ರತಾಪಸೇನ ಕಾರ್ಣ ಆದೆ. ಮುಂದೆ ಅಂವಂಗೆ ಮರಣ ದಂಡನೆ ಆಗಲಿ. ಆ ಮೇಲೆ ನಿನ್ನ ಉರ್ಳಿಗೆ ನಾ ಕೊರ್ಳ್ ಕೊಟ್ಟನೆ."

ಅಂವನ ಮಾತ್‌ಗೆ ಅದರ ಹಕ್ಕಲೆ ಉತ್ತರ ಇತ್ಲೆ. ಕುಡ್ಯವ ನೀರ್‌ನ ಕೊಡಿಕಾಗದ, ಸ್ವತಾ ರಾಜಕುಮಾರಿಗೆ ಬದ್ರತೆನ ಒದ್ಗಿಸಿಕೆ ಆಗದ ರಾಜ್ಯ ತನ್ನದ್‌ಂತ ಒಪ್ಪಿಕಂಬಕೆ ಅದ್ಕೆ ಕಸ್ಟ ಆದೆ. ಆದರೆ ಅದ್ ನಿಜ. ಮಾತ್‌ಲಿ ಅವಳ ಸೋಲ್ಸಿದಂವ ಈಗಳೂ ಅದ್ಕೆ ಬೆನ್ನ್ ಹಾಕಿನೇ ನಿತ್ತುಟು. ಅಂವ ಚಪಲದಂವ ಅಲ್ಲ. ಉದ್ಯಾನನ ಅಕ್ರಮ ಪ್ರವೇಶ ಮಾಡ್ದಂವ

ಈಗ ನೇರ ದಾರಿಲೇ ಅದರ ಎದೆ ಒಳಗೆ ಹೊಕ್ಕತ್. ಆದರೆ ಅದರ ಹೊರಗೆ ತೋರ್ಸ್ಸಿ ಕಣದೆ ಅದ್ ಗಂಬೀರ ದನಿಲಿ ಹೇಳ್ದ್, "ಕೊಂಕು ಮಾತ್ ಬೇಡ, ಕಾಶೀ ರಾಜ್ಯದ ಶಾಸನನ ಮುರ್ದ್ದ ಈ ದೊಡ್ಡ ಮ್ಯೊಂಸ ಯಾವ ದೇಸದಂವನೋ?"

ಅಂವ ದೊಡ್ಡ ದನಿಲಿ ನೆಗಾಡ್ತ್. "ಕೊಂಕು ಈಗ ನೀ ಹೇಳ್ದ ಮಾತ್‌ಲಿ ಉಟ್ಟು. ರಾಜಕುಮಾರಿ, ನಾ ನಾಳೆ ನಿನ್ನನ ಸೊಂಯಂವರ ಮಂಟಮೆಲಿ ಮೊದುಮಗಳ ಅಲಂಕಾರಲಿ ನೋಡುವಂವ. ಅದೃಷ್ಟನೇ ಇರೋಕು. ಇಂದೇ ನಿನ್ನ ನೋಡಿಬುಟ್ಟೆ. ಇಡೀ ಆರ್ಯಾವರ್ತದ ಯಾವ ರಾಜರಿಗೂ ಇಲ್ಲದ ಯೋಗ. ಬಾಳ ದೂರಂದ ಬಂದಳೆ. ಪರದೇಸದ ನೆಂಟನ ಹೀಂಗೆ ನಿಲ್ಲಿಸುದು ಸರಿ ಅಲ್ಲ. ನನ್ನದ್ ಸೌಭದೇಸ. ನನ್ನ ಜನ ಸಾಲ್ವ ಭೂಪತಿ ಎಂತ ಕರ್ದವೆ."

ಸೌಬದ ಸಾಲ್ವ ಭೂಪತಿ! ಅಂಬೆ ಬೆಚ್ಚಿ ಬೀತ್. ಕುದುರೆ ಸವಾರಿಲಿ ಏನಿಲ್ಲರೂ ಐದ್ ದಿನ ಆದೆ ಸೌಬಂದ ಕಾಶಿಗೆ ಬಾಕೆ. ಅಂವನ ಸಾಹಸ, ಸಕ್ತಿನ ಬಗೆ ಬಗೆ ಕತೆನ ಕಾಶಿಲಿ ಕೇಳಿಟು. ಕಾಡ್ ಮೊಂಯಿಂಸಾಂತ ಅಂವನ ಆರ್ಯಾವರ್ತದ ರಾಜರ್‌ಗ ದೂರ ಇಸಿದ್ದೊ. ಅಂವ ಅಳ್ದ್, ಒಳ್ದ ಕಾಡ್ ಮೊಂಯಿಂಸರ ಎಲ್ಲಾ ಸೇರ್ಸಿ ಬಲಿಷ್ಠ ರಾಜ್ಯ ಒಂದರ ಕಟ್ಟಿಟು. ಆರ್ಯಾವರ್ತದ ರಾಜರ್ಲಿ ಅವನಸ್ಟ್ ಪರಾಕ್ರಮಿಗ ಯಾರೂ ಇಲ್ಲೇಂತ ಅಪ್ಪ ಎಸ್ಟೋ ಸಲ ಹೇಳ್ದರ ಅದ್ ಕೇಳಿಟು. ಕಾಡ್ ಮೊಂಯಿಂಸಾಂತ ಅಪ್ಪ ಅವಂಗೆ ಸೊಂಯಂವರದ ಕಾಗ್ದನನೇ ಕಳ್ಸಿತ್ತೆ. ಹೇಳಿಕೆ ಇಲ್ಲದಂವ ಬಂದುಟ್ಟೊಂತೇಳ್ರೆ ನಾಳೆ ಮೊದ್ವೆ ಮಂಟಮೆಲಿ ಏನಾದನೋ?

ಅದ್ ಮಾತಾಡದೇ ಇದ್ದದರ ನೋಡಿ ಅಂವ ಹೇಳ್ದ್ "ಸಾಲ್ವ ಭೂಪತಿನ ಹೆಸ್ರ್ ಕೇಳಿ ನಿಂಗೆ ಹೆದ್ರಿಕೆ ಆತೋ? ಕಾಶೀರಾಜಂಗೆ ಮೂರ್ಜನ ರಾಜಕುಮಾರಿಗಾಂತ ನಾ ಕೇಳ್ವಳೆ. ಅವರ್ಲಿ ನೀ ಯಾರ್‌ಂತ ನಂಗೆ ಗೊತ್ತಾತ್ತೆ. ಸಕ್ತಿನ ಪಂತಕ್ಕೆ ಇಸಿ ನಿನ್ನ ಅಪ್ಪ ಸೊಂಯಂವರನ ಮಾಡಿಟ್ಟೊಂತ ನಾ ಕೇಳ್ದೆ. ಆರ್ಯಾವರ್ತಲಿ ದೊಡ್ಡ ಸಕ್ತಿವಂತ ಯಾರ್‌ಂತ ತೋರ್ಸಿಕೆ ನಾ ಬಂದಳೆ. ಹಿಂಡ್‌ಗಟ್ಟಲೆ ರಾಣಿಗಳ ಮೊದುವೆ ಆದ ರಾಜರಿಗಳಿಗೂ ನಿನ್ನ ಅಪ್ಪ ಕಾಗ್ದ ಕಳ್ಸಿಟು. ಆದರೆ ಒಬ್ಬ ಮೊದ್ವೆ ಆಗದ ಸಾಲ್ವ ಭೂಪತಿನ ನಿನ್ನ ಅಪ್ಪ ಹೊರಗೆ ಇಸಿಟು. ಏಕೇಂತ ನಿಂಗೆ ಗೊತ್ತಿರ್ದು. ಸಾಲ್ವ ಭೂಪತಿ ಅಂವನ ಲೆಕ್ಕಲಿ ಒಂದು ಕಾಡ್‌ಮೊಂಯಿಂಸ. ಮೊಂಯಿಂಸಂಗ ಎಲ್ಲಾ ಒಂದೇ ಜಾತೀಂತ ತೋರ್ಸಿಕೊಡಿಕೆ ನಾ ಬಂದಳೆ. ನೀ ಹೆದ್ರುವ ಅಗತ್ಯ ಇಲ್ಲೆ. ನಾ ಏನ್ ಸೈನ್ಯನ ಕಟ್ಟಿಕಂಡ್ ನೆತ್ತರ್ ಹರ್ಸಿಕೆ ಬಂದಂವ ಅಲ್ಲ. ಒಬ್ಬನೇ ಬಂದಳೆ. ನಾಳೆ ಸೌಬಕ್ಕೆ ಹೋಕಾಕನ ನನ್ನ ರಥಲಿ ಕಾಶಿನ ಮೂರ್ ಜನ ರಾಜಕುಮಾರಿಗ ಇದ್ದವೆ."

ಅಂವನ ಆತ್ಮ ವಿಸ್ವಾಸದ ಮಾತ್‌ಗೆ ಅದ್ ಪೂರಾ ಸೋತ್ ಹೋತ್. "ಸಾಲ್ವಭೂಪತೀ ನಾ ಕಾಶೀ ರಾಜನ ದೊಡ್ಡಮಗ ಅಂಬೆ. ಸೊಂಯಂವರಲಿ ಇರ್ವ ಕುಂದು ಕೊರ್ತೆಗೆ ನಾ ಹೊಣೆ ಅಲ್ಲ. ವಿಕ್ರಮನ ಪಣ ಆಗಿ ಇಸಿಕಾಕನ ಅಪ್ಪ ನನ್ನ ಒಂದು ಮಾತ್‌ನನೂ ಕೇಳ್ತಿಲ್ಲೆ. ನಾಳೆ ನೀ ಒಳ್ದ ರಾಜರ್‌ಗಳ ಗೆದ್ದರೆ ತಂಗೆಕಳೊಟ್ಟಿಗೆ ನಾ ನಿನ್ನೊಟ್ಟಿಗೆ ಬರಕೇ ಬರಕಾದೆ.

ನಾ ತಕ್ಕ ಮಟ್ಟಿಗೆ ಶಸ್ತ್ರ ಮತ್ತೆ ವೇದನ ಅಬ್ಬೆಸ ಮಾಡ್ಯಳೆ. ಗಂಡ್ ಉಡ್ಪುಲಿ ಹೊರಗೆ ಸಂಚಾರ ಮಾಡಿ ಲೋಕ ಜ್ಞಾನ ಪಡ್ಯೋದು ನನ್ನ ಅಬ್ಬೆಸ. ನನ್ನ ಕಾವಲ್‌ಗಾರರ್ ಹೇಂಗಿದ್ದರುನೂ ನನ್ನ ನಾ ರಕ್ಷಣೆ ಮಾಡಿಕಂಬೆ. ಸಾಕಸ್ಟ್ ಅರ್ವೆ ಹಾಕಂಡೇ ನೀರಿಗೆ ಇಳ್ದ ಗೂಡೆ ನಾ. ನೀ ದಾರಾಳಲಿ ತಿರ್‍ಗಿ ನಿಲ್ಲಕ್."

ಸಾಲ್ವ ಭೂಪತಿ ನಿದಾನಲಿ ತಿರ್‍ಗಿ ನಿತ್ತತ್. ದೊಡ್ಡ ಹಣೆ, ಉದ್ದ ಮೂಂಕು, ಹುರಿ ಮಿಾಸೆ ಸಕ್ತಿ ತುಂಬಿದ ತೋಳ್‌ಗ, ಮೋರೆಲಿ ನೆಗೆ ಇಸ್ಟ್ ಹೊತ್ತ್ ಆದರೂ ಸಂಯಮ ಕಳ್ದ್‌ಕಣದ ನಡೋಳ್ಕೆ, ಹೆಣ್ಣ್ ಒಂಟಿ ಆಗಿರಿಕನ ಯಾರ್ ಬುದ್ದಿನ ಕಳ್ಕಂಬದ್ಲೆನೋ ಅಂವ ನಿಜಲಿ ಗಂಡ್. ಅದರ ನೋಡಿ ಅಂವ ಮೆಚ್ಚಿತ್. ಅಂವನ ಗಂಡ್‌ಸ್ತನದ ದಿಟ್ಟಿ ಅದರ ಮೇಲೆ ಹರ್‍ಯಕನ ಅದ್ಕೆ ಹೆಣ್ತನದ ನಾಚಿಕೆ ಆಗಿ ಅದರ ಮೋರೆ ಕೆಂಪಾತ್. ಅದ್ ಅಂವನ ನೋಡಿಕಾಗದೆ ಅಡಿ ಮೋರೆ ಹಾಕಿತ್.

ಅಂವ ಅಂವನ ಮೊನ್ಸ್‌ಲಿ ಇದ್ದದರ ಹೇಳ್ತ್. "ರಾಜಕುಮಾರಿ, ನಾ ನಂಗೆ ಒಪ್ಪುವ ಗೂಡೆನ ಹುಡ್ಕಿಕಂಡೊಳೆ. ಅದ್ ನನ್ನೊಟ್ಟಿಗೆ ಸಂಸಾರಮಾಡ್ರೆ ಸಾಲದ್, ನನ್ನ ರಾಜ್ಯನ ನಡ್ಸುವ ಸಾಮರ್ತ್ಯ, ಪ್ರಜೆಗಳ ತಿಳಿವಳ್ಕೆಂದ ಮುಂದೆ ತಾವ ಸಕ್ತಿ ಅದಕ್ಕಿರೊಕೂಂತ ಕನ್ಸ್ ಕಂಡಂವ ನಾ. ಹುಟ್ಟ್‌ಂದ ಬಂದ ಜಾತಿ ಮತ್ತೆ ವರ್ಣನ ಮೆಟ್ಟಿ ನಿಲ್ಲುವ ಮೊಂಯಿಂಸತನ ಅದಕ್ಕಿರೊಕು. ನಿನ್ನ ಮಾತ್, ರೂಪ ಎರ್‍ಡ್‌ನೂ ನಂಗೆ ತುಂಬಾ ಕುಸಿ ಕೊಟ್ಟತ್. ನಾಳೆ ನಾ ಪಂತಲಿ ಗೆದ್ದೇ ಗೆದ್ದನೆ. ಆಗ ನಾ ನಿನ್ನ ತಂಗೆಕಳನೂ ಮೊದ್ವೆ ಆಕಾದೆ. ನಂಗೆ ಬೇಕಾದ್ ನೀ ಮಾತ್ರ. ಈ ಹೆಣ್‌ಮೊರ್‍ಳ ಕ್ಷತ್ರಿಯರ ನೊಡುಲಿ ಒಬ್ಬನೇ ರಾಣಿನ ಕಟ್ಟಿಕಂಡ್ ಬಾಳ್ದರ ನಾ ಅವ್ಕೆ ತೋರ್‍ಸಿ ಕೊಟ್ಟನೆ. ನಾ ನಿಂಗೆ ಇಸ್ಟ ಆದರೆ ಈಗಳೇ ಸೌಬಕ್ಕೆ ಪೋಯಿ. ಈ ನಿಮ್ಸಲಿ ಈಗಳೇ ಬೇಕರೆ ನಾವು ಗಂದರ್ವ ಮೊದ್ವೆ ಮಾಡಿಕಣಕ್. ಸಾಲ್ವ ಭೂಪತಿನ ಪಟ್ಟದ ರಾಣಿ ಆಗಿ ನನ್ನ ಹೃದಯ ಸಿಂಹಾಸನನ ಆಳ್. ನಮ್ಮಲ್ಲಿ ನಿಂಗೆ ಇನ್ನ್ ಸಾ ಶಸ್ತ್ರ-ಶಾಸ್ತ್ರ ಕಲ್ಯವ ಏರ್ಪಾಡ್ ಮಾಡ್ನೆ."

ಅಂಬೆನ ಎದೆ ತುಂಬಿ ಬಾತ್. ನನ್ನ ಅರ್ತಮಾಡಿಕಂಬ ಒಬ್ಬ ಗಂಡ್‌ಂತ ಸಾಲ್ವ ಭೂಪತಿನ ಮೇಲೆ ಗೌರವ ಮೂಡ್ತ್. ಮೊನ್ಸ್ ಅಲ್ಲಾಡ್ತ್. ಹೋಗಿ ಬುಡೊಮೋ? ಮೊನ್ಸ್ ಬಿಚ್ಚಿ ನೇರ ನೇರ ಕೇಳ್ದ್. ಹೋಗೊಮೊ? ಕಪಟ ಒಂದೀಸ್ ಇಲ್ಲದ ಇಂವನ ರಾಣಿ ಆಕು. ಹೋಗೊಮೊ? ಆರ್ಯಾವರ್ತದ ರಾಜ ಮಹಾರಾಜರಿಗೆ ಇಲ್ಲದ ಸಂಕಲ್ಪ ಇಂವಂದ್ ಒಂದೇ ಹೆಣ್ಣ್‌ನ ಕಟ್ಟಿಕಂಬೊದು. ಹೋಗೊಮೊ? ನಾಳೆ ಇಂವ ಗೆದ್ದರೆ ಇಂವನೊಟ್ಟಿಗೆ ತಂಗೆಕಳಿಗೆನೂ ಪಾಲ್ ಕೊಡೊಕು. ಈಗಳೇ ಹೊರ್‍ಡೊಮೋ? ಇನ್ನ್ ಶಸ್ತ್ರ ವಿದ್ಯೆ ಕಲ್ಯಕೆ ಏರ್ಪಾಡ್ ಮಾಡ್ದೆ ಗಡ. ಶಾಸ್ತ್ರ ಶಿಕ್ಷಣ ಕಲ್ಸಿಕೆ ಏರ್ಪಾಡ್ ಮಾಡ್ದೆ ಗಡ. ಹೋಗೊಮೋ? ಹೋಗೋಮೋ?

ಇಲ್ಲಿಂದಳೇ ಸಾಲ್ವ ಭೂಪತಿನೊಟ್ಟಿಗೆ ಹೋಗಿ ಬುಟ್ಟರೆ ಏನಾದೆ? ನಾಳೆ ಸೊಂಯಂವರ ಮಂಟಮೆಲಿ ಸೇರ್‍ದ ರಾಜಮಾರಾಜರ್ ತಮ್ಗೆ ಅಪಮಾನ ಆತ್‌ಂತ ನೆನ್ಸಿಕಂಡವೆ. ಅಪ್ಪನ ಮೇಲೆ ತಿರ್‍ಗಿ ಬಿದ್ದವೆ. ಮುದಿ ಪ್ರಾಯಲಿ ಇರುವ ಅಪ್ಪಂಗೆ ಅವರೆಲ್ಲರ ಎದುರ್‍ಸುವ

ಸಕ್ತಿ ಇರ್ದುಲ್ಲೆ. ಅಪ್ಪನ ಕೊಂದು ಬುಡುವೊ. ತಂಗೆಕಳ ಮೊದುವೆ ನಿತ್ತ್ ಹೋದು. ರಾಜರ್ ಇಲ್ಲದೆ ಕೊಲೆ, ಸುಲ್ಗೆ, ದೊಂಬಿ, ದರೋಡೆಗ ನಡ್ಯೋದು. ಅಪ್ಪನ ಮಾತ್‌ಗೆ ತೊಪ್ಪಿ ಇದಕ್ಕೆಲ್ಲಾ ನಾನೇ ಕಾರಣಾಂತ ಜನ ನನ್ನ ಬಾಯಿಗೆ ಬಂದಾಂಗೆ ಬ್ಯೊವೊ. ನಂಗೆ ಜೂವ ಇರ್ವವರೆಗೆ ಕೆಟ್ಟ ಹೆಸ್ರ್ ಅಂಟುದು. ಕಾಡ್‌ಮೊಂಯಿಂಸಾಂತ ಹಿಯ್ಯಾಳ್ಸಿಕಂಬ ಸಾಲ್ವ ಭೂಪತಿಗೆ ಹೆಣ್ಣ್ ಕಳ್ಳಾಂತೆ ಕೆಟ್ಟ ಹೆಸ್ರ್ ಬಂದದೆ.

ಮುಂದೆ ನಡ್ಯವ ಅಪಾಯಗಳ ನೆಂದ್‌ದ್ ಅಂಬೆ ಹೇಳ್ದ್, "ನಾಳೆನ ಪಂತಲಿ ಎಲ್ಲರ್‍ನೂ ನೀ ಗೆದ್ದೇ ಗೆದ್ದಿಯಾಂತ ನಂಗೆ ನಂಬಿಕೆ ಉಟ್ಟು. ಅಪ್ಪ ನಿರ್ಣಯಮಾಡ್ದ ಪಂತನ ನೀ ಗೆದ್‌ದ್ ನನ್ನ ನೀ ಮೊದ್ವೆ ಆದೇ ಧರ್ಮ. ನಿನ್ನೊಟ್ಟಿಗೆ ನಾ ಈಗ ಹೊರ್ಟ್‌ಬುಟ್ಟರೆ ಆರ್ಯಾವರ್ತದ ರಾಜಮಾರಾಜರ ದೃಷ್ಟಿಲಿ ನೀ ಸೊಂಯಂವರ ಮಂಟಮೆಗೆ ಕಾಲಿಸಿಕೆ ಹೆದ್ರಿದ ಹೇಡೀಂತ ಕಾಂಬ ಮಹಾ ಪರಾಕ್ರಮಿಯಾದ ಸಾಲ್ವ ಭೂಪತಿನ ಹೆಸ್ರ್‌ಗೆ ಕಳಂಕ ಬಾದು ಬೇಡ. ನೀ ಎಂತಂವಾಂತ ಎಲ್ಲೋರ್‍ವೂ ತೋರ್ಸುವ ಒಂದು ಸಂದರ್ಭ ಈಗ ನಿಂಗೆ ಸಿಕ್ಕಿಟು. ಇದರ ಸರಿಯಾಗಿ ಉಪಯೋಗಿಸಿ ನಿನ್ನ ಯೋಗ್ಯತೆನ ಎಲ್ಲವ್ಕೂ ತೋರ್ಸು. ಅವರೆಲ್ಲರ ಗೆದ್ದ ಗಂಡ್‌ಗಲಿ, ನನ್ನ ಗಂಡಾಂತ ಜೂವಮಾನ ಇಡೀ ಹೆಮ್ಮೆಂದ ಹೇಳಿಕಂಬ ಬಾಗ್ಯನ ನಂಗೆ ಕೊಡು."

ಸಾಲ್ವ ಭೂಪತಿನ ಎದೆ ತುಂಬಿಬಾತ್. ಅಂವ ಹೆಮ್ಮೆಂದ ಅಂಬೆನ ದಿಟ್ಟಿಸಿ ನೋಡ್ತ್. ಅದ್ ಮಾತಾಡ್ದ ಮಾತ್‌ಗಳ್ಗೆ ಅಂವ ತಲೆದೂಂಗಿತ್. ಒಂದಸ್ಟ್ ಹೊತ್ತ್ ಅವು ಒಬ್ಬರ್ನ ಒಬ್ಬ ನೋಡ್ದರ್ಲೆ ಹೊತ್ತ್‌ನ ಕಳ್ದೊ. ಮತ್ತೆ ಹೇಳಿಕೆ ಮಾತೇ ಒಳ್ತ್‌ಲ್ಲೆ. ಅಂವ ಇನ್ನಸ್ಟ್ ಹೊತ್ತ್ ಅಲ್ಲೇ ಒಳ್ಯಲೀಂತ ಅವ್ನ ಮೊನ್ಸ್ ಹೇಳ್ತ್. ಅಂವಂಗೂ ಒಳ್ಯಕೆ ಮೊನ್ಸಿತ್ತ್. ಆದರೆ ಹೇಂಗೆ ಒಳ್ಯೋದೂಂತ ಅಂವನ ಮೊನ್ಸ್ ಕಾಡ್ತಿತ್ತ್. ಅಂವ ಮತ್ತೊಮ್ಮೆ ಅದರ ಕಣ್ತುಂಬಾ ನೋಡಿ, ಮೋರೆಲಿ ನೆಗೆನ ಹರ್‌ಂಡ್‌ಸಿ ನಿದಾನಲಿ ದಂಡೆ ಕಡೆಗೆ ಈಜಿಕೆ ಸುರುಮಾಡ್ತ್. ಮೇಂದಕಂಡಿದ್ದ ಕುದ್ರೆಗಳ ರಥಕ್ಕೆ ಕಟ್ಟಿ, ತಾನೇ ರಥನ ಬುಟ್ಟ್‌ಕಂಡ್ ನಿದಾನಲಿ ಕಣ್ಣ್‌ಂದ ಮರೆ ಆಗಿ ಹೋತ್. ಅಂವ ಹೋದ ಎಸ್ಟೋ ಹೊತ್ತ್‌ಂದ ಮೇಲೆ ಅದ್ ಭಾರದ ಮೊನ್ಸ್‌ಲಿ ನೀರ್‌ಂದ ಮೇಲೆಗೆ ಎದ್ದ್ ಬಾತ್.

ಅರಮನೆಗೆ ಬಂದ ಮೇಲೆ ಸಾಲ್ವ ಭೂಪತಿನ ಇಸಯನ ಅವ್ವನೊಟ್ಟಿಗೆ ಹೇಳಿಬುಡೊಕೋಂತ ಏಚನೆ ಮಾಡ್ತ್. ಅಂವ ಬಂದದ್, ಹೋದ್, ಮಾತಾಡ್ದ್ ಎಲ್ಲಾ ಹೇಳಿಕಾಗದ ಒಂದು ಹುರ್ಪು. ಒಂದ್ ಗಂಡ್ ಮತ್ತೆ ಒಂದ್ ಹೆಣ್ಣ್ ಹಾಂಗೆ ಭೇಟಿ ಮಾಡ್ದ್ ಅದ್ ಏಚನೆ ಮಾಡಕಾಗದ ಒಂದು ಸಂಗತಿ ಆಗಿತ್ತ್. ಕಾಶಿನ ಒಬ್ಬನೇ ಒಬ್ಬ ಹೊಂತಗಾರ ಹೈದ ಅದರ ಮೊನ್ಸಿಲಿ ಪ್ರೀತಿನ ಅರ್‍ಳಿಸಿತ್ಲೆ. ಸಾಲ್ವ ಭೂಪತಿನ ಸುರುನ ಭೇಟಿಲೇ ಅದರ ಎದೆಲಿ ಪ್ರೀತಿನ ಹೂ ಅರ್‍ಳಿತ್. ಶೌರ್ಯವಂತ ಸಾಲ್ವ, ನೀತಿವಂತನೂ ಆಗಿತ್ತ್. ಗುಣ ನಡ್ತೆಲಿ ಅಂವನ ಮಿಾರ್ಸಂವ ಯಾರುನೂ ಇತ್ಲೆ. ತಪ್ಪಿ ಕೂಡಾ ಅಂವ ಸರೋವರಲಿ ಅವಳ ಮುಟ್ಟಿತ್ಲೆ. ಹೆಣ್ಮಕ್ಕ ಇರ್ದೇ ಭೋಗಕ್ಕೇಂತ ಹೇಳುವ ಆರ್ಯಾವರ್ತದ ಕ್ಷತ್ರಿಯರ್ ಎಲ್ಲಿ? ಒಂಟಿ ಹೆಣ್ಣ್ ಸಿಕ್ಕಿಕಾಕನ ಯಾರುನೂ ನೆನ್ಸದ ರೀತಿಲಿ ಸಬ್ಯತೆಂದ

ನಡ್ಕಂಡ್ ಕಾಡ್ ಮೊಂಯಿಂಸರ ರಾಜ ಸಾಲ್ವ ಭೂಪತಿ ಎಲ್ಲಿ? ಆದರೆ ಅವ್ವನೊಟ್ಟಿಗೆ ಸರೋವರಲಿ ನಡ್ದ ಸಂಗತಿನ ಹೇಳಿ ಏನ್ ಪ್ರೋಜನ? ನನ್ನ ಜೂವನಲಿ ನಡ್ದ ಈ ಸಿಂಯಿ ಸಂಗತಿನ ಈಗ ಯಾರೊಟ್ಟಿಗುನೂ ಹೇಳ್ದು ಬೇಡಾಂತ ಅಂಬೆ ನಿರ್ಧಾರ ಮಾಡ್ತ್.

ಸೊಂಯಂವರ ಮಂಟಮೆಲಿ ಸಾಲ್ವ ಭೂಪತಿನ ಸೋಲ್ಸಿಕೆ ಯಾರ್‌ಂದಳೂ ಆತ್ಲೆ. ಮೊದೋಳ್ತಿಗೆನ ಸಿಂಗಾರಲಿ ಇದ್ದ ಅಂಬೆ ತುಂಬಾ ಕುಸಿಂದ ಅವನ ನೋಡಿಕಾಕನ ಅಂವಂಗೆ ಹೊಸ ಹುರ್ಪು ಬಾತ್. ಅಂವನ ನೋಡಿನೇ ಅಪ್ಪ ಚಪ್ಪೆ ಆತ್. ಸಾಲ್ವ ಭೂಪತಿ ಗೆಲ್ಲುದರ ಅಪ್ಪ ಸೋತ ನೋಟಲಿ ನೋಡ್ತಿತ್ತ್. ಸಕ್ತಿನ ಪಂತಕ್ಕೆ ಇಸಿದ್ ಈಗ ತಪ್ಪೂಂತ ಅಪ್ಪಂಗೆ ಆಗಿರೊಕು. ತಾವು ಹುಟ್ಟಿಕನನೇ ದೊಡ್ಡ ಕುಲದೊವೂಂತ ಬೀಗ್‌ತಿದ್ದ ಆರ್ಯಾವರ್ತದ ರಾಜಮಾರಾಜರ್‌ಗಳ್ ಯಾಗೋಳೂ ಮರ್‍ಯದ ಪಾಟನನೇ ಈ ಕಾಡ್ ಮೊಂಯಿಂಸ ಕಲ್ಸಿತ್.

ಅಸ್ಸಾಕನ ಭೀಷ್ಮಾಚಾರ್‍ಯರ್ ಬಿರ್ಗಾಳಿನಾಂಗೆ ಸೊಂಯಂವರ ಮಂಟಮೆಗೆ ನುಗ್ಗಿದೊ. ಅವರಂತಾ ಬಿಲ್ಲ್ ವಿದ್ಯೆಲಿ ಬಿರ್ಸರ್ ಆರ್ಯಾವರ್ತದ ಕ್ಷತ್ರಿಯರಲ್ಲಿ ಯಾರ್‌ನೂ ಇಲ್ಲೇಂತ ಅಂಬೆ ಕೇಳಿ ತಿಳ್ದಿತ್ತ್. ಅವು ತಮ್ಮ ಗುರ್ತು ಪರ್ಚಯ ಮತ್ತೆ ತಾವು ಬಂದ ಕಾರ್ಣನ ತಿಳ್ಸಿ, "ನನ್ನ ರಥನ ಹತ್ತಿನಿ" ಅಂತ ಮೊದೋಳ್ತಿಗಳಿಗೆ ಹೇಳಿಕಾಕನ ಏನ್ ಮಾಡೊಕೂಂತ ತಿಳ್ಯದೆ ಅಂಬೆ ಅಪ್ಪನ ಮೋರೆನ ನೋಡ್ದೆ. ಸಿಟ್ಟ್‌ಂದ ನಡ್ಗ್‌ತಿದ್ದ ಅಪ್ಪ, ಒಮ್ಮಿಂದೊಮ್ಮೆಗೆ ನಡ್ದದರ ಎದ್‌ರ್‌ಸಿಕೆ ಸಿದ್ಧ ಇತ್ಲೆ. ಅಂಬೆ ಸಾಲ್ವ ಭೂಪತಿನ ಉಪಾಯ ಇಲ್ಲದೆ ನೋಡ್ದೆ. ಅಂವ ಕೈಲಿದ್ದ ಬಾಳ್ಕತ್ತಿನ ಎತ್ತಿಕಂಡ್ ಭೀಷ್ಮರ ಮೇಲೆ ಕಾಳಗಕ್ಕೆ ಬಾತ್. ಭೀಷ್ಮರ್ ಬುಟ್ಟ ಬಾಣ ಅಂವನ ಬಾಳ್‌ಕತ್ತಿನ ಎತ್ತ ಹಾರ್ಸಿತೋ ಅಂವಂಗೇ ಗೊತ್ತಾತ್ಲೆ. ಅಂವ ಬಿಲ್ಲ್ ಬಾಣನ ಹಿಡ್ದ್ ಕಾದಿಕೆ ಬಾತ್. ಆರ್ಯಾವೃತ್ತಲಿ ಬಿಲ್ಲ್ ವಿದ್ಯೆಲಿ ಎಲ್ಲರ್‌ಂದ ಬಿರ್ಸಾಂತೇಳ್ವ ಪರಶುರಾಮರಲ್ಲಿ ಬಿಲ್ಲ್‌ವಿದ್ಯೆನ ಕಲ್ತ ಭೀಷ್ಮಾಚಾರ್‍ಯರ ಸಾಲ್ವ ಭೂಪತಿಗೆ ಸೋಲ್ಸಿಕೆ ಆಕಿಲ್ಲೇಂತ ಆ ಗಳ್ಗೆಲಿನೂ ಕಾಶಿರಾಜ ಅದರೊಟ್ಟಿಗೆ ಹೇಳ್ತ್. ಕಾಶಿ ರಾಜಕುಮಾರಿಯರ ಧರ್ಮಪ್ರಕಾರ ಗೆದ್ದ ಸಾಲ್ವ ಭೂಪತಿ, ಈಗ ಸೋತ್‌ಹೋತ್. ಕಾಡ್ ಮೊಂಯಿಂಸರ ರಾಜ ಆದ ಸಾಲ್ವ ಯಾರ್‌ಂದ ಬಿಲ್ಲ್ ವಿದ್ಯೆನ ಕಲ್ತ್ ಕಂಡತೋ ಏನೋ? ಮಲ್ಲ ವಿದ್ಯೆಲಿ ಆದರೆ ಭೀಷ್ಮಾಚಾರ್‍ಯರ ಅರೆಗಳ್ಗೆಲಿ ಹೆರ್ಕಿ ಇಡ್ವ ಬಲ ಅಂವನ ತೋಳ್‌ಗಳಿಗೆ ಇತ್ತ್. ಅಂಬೆ ನಡ್ಗಿ ಹೋತ್. ತಾನ್ ಈಗ ಸಾಲ್ವ ಭೂಪತಿನೊಟ್ಟಿಗೆ ಹೊರ್‍ಟ್ ಹೋದು ಇನ್ನಸ್ಟ್ ಕಷ್ಟಗಳ್ಗೆ ಕಾರ್ಣ ಆದೂಂತ ಅದ್ ನೆನ್ಸಿತ್. ಸಕ್ತಿನ ಪಂತಕ್ಕೆ ಇಸಿದ ಅಪ್ಪನ ಮೊನ್ಸ್‌ಲಿ ಹೆಣ್ಮಕ್ಕ ಯಾಗೋಳೂ ಬಲ ಇದ್ದವರ ಸೊತ್ತ್‌ಂತ ಇದ್ದಿರೊಕು. ಅದ್ ಈಗ ಅಪ್ಪನ ಇಚ್ಚೆಗೆ ಇರೋದ ಆಗಿ ನಿಜ ಆಗುಟು. ತಂಗೆಕಳ ಕಡೆಗೆ ನೋಡ್ತ್. ಪಂತಲಿ ಗೆದ್ದವರ ಹೆಣ್ಣ್‌ಗ ತಾವೂಂತ ಅವು ನಿಚ್ಚಯ ಮಾಡಿಕಂಡ ಹಾಂಗೆ ಅವರ ಮೋರೆ ಇತ್ತ್. ಬಿಲ್ಲ್ ಮುರ್‍ಯಕಾಕನ ಅಂಬೆನ ಕಡೆಗೆ ಸೋತ ನೋಟಲಿ ನೋಡ್ದ ಅಂವ ಒಂದು ಕ್ಷಣ ಕಾದ್, ಅವಳ್‌ಂದ ಯಾವ ಉತ್ತರ ಸಿಕ್ಕದಾಕನ ಅಂವ ಸಿಟ್ಟ್‌ಂದ ನೆಲನ ಒಮ್ಮೆ ಬಲಲಿ ಮೆಟ್ಟಿ ಹೊರಗೆ ಹೊರ್‍ಟೋತ್. ಆಗ ಅದ್ಕೆ ನಾ ನಿನ್ನೆನೇ ಅಂವನೊಟ್ಟಿಗೆ

ಸೌಬದೇಶಕ್ಕೆ ಹೊರ್ಪ್ ಹೋಕಾಗಿತ್ತ್‌ಂತ ಅನ್ನಿತ್.

ಹಿಂದೆ ನಡ್ದದರ ಎಲ್ಲಾ ನೆನ್ನಿಕಂಡ ಅಂಬೆ ಈಗ ತಾನಿದ್ದ ಸ್ತಿತಿನ ನೆನ್ನಿಕಂಡತ್. ಭೀಷ್ಮಾಚಾರ್ಯರ್ ಅವಳೊಟ್ಟಿಗೆ ಕಳ್ಸಿಕೊಟ್ಟ ಪುರೋಹಿತರ ಹೆಸ್ರ್ ದೇವೀಚರಣದಾಸ. ತನ್ನ ಪರ್ಚಯನ ಹೇಳಿಕಂಬಕನ ಅಂವ ತನ್ನ ಇಡೀ ಹೆಸ್ರ್ ಬ್ರಹ್ಮಶ್ರೀ ಪುರೋಹಿತ ದೇವಿಚರಣದಾಸ ಚತುರ್ವೇದಿ ಎಂತ ಹೇಳಿಕಂಡಿತ್ತ್. ಚತುರ್ವೇದೀಂತ ಹೇಳ್ದು ಅಂವನ ಕುಲದ ಹೆಸ್ರೋ, ನಾಲ್ಕ್ ವೇದನ ಕಲ್ತವಾಂತೇಳಿಯೋ ಅದರ ಅದ್ ಕೇಳ್ತ್‌ಲ್ಲೆ. ವೇದ ಶಾಸ್ತ್ರ ಕಲ್ತವರ್ಲಿ ಶಾಸ್ತ್ರ ಗೊತ್ತಿರ್‌ತಿತ್ತೇ ಹೊರ್ತು ಅವ್ಕೆ ಮೊಸ್ಸತ್ವ ಇರ್ತಿಲ್ಲೆ. ಇದ್ ಅದ್ಕೆ ಕಾಶಿಲೇ ಗೊತ್ತಿತ್ತ್. ಕಾಶಿಲಿ ಎಲ್ಲಾ ತರದ ಶ್ರೇಷ್ಠವೇದ ಕಲ್ತೋವು ಶಾಸ್ತ್ರಿಗ, ಘನಪಾಠಿಗ, ದೊಡ್ಡ ದೊಡ್ಡ ಪಂಡಿತರ್‌ಗ ಇದ್ದೊ. ಹುಟ್ಟಿದ ಮ್ಯೊಂಸಂಗ ಎಲ್ಲೋವು ಸರಿಸಮ ಇರೋವು ಎಂತ ಹೇಳೋವು ಯಾರ್‌ನೂ ಸಾ ಇತ್ಲೆ. ಹುಟ್ಟುನ ದೊಡ್ಡಸ್ತನ, ಮೇಲ್-ಕೀಳ್ ಬಡತನ, ಇನ್ನೊಬ್ಬರ್‌ಂದ ಎಳ್ದ್ ತಿಂಬೊದು ಇದರನೆ ಸಮರ್ತನೆ ಮಾಡುವ ಹೊಸ ಹೊಸ ಶ್ಲೋಕಗಳ ಕಟ್ಟಿಕೆ ಮಾತ್ರ ಅವರ ಚಿಂತೆ ಮತ್ತೆ ವಿದ್ಯೆ ಸೀಮಿತ ಆಗಿತ್ತ್. ಪುರೋಯ್ತು ದೇವಿ ಚರಣದಾಸನೂ ಅವರಾಂಗೇ ಇರ್ದೂಂತ ಅಂಬೆ ನೆನ್ನಿಕಂಡ್ ಅಂವನ ಹೆಚ್ಚ್ ಮಾತಾಡ್ಸಿಕೆ ಹೋತ್ಲೆ.

ಸೌಬದ ಗಡಿ ಬಾಕಾಕನ ಅಂವ ಅಂಬೆನ ಒಟ್ಟಿಗೆ ಕೆಳಗೆ ಇಳ್ತ್. ಆಚಾರ್ಯರ ಅಪ್ಪಣೆನ ಮಿರಿ ಹಸ್ತಿನಾವತಿನ ಪತಾಕೆ ಇರುವ ರಥನ ಒಳಗೆ ನುಗ್ಗಿಸಿರೆ ನಾವು ಕಸ್ಟಕ್ಕೆ ಸಿಕ್ಕುವೋಂತ ಅದ್ಕುನೂ ಗೊತ್ತಾತ್. ಇಲ್ಲದರ ಎಳ್ದ್ ಹಾಕಂಡ್ ಅದರ್‌ಂದಳೇ ಹೊಟ್ಟೆ ತುಂಬುಸುವ ಜನಂಗ ಕಾಶಿಲಿನೂ ಇದ್ದೊ. ಸೌಭಲಿನೂ ಇರುವೊ. ಅಂತಾ ಜನಂಗ ಪತಾಕೆನನೂ ಚರ್ಚೆಗೆ ಎಳ್ಯವೊ. ಈ ಮಲಾದ್ರನೇ ಬೇಡ. ಪತಾಕೆನ ಇಸಯನ ಎಳ್ಕಂಡ್ ನೆತ್ತರ್ ಹರ್ಸುದು ಬೇಡ. ಅದರ್ಲಿ ಲಾಭನ ಪಡ್ಯೊವುನೂ ಒಳೊ. ರಥ ಗಡಿಲಿ ನಿಲ್ಲುದೇ ಒಳ್ಳದ್. ಇದರ ಪುರೋಯ್ತು ದೇವಿಚರಣದಾಸನೂ ಒಪ್ಪಿತ್ತ್.

ಅಂವಂಗೆ ವೊರ್ಸ ಸುಮಾರ್ ಎಪ್ಪತ್ತ್ ದಾಟಿರ್ದು. ವಾತನೋ, ಪಿತ್ತನೋ, ಕಫನೋ, ನಿದಾನಲಿ ಅದರ ಹಿಂದೆಂದ ಕಾಲೆಳ್ಕಂಡ್ ನಡ್ಯತಿತ್ತ್. ಅದ್ಕೆನೋ ಒಮ್ಮೆ ಸಾಲ್ವ ಭೂಪತಿನ ನೋಡಿ ನಡ್ದ ಕತೆನೆಲ್ಲಾ ಅಂವನಲ್ಲಿ ಹೇಳಿಕಂಡ್, ಹೊಸ ಬೊದ್ಕ್‌ನ ಕಾಂಬ ಅಮ್ಸರ. ಪುರೋಯ್ತಂಗೆ ಅಂತಾ ಅಮ್ಸರ ಏನುಟ್ಟು? ಅಂವ ಆಮೆ ಹಾಂಗೆ ಮೆಲ್ಲಂಗೆ ಬಾವ್ದರ ನೋಡಿ, ಅದ್ ಕೈ ಮುಗ್ತ್. "ಸೋಮಿಾ ಪುರೋಯ್ತರೇ ಹಂಞ ಬೇಗ ಬಂದ್‌ಬುಡಿನಿ. ಕತ್ತಲೆ ಆದರೆ ಸಾಲ್ವಭೂಪತಿನ ನೋಡಿಕಾಕಿಲ್ಲೆ. ಗುರ್ತು ಪರ್ಚಯ ಇಲ್ಲದ ಊರ್‌ಲಿ ನಾವು ಕಸ್ಟಕ್ಕೆ ಸಿಕ್ಕಕಾದು."

ದಾರಿನ ಹಕ್ಕಲೆ ಒಂದು ಸಣ್ಣ ಪಾರೆಕಲ್ಲ್ ಇತ್ತ್. ಪುರೋಯ್ತು ದೇವೀಚರಣದಾಸ ಉಸ್ಸ್ ಎಂತ ಹೇಳಿ ಅದರ ಮೇಲೆ ಕುದ್ದ್‌ಬುಟ್ಟತ್. ಹೆಗ್ಲ್‌ಲಿ ಹಾಕಂಡಿದ್ದ ಬೈರಾಸ್‌ಲಿ ಗಾಳಿ ಹಾಕಂಡ್ ಸುದಾರ್ಸಿಕಂಡತ್. ಉಬ್ಬಸಂದಾಗಿ ಅಂವ ಬಾಯಿಂದ ಉಸ್ರಾಡಕಾಗಿತ್ತ್. ಹಂಞ ಹೊತ್ತ್‌ನ ಮೇಲೆ ಅಂವ ಮುಂದೆ ಇದ್ದ ಹಾಂಗೆ ಆತ್. "ನಿಂಗೇನ್ ಅವ್ವಾ,

ಪ್ರಾಯದ ಸೊಕ್ಕು. ನನ್ನ ನೋಡು ಕೈಕಾಲ್‌ಲಿ ವಾತ, ಹೊಟ್ಟೆ ಉಬ್ಬರ್‍ಸಿಟು. ಹಂಞಾ ನಡ್ಯಕಾಕನ ಉಬ್ಬೆಸ ಬಂದದೆ. ಪಿತ್ತಂದ ತಲೆ ಗಿರ್‍ರ್‍ಂತ ತಿರ್‍ಗಿದೆ. ನಿದಾನಲಿ ನಡ್ಯಕೆನೇ ಕಸ್ಟ ಆದೆ. ಇನ್ನ್ ಮುಂದೆನಡ್ಯಕಾದರೆ ನೀ ನನ್ನ ಕೈ ಹಿಡ್ಕಣಕಾದೆ."

ತನ್ನ ಪ್ರಾಯದ ಪುಳ್ಳಿ ಇರಕಾದ ಈ ಮುದಿಯಂಗೆ ಅದೇನ್ ಚಪಲ ಎಂತ ಅದ್ಕೆ ಸಿಟ್ಟ್ ಬಾತ್. ಈ ಭೂಮಿಲಿರುವ ಎಲ್ಲಾ ರೋಗಗಳ ಗೂಡು ಇಂವ. ಅಂವನ ಕಾಯ್ಲೆಗ ನನ್ನಂತಾ ಗೂಡೆನ ಮುಟ್ಟಿರೆ ಗುಣ ಆದೆನೋ ಹೇಂಗೆ? ಹಾಂಗೇಂತ ಕೇಳ್ರೆ ಏನ್ ಉತ್ತರ ಕೊಟ್ಟದೆನೋ? ತಾನ್ ಬಾರಿ ಸುಬಗಾಂತ ಯಾವ ಶ್ಲೋಕನ ಹೇಳಿ ನನ್ನ ಒಪ್ಪಿಸಿದೆನೋ? ನಾ ಈಗ ತಾಳ್ಮೆನ ಕಳ್ಕಂಬಕೆ ಬೊತ್ತ್. ಹೇಂಗಾದರ್ ಮಾಡಿ ಈಗ ಇರುವ ಪರಿಸ್ತಿತಿನ ಕಡ್ಮೆ ಮಾಡೊಕು. ಅಂಬೆ ಹೇಳ್ತ್. "ಸಾಮಿ ಪುರೋಯ್ತರೇ, ನೀವು ನಂಗೆ ನನ್ನ ಅಪ್ಪನ ಸಮ. ನಾ ನಿಮ್ಮ ಕೈಹಿಡ್ದರೆ ನಡ್ಯಕೆ ಆದೂಂತ ಹೇಳ್ರೆ. ನಿಮ್ಮ ಮಾತ್‌ನ ಒಳ ಮರ್ಮ ನಂಗೆ ತಿಳ್ಯೋದುಲ್ಲೆ. ನಾವು ಹಸ್ತಿನಾವತಿಂದ ಹೊರ್‍ಟ್ ಎರ್‍ಡ್ ದಿನ ಕಳ್ತ್. ಉಟ್ಟ್‌ಕಂಡಿದ್ ಸೀರೆಲೇ ನಾ ಹೊರ್‍ಟ್ ಬಂದಳೆ. ನನ್ನ ಸ್ತಿತಿನ ಅರ್ತ ಮಾಡಿಕಣಿ. ನಾ ನಿಮ್ಮ ಮಗಳ್‌ಂತ ತಿಳ್ದ್ ನನ್ನೊಟ್ಟಿಗೆ ಬನ್ನಿ."

ಇದರ ಕೇಳಿ ಪುರೋಯ್ತ ದೇವಿಚರಣದಾಸಂಗೆ ಸಿಟ್ಟ್ ಬಾತ್. "ಹೌದವ್ವಾ, ಹೌದು, ಎಲ್ಲೋವುನೂ ಅವರವ್ರ ಕೆಲ್ಸನೇ ಮುಕ್ಯ. ನಿಂಗೇನ್? ಸುಕಲಿ ಸಾಲ್ವ ಭೂಪತಿನ ಅಂತಃಪುರನ ಸೇರಿಕಂಡ್ಯ. ಇಡೀ ಜೂವನನ ಸುಕಲಿ ಕಳ್ದಿಯ. ನಾ ಹೇಂಗೋ ಕಸ್ಟಲಿ ಬಂದಳೆ. ಮತ್ತೆ ಹಸ್ತಿನಾವತಿಗೆ ಹೋಕಾಕನ ನನ್ನ ವಾತ ಮತ್ತೆ ಪಿತ್ತ ನಾಕ್ ಪಾಲ್ ಹೆಚ್ಚಾದೆ. ನನ್ನ ಕಸ್ಟಕ್ಕೆ ಆಗೋವು ಯಾರ್ ಒಳೊ?"

ಪುರೋಯ್ತ ದೇವಿಚರಣದಾಸನ ಸಂಕಟ ಅದ್ಕೆ ಅರ್ತ ಆತ್. ಬಾಳ ಮೆತ್ತಂಗೆ ಅದ್ ಹೇಳ್ತ್. "ಸಾಮಿ, ಪುರೋಯ್ತರೇ ನಿಮ್ಮ ಈ ಕೆಲ್ಸಕ್ಕೆ ಕಳ್ಸಿದೊವು ಭೀಷ್ಮಾಚಾರ್‍ರ್. ಹಸ್ತಿನಾವತಿಗೆ ನೀವು ತಿರ್‍ಗ ಹೋದ ಮೇಲೆ ನಿಮ್ಮ ಬರಿಕೈಲಿ ಮನೆಗೆ ಕಳ್ಸುವ ಮ್ಯೆಂಸ ಅವು ಅಲ್ಲ. ನೀವ್ಗೆ ಇದರ ಬಗ್ಗೆ ಸಂಸಯ ಇರ್‍ತಿದ್ದರೆ ನೀವು ಆಗಳೇ ಅವರ ಎದ್ರೇ ಹೇಳಕಾಗಿತ್ತ್. ಇಲ್ಲಿ ನನ್ನೊಟ್ಟಿಗೆ ಹೇಳಿ ಏನ್ ಸುಕ? ಸಾಲ್ವ ಭೂಪತಿನ ಹಕ್ಕಲೆ ಹೇಳಿ ನೀವ್ಗೆ ಏನಾದರ್ ಕೊಡ್ಸಿನೆ. ನೀವು ಈಗ ಹೊರ್‍ಡಿನಿ."

ಪುರೋಯ್ತ ದೇವಿಚರಣದಾಸ ಸಿಡ್ಕಿತ್. "ಭೀಷ್ಮರ್ ಕೊಟ್ಟವೆನೋ ಬುಟ್ಟವೆನೋ? ಅದ್ ನಿಂಗೆ ಸಂಮಂದಪಟ್ಟ ಸಂಗತಿ ಅಲ್ಲ. ಸಾಲ್ವ ಏನಾದರ್ ಕೊಟ್ಟರೆ ಅದ್ ಅಂವನ ದೊಡ್ಡಸ್ತನ ಆದೆ. ನಾ ಈಗ ಬಂದದ್ ನಿಂಗಾಗಿ. ನೀ ಏನ್ ಕೊಟ್ಟಿಯ ಹೇಳ್?"

ಕಾಶಿಲಿ ಇಂವನಂತಾವ್ರ ಅದ್ ಬಾಳ ನೋಡಿಟ್ಟು. ಬೇರೆವರ್‌ಂದ ಬಿಟ್ಟಿ ದುಡ್ಡು ಸೆಳ್ಯಕೆ ಅವರಕ್ಕಲೆ ಲೆಕ್ಕ ಇಲ್ಲದಸ್ಟ್ ದಾರಿಗಳ ಹುಡ್ಕುವೆ. ಬ್ರಾಂಬ್ರ್‌ಗೆ ದಾನ ಕೊಟ್ಟರೆ ಪರಲೋಕಲಿ ಅದೇನೋ ಸುಕ ಸಿಕ್ಕಿದೇಂತ ಶ್ಲೋಕ ಹೇಳಿ ಒಪ್ಪುಸುವೆ. ಇಂತೋವ್ಕೆ ಬೇಕಾದ್ ಹೊನ್ನ್ ಮಾತ್ರ. ಇನ್ನೊಬ್ಬರ ಅಸಾಯಕತೆನ ಇವು ಉಪಯೋಗಿಸಿಕಂಡವೆ. ಸುಲ್ಗೆ ಮಾಡುವ ಬೇರೆ ಬೇರೆ ರೀತಿಗೆ ಧರ್ಮದ ಹೆಸ್ರ್ ಹೇಳ್ವೆ. ಗೊತ್ತು ಅರ್ತ ಇಲ್ಲದ

ಈ ಪರ್ದೇಸಲಿ ನಾ ಏನ್ ಕೊಡ್ಲೀಂತ ದಿಕ್ಕ್ ಕಾಣದೆ ಅದ್ ಕಂಗಾಲಾಕನ ಪುರೋಯ್ತುನೇ ದಾರಿ ತೋರ್ಸಿತ್.

"ನೀವ್ಗೆ ಕ್ಷತ್ರಿಯರಿಗೆ ದುರಾಸೆ ಹೆಚ್ಚ್. ನೀ ಏಚನೆ ಮಾಡಿಕೆ ಎಂತದುಟ್ಟು? ನಿನ್ನ ಒಮ್ಮೆ ನೀನೇ ನೋಡಿಕ. ಎಸ್ಟ್ ಚಿನ್ನದ ಸರಗಳ ಹಾಕಿಕಂಡಳ? ಕೈಲಿ ಎಸ್ಟ್ ಚಿನ್ನದ ಬಳೆಗ ಒಳೊ. ಎಸ್ಟ್ ಓದಿರೆ ಏನ್ ಸುಕ? ನನ್ನ ಮೂರ್ಜನ ಹೆಣ್ ಗೂಡೆಗಳಿಗೆ ಕುತ್ತಿಗೆಗೆ ಒಂದೊಂದು ಚಿನ್ನದ ಸರ ಮಾಡಿ ಹಾಕಿಕೆ ನನ್ನಂದಾತ್ಲೆ. ನನ್ನಂತವರ ಹಿಂದೆಂದ ಎಲ್ಲೋವೂ ಬೊಯ್ದುದೆ. ನಮ್ಮ ಬಡತನನ ಕಳ್ಯೋವು ಯಾರೊಳೊ?"

ಅಂಬೆಗೆ ಅಂವನ ಪರಿಸ್ತಿತಿ ಅರ್ತ ಆತ್. ಎಂತದರ ಕೊಡೊಕೂಂತ ಪುರೋಯ್ತು ಸೂಕ್ಷ್ಮಲಿ ಹೇಳಿಟು. ತನ್ನ ಸರೀರಲಿ ಇದ್ದ ಚಿನ್ನದ ನಗಗಳ ಯಾಗ ಬೇಕಾದರೂ ಕೊಡಕ್‌ಂತ ಅದ್ಕೆ ದೈರ್ಯ ಬಾತ್. ಅದ್ ಅಂವನ ಒಪ್ಪುಸುವ ಸೊರಲಿ ಹೇಳ್ತ್.

"ಸ್ವಾಮಿ ಪುರೋಯ್ತರೇ ನಿಮ್ಮ ಚಿಂತೆನ ಬುಟ್ಟ್‌ಬುಡಿ. ಒಮ್ಮೆ ಸಾಲ್ವಭೂಪತಿನ ಆಸ್ತಾನನ ಸೇರಿಕಮ್ಮೊ. ಜೂವಮಾನ ಇಡೀ ನಿಮ್ಮಬಡತನ ಕಾಡದ ಹಾಂಗೆ ನಾ ನಿಮ್ಮ ನೋಡಿಕಣೆ. ನಿಮ್ಮ ಅಸ್ಟ್ ಜನಹೆಣ್ಮಕ್ಕಳಿಗೆ ನಗಗಳ ಕೊಡ್ಸಿನೆ. ಒಳ್ಳೆ ಸಂಮಂದ ನೋಡಿ ಮೊದ್ವೆ ಮಾಡ್ಸಿನೆ. ದಮ್ಮಯ್ಯ. ನನ್ನ ನೊಂಬಿನಿ. ಇನ್ ಹೊರ್‌ಡಿನಿ."

ಪುರೋಯ್ತು ಅಜ್ಜ ಅಂವನ ಬಲ್ದ ಕೈನ ನೀಂಡಿ 'ಹಾಗೇಂತ ನಂಗೆ ಬಾಸೆ ಕೊಡು"

ಅಂಬೆಗೆ ಸಿಟ್ಟ್ ಬಾತ್. "ನಾ ಕ್ಷತ್ರಿಯ ಕುಲಲಿ ಹುಟ್ಟಿದೋವ್ಳು. ನಾ ಒಂದು ಮಾತ್‌ನ ಹೇಳ್ರೆ ಅದ ಬಾಸೆ ಕೊಟ್ಟ ಹಾಂಗೆ. ಕೈ ತಟ್ಟಿ ಬಾಸೆ ಕೊಡುವ ಕ್ರಮ ನನ್ನದಲ್ಲ. ನಿಮ್ಮಂತಾ ಹಿರಿಯ ಜ್ಞಾನಿಗೆ ಮೋಸ ಮಾಡಿ ನಾ ಏಕೆ ಪಾಪ ಕಟ್ಟಿಕಣಲಿ?"

ಪುರೋಯ್ತಜ್ಜ, ಎದ್ರ್ ಹೇಳದೆ ಎದ್ದ್ ನಿತ್ತತ್. ಅಂಬೆನ ಹಿಂದೆ ಬೇಗ ಬೇಗ ನಡ್ತ್.

*****

# ಹೋಳು - ೦೬

# ಕಿಚ್ಚ್‌ನ ಮಾತ್‌ಲಿ ಗೆದ್ದತ್ ಆ ಕಾಳಗನ

ಭೀಷ್ಮರ್ ಒಂದ್ ಮಗ್ಗ್ಲ್‌ಂದ ಇನ್ನೊಂದ್ ಮಗ್ಗ್ಲ್‌ಗೆ ಹೊಣ್ಕಿ ಮೊಲ್ಗಿದೊ. ಎದೆ ಬೇನೆ ಜೋರಾಕಂಡ್ ಹೋದೆ. ಇನ್ನ್ ಎಸ್ಟ್ ದಿನನೋ? ಈ ಬಾಣ ಅದಾಗಿನೇ ಯಾಗ ಬಿದ್ದ್ ಹೋದೆನೋ? ಸರೀರಕ್ಕೆ ಸುಕ ಇಲ್ಲೆ. ಮೊನ್ಸ್‌ಗೆ ನೆಮ್ಮದಿ ಇಲ್ಲೆ. ಇಂದ್ ಜಯದ್ರಥನ ಕತೆ ಎನಾದೆನೋಂತೇಳ್ವ ಚಿಂತೆ ಬೇರೆ ಸೇರಿಕಂಡ್ ಸುಮ್ಮಂಗೆ ಮೊಲ್ಗಿಕೆ ಕಿರಿಕಿರಿ ಆದೆ. ಯಾರೊಟ್ಟಿಗಾದರ್ ಮಾತಾಡೊಮೋಂತೇಳ್ರೆ ಇಲ್ಲಿ ಇರೋವು ಪಂಡಿತರ್ ಮತ್ತೆ ಕೆಲ್ಸದೊವು ಮಾತ್ರ. ಅವರೊಟ್ಟಿಗೆ ಎಂತದ್‌ಂತ ಮಾತಾಡ್ದು? ಅಲ್ಲಿ ಕುರುಕ್ಷೇತ್ರಲಿ ಏನ್ ನಡ್ದುಟೂಂತ ಅವ್ಕನೂ ಗೊತ್ತಿರ್‍ದುಲ್ಲೆ.

ಕತ್ತಲೆ ಆಕಂಡ್ ಬಾಕನ ಬಿಡದಿಗೆ ದುರ್ಯೋಧನ ಬಾತ್. ಅಂವನ ಹಿಂದೆ ಇದ್ದಂವ ದುಶ್ಶಾಸನ. ಅಂವ ಇಲ್ಲಿಗೆ ಇಸ್ಸರ ಮುಟ್ಟ ಬಂದಂವ ಅಲ್ಲ. ಒಮ್ಮೆನೂ ನನ್ನ ಸಲಹೆನ ಕೇಳ್ದಂವ ಅಲ್ಲ. ಅಂವನ ನೋಡಿಕಾಕನ ಎಲ್ಲಾ ಭೀಷ್ಮಂಗೆ ಅಂವನ ತಲೆಲಿ ಮೆದುಳು ಉಟ್ಟೋ ಎಂತ ಸಂಸಯ ಕಾಡ್‌ತಿತ್. ಅಂವನ ನಿಷ್ಠೆ ಮತ್ತೆ ಸೇವೆ ಏನಿದ್ದರುನೂ ಅಂವನ ಅಣ್ಣ ದುರ್ಯೋಧನಂಗೆ ಮಾತ್ರ. ಅಣ್ಣ ಹೇಳ್ತಂತ ಗೂಳಿನಾಂಗೆ ದ್ರೌಪದಿ ಇದ್ದಲ್ಲಿಗೆ ಹೋಗಿ ಮುಟ್ಟಾದ ಹೆಣ್ಣ್‌ನ ತಲೆ ಜುಟ್ಟ್‌ಗೆ ಕೈ ಹಾಕಿ ತುಂಬಿದ ಸಭೆಗೆ ದರದರನೆ ಎಳ್ಕಂಡ್ ಬಾತ್. ಕಾಡ್ ಮ್ಯೊಂಸನಾಂಗೆ ಅದರ ಸೆರ್‌ಂಗ್‌ಗೆ ಕೈ ಹಾಕಿ ಎಳ್ದ್ ಅಸ್ಟ್ ಜನರ ಎದ್ರ್ ಅಪಮಾನ ಮಾಡ್ತ್. ಅಂವ ಮಾಡ್ದ ಆ ಕೆಟ್ಟ ಕೆಲ್ಸನ ದುರ್ಯೋಧನನ ಒಬ್ಬ ತಮ್ಮ ವಿಕರ್ಣ ಮಾತ್ರ ಇರೋದ ಮಾಡ್ದೆ. ಬೇರೆವೆಲ್ಲಾ ನೋಡಿಕಂಡ್ ಸುಮ್ಮಂಗಿದ್ದೊ. ಪಗಡೆ ಆಟಲಿ ಸೋತ ಯುಧಿಷ್ಠಿರಂಗೆ ಅಂವನ ಹೆಂಣ್ ದ್ರೌಪದಿನ ಪಂತಕ್ಕೆ ಒಡ್ಡುವ ಅಧಿಕಾರ ಇಲ್ಲೇಂತ ವಿಕರ್ಣ ವಾದ ಮಾಡ್ದೆ. ದುಶ್ಶಾಸನಂಗೆ ವಿಕರ್ಣನ ಬುದ್ಧಿ ಇರ್ತಿದ್ದರೆ ಇಸ್ಟ್ ದೊಡ್ಡ ಕಾಳಗ ನಡ್ಯತಿತ್ಲೆ. ಯಾಗೋಳೂ ಬಾರದ ದುಶ್ಶಾಸನ ಇಂದ್ ಏಕೆ ಬಾತ್? ಭೀಷ್ಮರ ಮೊನ್ಸ್‌ಲಿ ಸಂಸಯದ ತೆರೆಗ ಎದ್ದೊ.

ದುರ್ಯೋಧನ ಪಾದ ಮುಟ್ಟಿ ನಮ್ಸಕಾರ ಮಾಡ್ದೆ. ಸುಮ್ಮಂಗೆ ನಿತ್ತಿದ್ದ ದುಶ್ಶಾಸನಂಗೆ ಜೋರು ಮಾಡ್ದಕ್ಕೆ ಅಂವನೂ ಅಣ್ಣನ ಹಾಂಗೆ ಪಾದ ಮುಟ್ಟಿತ್. ಅರೆ ಮೊಸ್ಕ್‌ಲಿನೂ ದುರ್ಯೋಧನನ ಮೋರೆ ಕಪ್ಪಾದ್ ಎದ್ದ್‌ಕಂಡತ್. ಇನ್ನ್ ಯುದ್ಧಲಿ ಏನಾತ್‌ಂತ ಕೇಳುವ ಅಗತ್ಯ ಇಲ್ಲೆ. ದುಶ್ಕಳೆ ಮುಂಡೆ ಆಗಿರೋಕೂಂತ ಭೀಷ್ಮರ್ ನೆನ್ಸಿಕಂಡೊ.

ದುರ್ಯೋಧನ ಮಾತಿಲ್ಲದೆ ಸುಮ್ಮಂಗೆ ನಿತ್ತಿತ್. ಅಂವಂದ ಮಾತಾಡಿಕಾತ್ಲೆ. ಇದರ ತಿಳ್ದ್ ಭೀಷ್ಮರ್ ಕೇಳ್ದೊ, "ಕುಂಞೀ, ಗುರುಗ ದ್ರೋಣರ್ ಇದ್ದುನೂ, ನಿನ್ನ

ಸ್ನೇಯಿತ್ ಕರ್ಣ ಇದ್ದುನೂ, ಬಲಾಢ್ಯರಾದ ನಿನ್ನ ತಮ್ಮಂದರ್ ಇದ್ದುನೂ ನಿಂಗೆ ಜಯದ್ರಥನ ಒಳ್ಸಿಕಂಬಕೆ ಆತ್ಲೆನೋ? ಕುರುಸೇನೆ ಅಸ್ಟ್‌ನೂ ಬಲ ಇಲ್ಲದಾತೋ?"

ದುರ್ಯೋಧನ ನಿಟ್ಟುಸ್ರ್ ಬುಟ್ಟ್‌ದ್ ನೊಡ್ಡುವ ದನಿಲಿ ಹೇಳ್ದ್. "ಜಯದ್ರಥನ ಮೋಸಲಿ ಕೊಂದೊ ಅಜ್ಜಪ್ಪಾ. ಪಾಂಡೋವು ಇಂದ್ ಧರ್ಮ ಯುದ್ಧ ಮಾಡ್ತೇ ಇಲ್ಲೆ. ನೀವು ತೋರ್ಸಿದ ದಾರಿನಾಂಗೆ ಇಂದ್ ಬೊಳ್ಪುಗೆ ಕೋಟೆಕಟ್ಟಿ ದ್ರೋಣಾಚಾರ್ಯರ್ ಅರ್ಜುನಂಗಾಗಿ ಕಾದಿದ್ದೊ. ಅಂವ ಬಂದಂವನೇ, "ಗುರುಗಳಿಗೆ ಸಾಷ್ಟಾಂಗ ಅಡ್ಡಬಿದ್ದೆ"– ಎಂತ ಹೇಳಿಕನ ಗುರುಗ ಕರ್ಗಿ ಹೋದೊ. ಅವರ ಎಡಕೈನ ಹೆಬ್ಬೆರ್ಳ್ ತುಂಡಾಗಿ ಹೋಗಿತ್ತಲೇ? ಅದರ್‌ಂದಾಗಿ ಅವು ತುಂಬಾ ಬೇನೆ ತಿಂಬತಿದ್ದೊ. ಆದರುನೂ ಕಾದಾಡ್ದೊ. ಸೋಲು ಗೆಲುವೆ ನಿಚ್ಚಯ ಆಕೆ ಮುಂದೆನೇ ಕೃಷ್ಣನ ಹೇಳಿಕೆನಾಂಗೆ ಅರ್ಜುನ ಯುದ್ಧ ವಿರಾಮ ಹೇಳ್ತ್. "ಗುರುಗ ಶಿಷ್ಯರ ಹಗೆ ಅಲ್ಲ. ನಾನೀವ್ಗೆ ಮಂಜನ ಹಾಂಗೆ ನಿಮ್ಮ ಗೆಲ್ಲಿಕೆ ನಂಗೆ ಆಕಿಲ್ಲೆ. ನಿಮ್ಮ ಆಶೀರ್ವಾದ ನಂಗೆ ಇರ್ಲಿ."–ಎಂತ ಹೇಳಿ ಕೈ ಮುಗ್ತ್. ಅಭ್ಯಾಸ ಬಲಂದ ಗುರುಗ "ನಿಂಗೆ ಜಯ ಆಗಲಿ"–ಎಂತ ಕೈ ಎತ್ತಿ ಆಶೀರ್ವಾದ ಮಾಡಿಕಾಕನ ಕುತಂತ್ರಿ ಕೃಷ್ಣ ಕೋಟೆ ಒಳಗೆ ರಥನ ನುಗ್ಗಿಸಿತ್. ಅರ್ಜುನ ಜಯದ್ರಥನ ಹುಡ್ಕಿಕಂಡ್ ಎದ್ರ್‌ಗೆ ಸಿಕ್ಕಿದವರ ಕೊಚ್ಚಿ ಹಾಕಂಡ್ ಮುಂದೆ ಹೋತ್. ಅಂವನೊಟ್ಟಿಗೆ ಭೀಮ ಅಟ್ಟಹಾಸಲಿ ನನ್ನ ತಮ್ಮಂದರ ಬೊಡ್ಡ್‌ದ್ ನೆತ್ತರ್‌ನ ಹಳ್ಳ ಹರ್ಸಿದೆ. ಎಲ್ಲಿ ನೋಡ್ರೂ ಹೆಣಗಳೇ, ಹೆಣಗ.

ದುರ್ಯೋಧನ ಹೇಳ್ದರ ಕೇಳಿ ಭೀಷ್ಮರಿಗೆ ಅಚ್ಚರಿ ಆತ್. "ಆದರೆ ಕೂಸು, ನಿನ್ನಂದ, ದುಶ್ಶಾಸನಂದ, ಕರ್ಣಂದ ಅರ್ಜುನನ ತಡ್ಯಕೆ ಆತ್ಲೆನೋ? ಜಯದ್ರಥನ ಬಾಳ ಬಲವಂತ ತಮ್ಮಂದರ್ ನಿನ್ನೆ ಭೀಮ ಮುಂತಾದವರ ಕೋಟೆನ ಬಾಕಿಲ್‌ಲೇ ತಡ್ದ್ ನಿಲ್ಸಿತ್ಲ್ಲೆನೋ? ಅವರ್‌ಂದ ಇಂದ್ ಏನ್ ಸಾ ಮಾಡಿಕೆ ಆತ್ಲೆನೋ? ಮಹಾ ಪರಾಕ್ರಮಿ ಆದ ಜಯದ್ರಥಂಗೆ ಅರ್ಜುನಂದ ತನ್ನ ಕಾಪಾಡಿಕಂಬಕೆ ಆತ್ಲೆನೋ?"

ದುರ್ಯೋಧನ 'ಇಲ್ಲೆ' ಎಂತ ತಲೆ ಹಂದಾಡ್ಸಿತ್. "ಅರ್ಜುನ ಮಾಡ್ದ ಪ್ರತಿಜ್ಞೆನ ಕೇಳ್ದ ಮೇಲೆಂದ ಜಯದ್ರಥಂಗೆ ಒಡಲ್‌ಲಿ ಚಳಿ ಕುದ್ದತ್. ಅಂವಂಗೆ ಹೋರಾಟ ಮಾಡ್ವ ಕಿಚ್ಚ್ ಇತ್ಲೆ ಅಜ್ಜಪ್ಪಾ. ನಿನ್ನೆ ಇರ್ಳ್ ಗುರುದ್ರೋಣರ ಗೌಡಿಕೆಲಿ ತುಂಬಾ ಹೊತ್ತು ಮಂತ್ರಾಲೋಚನೆ ಮಾಡ್ದೊ. ಎಡೆ ಎಡೆಲಿ ಜಯದ್ರಥ ತಾನ್ ಸಿಂಧೂ ನಗರಿಗೆ ಓಡಿ ಹೋಗಿ ಜೂವ ಒಳ್ಸಿಕಣೇಂತ ಹೇಳ್ತಿತ್ತ್. ರಣರಂಗಂದ ಹಾಂಗೆ ಓಡಿ ಹೋಗಿ ಜೂವ ಒಳ್ಸಿಕೊಂಬೊದು ಕ್ಷತ್ರಿಯ ಧರ್ಮ ಅಲ್ಲಾಂತ ನಾವು ಎಸ್ಟ್ ಹೇಳ್ರೆನೂ ಅಂವ ಪ್ರಾಣಂದ ಧರ್ಮ ಮೇಲೆ ಅಲ್ಲಾಂತ" ಹೇಳ್ತ್. "ಇದ್ ಕೌರವ –ಪಾಂಡವರ ಯುದ್ಧ. ತನಿಗೂ ಇದಕ್ಕೂ ಏನ್ ಸಂಮಂಧ ಇಲ್ಲೆ. ದಾಯಾದಿಗಳ ಜಗಳಲಿ ಯಾರೊಬ್ಬನ ಕಡೆ ನಿಲ್ಲುದು ತೊಪ್ಪು" ಎಂತ ಹೇಳಿಕಂಡೇ ಇತ್ತ್. ನಂಗೆ ಏನ್ ಮಾಡೊಕೂಂತ ಗ್ರೇಕೆ ಆತಿತ್ಲೆ."

ಭೀಷ್ಮರಿಗೆ ಅಚ್ಚರಿ ಆತ್ಲೆ. ಜಯದ್ರಥ ದುಷ್ಟಾಂತೇಳಿಕೆ ಅಂವ ಪಾಂಡವರ ವನವಾಸ ಕಾಲಲಿ ದ್ರೌಪದಿನ ಹೊತ್ತ್‌ಕಂಡ್ ಹೋದ್ ಸಾಕ್ಷಿ ಆದೆ. ನಿನ್ನೆ ಅಂವ ಭೀಮನ ತಡ್ಯದೆ

ಇರ್ತಿದ್ದರೆ ಅಭಿಮನ್ಯು ಸಾಯಕಿತ್ಲೆ. ಅಂತಂವನ ಬಾಯಿಂದ ದಾಯಾದಿ ಕಲಹಲಿ ಯಾರೊಬ್ಬರ ಕಡೆ ನಿಲ್ಲುದು ತೊಪ್ಪೋಂತೇಳ್ವ ಮಾತ್ ಬಾತ್. ಅಂವ ಅಂವನ ಕಡೆಕಾಲನ ಮುಂದೆನೇ ತಿಳ್ಕಂಡುಟ್ಟು. ಕಡೆಕಾಲಕ್ಕೆ ಅಂವಂಗೆ ಬುದ್ಧಿ ಬಂದುಟು. ಸಾವು ಬಾಕಾಕನ ಮ್ಯೊಂಸ ಸತ್ಯನೇ ಹೇಳ್ದೆ. ನಿನ್ನೆ ಜಯದ್ರಥ ಹೇಳ್ದ ಸತ್ಯ. ಯುದ್ಧ ಸುರಾಕೆ ಮುಂದೆ ದ್ರೋಣಾಚಾರ್ಯರ್‌ಂದ, ದುರ್ಯೋಧನನ ಪ್ರಾಣ ಸ್ನೇಯಿತ ಕರ್ಣಂದ, ಎಲ್ಲರ್‌ಂದ ಹಿರ್‍ಯಂವ ಆದ ನನ್ನಂದ ಬಾತಿದ್ದರೆ ಯುದ್ಧ ನಡ್ಯತೇ ಇರ್ತಿಲ್ಲೇಂತ ಭೀಷ್ಮರಿಗೆ ಆತ್.

"ಹಾಂಗಾದರೆ ಅಂವ ಇಲ್ಲೇ ಒಳ್ಯವ ಹಾಂಗೆ ಆದ್ ಹೇಂಗೆ?"

"ನನ್ನಿಂದ ಅಜ್ಜಪ್ಪಾ"– ದುಶ್ಯಾಸನ ಹೇಳ್ತ್. ನಾ ಅಂವನ ಒಳ್ಕಂಬ ಹಾಂಗೆ ಮಾಡ್ದೆ. ಜಯದ್ರಥ ಇನ್ನೇನ್ ಓಡಿಹೋಕೂಂತ ನೋಡಿಕಾಕನ ನಾ ಅಂವನ ತಡ್ದ್ ನಿಲ್ಲಿಸಿದೆ. "ಅರ್ಜುನ ನಿನ್ನ ಕೊಲ್ಲಿಕೆ ಇರ್ದು ನಾಳೆ. ನೀ ಇಲ್ಲಿಂದ ಓಡಿ ಹೋದಿಯಾಂತ ಆದರೆ ನಾ ಈಗಳೇ ನಿನ್ನ ಕೊಂದ್‌ಬುಟ್ವನೆ. ತಂಗೆ ಮುಂಡೆ ಆದೂಂತ ನಂಗೆ ಚಿಂತೆ ಇಲ್ಲೆ. ಆ ಭೀಮಸೇನ ನನ್ನ ಏನೇನೋ ಮಾಡಿನೇಂತ ಪ್ರತಿಜ್ಞೆ ಮಾಡಿಟ್ಟು. ಏನ್ ಮಾಡಿಕೆ ಆದೆ ಅಂವಂದ? ನಿನ್ನ ಹಾಂಗೆ ಏಚನೆ ಮಾಡ್ತಿದ್ದರೆ ನಾ ಯಾಗೋಳೋ ಹಸ್ತನಾವತಿಂದ ಓಡಿ ಹೋಕಾಗಿತ್. ಯುದ್ಧರಂಗಂದ ಓಡಿ ಹೋಗಿ ಬೊದ್ಕಿರುನೂ ಆದ್ ಸತ್ತ ಹಾಂಗೆನೇ. ಎಂದೋ ಒಂದ್ ದಿನ ಸಾಯೋಕೊಲೆ? ಇಂದೇ ಸತ್ತ್ ಬುಡು "– ಎಂತ ಹೇಳ್ದೆ. ಅಂವ ಕಾಲ್‌ನ ಬಲ ಕುಗ್ಗಿ ಅಂವ ಕುದ್ದ್ ಬುಟ್ಟತ್."

ಭೀಷ್ಮರಿಗೆ ದುಶ್ಯಾಶನನ ಮಾತ್‌ಗ ಇಸ್ಟ ಆತ್. ಇಂವನ ತಲೆ ಒಳಗೆ ಜೇಡಿಮೊಣ್ಣು ತುಂಬಿರೋಕೂಂತ ಅವು ಎಸ್ಟೋ ಸರ್ತಿ ಹೇಳಿ ಕೊಂಡಿದ್ದೊ. ಅಂತಾ ದುಶ್ಯಾಸನ ಎಂತಾ ಮಾತ್ನ ಮಾತಾಡುಟ್ಟು? ಇಂವ ಹೇಡಿ ಆತ್ಲೆ. ಬುದ್ಧಿ ಇಲ್ಲದಂವ ಆಗ್ತಿದ್ದರೆ ಜಯದ್ರಥನ ಹಕ್ಕಲೆ ಅಂತಾ ಮಾತ್ನ ಮಾತಾಡಿಕೆ ಆಗ್ತಿಲ್ಲೆ. ದ್ರೌಪದಿನ ಜುಟ್ಟಿಗೆ ಕೈ ಹಾಕಿ ಹಸ್ತಿನಾವತಿನ ರಾಜಸಭೆಗೆ ಅದರ ಎಳ್ದ್ ತಾವ ಹಾಂಗೆ ಮಾಡ್ದೇ ಅಂವಂಗೆ ಅಣ್ಣನ ಮೇಲೆ ಇರ್ವ ಭಕ್ತಿ, ಗೌರವ. ಅಣ್ಣ ಹೇಳ್ರೆ ಇಸನ ಸಾ ಅಂವ ಕುಡ್ಯೋದು. ಸಾಮ್ರಾಜ್ಯನ ಒಳ್ಸಿಕೆ ಇಂತಾ ಕುರ್ಡ್ ನಿಷ್ಟರೂ ಬೇಕಾದವೆ. ಹಾಂಗೆ ನೋಡ್ರೆ ಅಪ್ಪ ಶಂತನು ಚಕ್ರವರ್ತಿಗಾಗಿ ತಾನ್ ಮಾಡ್ದ ಪ್ರತಿಜ್ಞೆನೂ ಕುರುಡು ನಿಷ್ಟೆ ಆದ್ಲೆನೋ?

ಅವು ಹೇಳ್ದೋ, "ದುಶ್ಯಾಸನಾ ನೀ ಸರ್‍ಯಾದ ಕೆಲ್ಸನನೇ ಮಾಡ್ದ. ಜಯದ್ರಥ ಸಿಂಧೂ ನಗರಿಗೆ ಓಡಿ ಹೋಕೆ ನೋಡ್ತಿದ್ದರೆ. ನಿನ್ನೆ ಇರ್‍ಯನೇ ಪಾಂಡವರ ಗೂಢಾಚಾರಿಗಳ ಕೈಗೆ ಸಿಕ್ಕಿಬೀಳ್ತಿತ್. ಆ ಕೂಡ್ಲೆ ಅರ್ಜುನ ಅಂವನ ತಲೆ ಕಡ್ಯತಿತ್ತ್. ಆದರೆ ಇಂದ್ ಜಯದ್ರಥನ ಕೊಲ್ಲಿಕೆ ಅರ್ಜುನಂಗೆ ಹೇಂಗೆ ಸಾಧ್ಯ ಆತ್?"

ಆಗ ದುರ್ಯೋಧನ ಉತ್ತರ ಕೊಟ್ಟತ್. "ಇಂದ್ ಹಿಂಬೊತ್ತಿಗೆ ಮುಟ್ಟ ಜಯದ್ರಥ ಎಲ್ಲಿ ಉಟ್ಟೂಂತ ಕಂಡ್ ಹಿಡ್ಯಕೆ ಅರ್ಜುನಂಗೆ ಆತ್ಲೆ. ನಾವು ಜಯದ್ರಥನ ಸುತ್ತೋಳೂ ದೊಡ್ಡ ಕೋಟೆನನೇ ಕಟ್ಟಿದ್ದೊ. ಕಾಮ್ಯಕಾವನಲಿ ಭೀಮಸೇನ ಅಂವನ ತಲೆ ಬೋಳ್ಸಿ, ಸುಣ್ಣದ ಬೊಟ್ಟು ಇಸಿ, ಕುಂಡೆಗೆ ಜಾಡ್ಸಿ ಮೆಟ್ಟಿದರ ಅಂವಂಗೆ ನೆಂಪು ಮಾಡಿ,

ಅಂವನಲ್ಲಿ ಸೇಡ್‌ನ ಕಿಚ್ಚಿ ಹೊತ್ತಿಸಿದೊ. ದ್ರೌಪದಿನ ಸೊಂಯಂವರ ಕಾಲಲಿ ನಾವು ಅರ್ಜುನನ ಒಟ್ಟಿಗೆ ಕಾಳಗ ಕೊಡಿಕಾಕನ ಜಯದ್ರಥನ ಮಂಜನ ಕೊಂದದರ ನೆಂಪಿಸಿದೊ. ಇದ್ಯಾವುದುನೂ ಪ್ರಯೋಜನಕ್ಕೆ ಬಾತ್ಲೆ. ಅಂವನ ಕೈನ ಬಿಲ್ಲ್ ಆಗಾಗ ಜಾರಿದ್ ಕೆಳಗೆ ಬೀಳ್ತಿತ್ತ್. ಕ್ಷಣ ಕ್ಷಣಲಿ ಅಂವನ ಮೊನ್ಸ್‌ನ ಸಕ್ತಿ ಕುಗ್ಗಿ ಹೋಗ್ತಿತ್ತ್.

"ದುರ್ಯೋಧನ ಮಾತ್‌ನ ನಿಲ್ಸಿ ಉದ್ದಾಕೆ ಉಸ್ರ್ ಎಳ್ಕಂಡತ್. ಅಂವ ಮಾತ್ನ ಮುಂದರ್‍ಸುನ ಲಕ್ಷಣ ಕಾಣದಾಕನ ಭೀಷ್ಮರ್ ಕೇಳ್ದೊ. "ಮತ್ತೆ ಜಯದ್ರಥ ಸತ್ತದ್ ಹೇಂಗೆ?"

ದುರ್ಯೋಧನ ಮೊನ್ಸ್‌ನ ಗಟ್ಟಿ ಮಾಡಿ ಹೇಳ್ತ್. "ಸೂರ್ಯ ಕಂತುವ ಸಮಯ ಹಕ್ಕಲೆ ಬಾತ್. ಆಗ ಇದ್ದಕಿದ್ದಾಂಗೆ ಕತ್ತಲೆ ಮುತ್ತಿಕಂಡ ಹಾಂಗೆ ಆತ್. ಎರ್ಡ್ ಸೇನೆಗ ಯುದ್ಧ ನಿಲ್ಸಿದೊ. ಆಗ ಪಾಂಡವರ ಪಾಳ್ಯದ "ಸೂರ್ಯ ಮುಣ್ಣ್‌ಂಗಿತ್. ಜಯದ್ರಥ ಬೊದ್ಕಿಕಂಡತ್" ಎಂತ ಹೇಳ್ವ ಬೊಬ್ಬೆ ಕೇಳ್ತ್. ಅದರ ಕೇಳಿ ನಮ್ಮೋವು "ಅರ್ಜುನ ಸಪತ ಮಾಡ್ದ ಹಾಂಗೆ ಕಿಚ್ಚಿಗೆ ಹಾರಿ ಸಾಯಲಿ"– ಎಂತ ಬೊಬ್ಬೆ ಹೊಡ್ದೊ. ಎರ್ಡ್ ಸೈನ್ಯದ ನೊಡುಲಿ ಪಾಂಡವರ ಸೈನ್ಯದೋವು ಕೂಡ್ಲೇ ಚಿತೆನ ಮಾಡ್ದೊ– ಅರ್ಜುನ ಸಾಯ್ದುರ ನೋಡಿ ಕುಸಿ ಪಡಿಕೆ ಹೆಡ್ಡನಾಂಗೆ ಜಯದ್ರಥ ನನ್ನ ಮಾತ್‌ನ ಮಿರಿ ಚಿತೆನ ಹಕ್ಕಲೆ ಹೋಗಿಯೇ ಬುಡ್ತ್. ಅದರನೇ ಕಾದ್‌ಕಂಡಿದ್ದ ಅರ್ಜುನ ಕೂಡ್ಲೇ ಬಾಣ ಬುಟ್ಟ್ ಅಂವನ ತಲೆನ ತುಂಡ್ ಮಾಡ್ತ್. ಕುರುಸೇನೆ "ಇದ್ ಅನ್ನೇಯ ಇದ್ ಅನ್ನೇಯ"– ಎಂತ ಬೊಬ್ಬೆ ಹೊಡ್ಯಕನ ಪೊಡುವದಿಕ್ಕಲಿ ಉರುಂಟಾಗಿ ಕೆಂಪುಬಣ್ಣಲಿ ಮುಣ್‌ಂಗುವ ಸೂರ್ಯನ ಕಂಡ್ ಬಾತ್. ಹಂಞ ಹೊತ್ತ್ ಮೋಡ ಸೂರ್ಯನ ಅಡ್ಡ ಬಂದಿತ್ತ್. ಪಾಪಿ ಅರ್ಜುನ ಬೊದ್ಕಿತ್."

ಕೂಡ್ಲೆ ಭೀಷ್ಮರ್ ಹೇಳ್ದೊ. "ಅಂವ ಪಾಪಿ ಆಗ್ತಿದ್ದರೆ ಬೊದ್ಕಿಕೆತ್ಲೆ. ನೋಡ್ದನೋ ಕುಂಞ, ಸೂರ್ಯ ಮುಣ್‌ಂಗಿಕೆ ಹಂಞ ಹೊತ್ತ್ ಮುಂದೆ ಮೋಡ ಒಂದ್ ಸೂರ್ಯಂಗೆ ಅಡ್ಡಬಂದ್‌ದ್ ಕತ್ತಲಾತ್ತ್‌ಂತ ಬ್ರಮೆನ ಮ್ಯೊಂಸಂಗೆ ಹುಟ್ಟಿಸಿದೇಂತೇಳ್ರೆ ಈ ಪ್ರಕೃತಿ ಪಾಂಡವರ ಕಡೆಗೆ ನಿತ್ತ ಹಾಂಗಾತಲೇ? ಅದರ್‍ನೇ ಹಿರ್‍ಯೋವು ದೈವ ಸಂಕಲ್ಪಂತೇಳ್ದು. ಅಂತೂ ಅರ್ಜುನ ಮಂಜನ ಕೊಂದದ್‌ಕ್ಕೆ ಸೇಡ್ ತೀರ್‍ಸಿಕಂಡತ್. ಈಗ ಯುದ್ಧ ನಿಲ್ಲಿಸಿಕೆ ಪಾಂಡೋವು ಒಪ್ಪುವೊ. ನಿಲ್ಸಿ ಬುಡೋಮೋ ಕೂಸೂ?"

ದುರ್ಯೋಧನ ಏರ್ದನಿಲಿ ಹೇಳ್ತ್. "ಅಜ್ಜಪ್ಪಾ, ಪ್ರಕೃತಿ ಪಾಂಡವರ ಪಕ್ಷ ಆದಾದರೆ ನಾ ನಿಮ್ಮಹಕ್ಕಲೆ ಬಾಕೇ ಇತ್ಲೆ. ನಡ್ದದ್ ಒಂದ್ ದೊಡ್ಡ ಮೋಸ ಅಜ್ಜಪ್ಪಾ. ಕುರುಕ್ಷೇತ್ರದ ಪೊಡುವದಿಕ್ಕ್‌ಲಿ ಕರ್ಪೂರದ ರಾಶಿಗೆ ಕಿಚ್ಚಿ ಕೊಟ್ಟ್, ಅದರ ದಟ್ಟಹೊಗೆಲಿ ಸೂರ್ಯ ಕಾಣದಂಗಾಕನ ಪಾಂಡೋವು ಮಾಡ್ದ ಈ ತಂತ್ರಕ್ಕೆ ಜಯದ್ರಥ ಬಲಿ ಆತ್. ಪಾಂಡೋವು ಸೊಯ್ದೆ ಒಟ್ಟಿ ಚಿತೆನ ಮಾಡ್ದ್. ಅರ್ಜುನ ಅದ್ಕೆ ಸುತ್ತ ಬಂದದ್ ಎಲ್ಲಾ ಕಪಟ ನಾಟಕ. ಇದರೆಲ್ಲಾ ಮಾಡ್ಸಿದಂವ ಆ ಕಳ್ಳ ಕೃಷ್ಣ. ಈಗ ಹೇಳಿ ಅಜ್ಜಪ್ಪಾ, ಇದ್ ಧರ್ಮನೋ? ಧರ್ಮಕ್ಷೇತ್ರ ಆದ ಕುರುಕ್ಷೇತ್ರಲಿ ಇಂತಾ ಮೋಸನ ಮಾಡೋಕೋ?"

ಇದರ ಕೇಳಿ ಭೀಷ್ಮರಿಗೆ ಬಾಯಿ ಕಟ್ಟಿತ್. ಅಭಿಮನ್ಯುನ ಕೊಂದದೇ ಅಧರ್ಮಾಂತ ಅವರ ಮೊನ್ಸ್ ಹೇಳ್ತಿತ್ತ್. ಅದರ ಬಾಯ್ಬುಟ್ಟ್ ಹೇಳ್ರೆ ತನ್ನ ಮಂಜ ಲಕ್ಷ್ಮಣಕುಮಾರ ಸತ್ತದರ ಹೇಳಿ, ಅಭಿಮನ್ಯುನ ಕೊಂದದ್ ಸೇಡ್‌ಂದಾಂತ ದುರ್ಯೋಧನ ಹೇಳ್ದೆ. ಮೋಸಂದ ಅಭಿಮನ್ಯು ಹಾಂಗೆ ಸಾಯದಿರ್‌ತಿದ್ದರೆ. ಜಯದ್ರಥನ ಅರ್ಜುನ ಹಾಂಗೆ ಕೊಲ್ಲದಿರ್ತಿತ್ತೋ ಏನೋ? ದ್ರೋಣಾಚಾರ್ಯರ್ ಸೇನೆನ ಮುಖಂಡರ್ ಆದ ಮೇಲೆ ಎರ್ಡ್ ಕಡೇವ್ಕೂ ಗೆಲ್ಲುದೇ ಮುಕ್ಯ ಆದೆ. ಗೆಲ್ಲುವ ದಾರಿ ಯಾವ್ದಾದರೆ ಅಷ್ಟೇನ್? ಇದರ ನಿಲ್ಲೋಕು.

ಗಟ್ಟಿ ದನಿಲಿ ಭೀಷ್ಮರ್ ಹೇಳ್ದೊ. "ಕೂಸೂ, ಮೋಸನೋ, ಅಧರ್ಮನೋ ಇನ್ನ್ ಮಾತಾಡಿ ಏನ್ ಪ್ರೋಜನ ಹೇಳ್. ಕೃಷ್ಣನಂತಾ ಉಪಾಯಗಾರಿಕೆ ತಿಳ್ದಂವ ಪಾಂಡವರ ಕಡೆಗಿರಿಕಾಕನ, ಪಾಂಡವರ ಗೆಲ್ಲುದು ಸುಲಬ ಅಲ್ಲಾಂತ ನಿಂಗೆ ಈಗ ಗೊತ್ತಾಗಿರ್ದು. ಧರ್ಮ ಯುದ್ಧ ಇಂತಾ ವಿಕಾರನ ಪಡ್ದದೇಂತಾದರೆ ಯುದ್ಧ ಮುಂದರ್ಸುದರ್ಲಿ ಅರ್ತ ಇಲ್ಲೆ ಕುಂಞಿ. ಸಂಧಾನದ ಪ್ರಯತ್ನ ಮಾಡೊಮೊ. ಇನ್ನ್ ಸಾ ಹೆಚ್ಚಿಗೆ ಅನಾಹುತ ಆದರ ತೊಪ್ಪುಸೊನೊ. ಕುರು ಪಾಂಡವ ಪಕ್ಷಲಿ ಇರೋವು ಎಲ್ಲೋವುನೂ ನನ್ನಂದ ಸಣ್ಣೋವು. ಸುಕಲಿ ಬೊದ್ಕಿ ಕುರು ಸಾಮ್ರಾಜ್ಯನ ಒಳ್ಳೋವರ ಸತ್ತ ಸುದ್ದಿ ಕೇಳಿಕಾಕನ ಈ ಮುದಿ ಜೀವ ಮೊರ್ಗಿದೆ. ಇನ್ನ್ ಸಾಕ್. ಹೇಂಗಾದರ್ ಯುದ್ದನ ನಿಲ್ಸೊಮೊ".

ದುರ್ಯೋಧನ ಒಪ್ಪಿತ್ಲೆ. "ಹೇಂಗಾದೆ ಅಜ್ಜಪ್ಪಾ? ಲಕ್ಷ್ಮಣಕುಮಾರನ ಕೊಂದದಕ್ಕೆ ಪ್ರತಿಕಾರ ತೀರ್ಸಿಕೆ ಅಭಿಮನ್ಯುನ ಕೊಲ್ಲಕಾತ್. ನಮ್ಮ ಜಯದ್ರಥನ ಕೊಂದದಕ್ಕೆ ಪ್ರತಿಕಾರ ತೀರ್ಸುದು ಬೇಡನೋ? ಅಂವ ನಿಜಲಿ ಕುರುವಂಶದಂವ ಆಗಿರ್ತಿದ್ದರೆ ಜಯದ್ರಥನ ಕೊಲ್ಲಿಕೆ ಅಂವಂಗೆ ಮೊನ್ಸ್ ಬಾತಿತ್ಲೆ. ದುಶ್ಶಳೆನ ಅಂವ ಸೊಂತ ತಂಗೇಂತ ತಿಳ್ಕತಿದ್ದರೆ ಹಾಂಗೆ ಮೋಸಂದ ಜಯದ್ರಥನ ಕೊಲ್ಲಿಕೆ ಮೊನ್ಸ್ ಬಾತಿತ್ತೋ? ಇಷ್ಟರ್ಲೂ ಅಭಿಮನ್ಯುನ ಕೊಂದಂವ ಜಯದ್ರಥ ಅಲ್ಲ. ಕುರುವಂಶದ ಅಂತ್ಯ ಆಕೂಂತೇಳಿನೇ ಅಂವ ದುಶ್ಶಳೆನ ಗಂಡನ ಕೊಂದುಟು. ಇದರ ಸೇಡ್ ತೀರ್ಸದೆ ನಾ ದುಶ್ಶಳೆಗೆ ಮೋರೆ ತೋರ್ಸುದುಲ್ಲೆ."

ಭೀಷ್ಮರ್ ಮೊನ್ಸ್‌ಲೇ ಏಚನೆ ಮಾಡ್ದೊ. ಸಣ್ಣದಿರಿಕಾಕನ ಶಂತನು ಚಕ್ರವರ್ತಿಗ ಚಂದ್ರವಂಶದ ಹಿರ್ಯರ ಚರಿತ್ರೆನ ಹೇಳಿ ತನ್ನನ ನಿದ್ದೆ ಮಾಡ್‌ಸ್ತಿದ್ದದ್ ಅವರ ನೆಂಪಿಗೆ ಬಾತ್. ಕುರುವಂಶದ ಪಟನ ತೋರ್ಸಿ ಹೆಮ್ಮೆಂದ ಶಂತನು ಚಕ್ರವರ್ತಿಗ ವಿವರ್ಸ್‌ತಿದ್ದೊ. "ಕುರುಮಹಾರಾಜನ ಐದ್ನೇ ತಲೆಮಾರ್‌ನಪರ್ಯ್ಯಾಸ್ರವಸರ್‌ನಿನ್ನ ಅಜ್ಜಪ್ಪನೀ ಕುರುವಂಸದ ಏಳ್ನೇ ತಲೆಮಾರ್ನಂವ. ಈ ಪಟನನಿನ್ನಮಕ್ಕ, ಪುಳ್ಳಿಕಳಿಗೆ ಅಭಿಮಾನಂದ ತೋರ್ಸು. ಸೂರ್ಯ ಚಂದ್ರ ಇರಿಕನ ಮುಟ್ಟ ಕುರುವಂಸದ ಕೀರ್ತಿ ಇರ್ಲಿ." ಸಂತನ ಚಕ್ರವರ್ತಿಗಳ ಆಸೆ ಈಡೇರ್ತ್‌ಲ್ಲೆ. ಕುರುವಂಸ ವಿಚಿತ್ರವೀರ್ಯನಲ್ಲಿಗೆ ನಿತ್ತ್ ಹೋತ್. ದೃತರಾಷ್ಟ್ರ ಮತ್ತೆ ಪಾಂಡು ಬೀಜ–ಕ್ಷೇತ್ರದ ವಾದದ ಪ್ರಕಾರ ಕುರುವಂಸದೊವು ಆದುಲ್ಲೆ. ಈ ದುರ್ಯೋಧನ ಅರ್ಜುನನ ಕುರುವಂಸದ ಮಂಜ ಅಲ್ಲಾಂತ ಹೇಳ್ದೆ. ಹಾಂಗೆ ನೋಡ್ರೆ ದುರ್ಯೋಧನನೂ ಕುರುವಂಸದ ನಿಜದ ಮಂಜ ಅಲ್ಲ!

ಈಗ ಇಂವ ದುಶ್ಶಳೆ ಮುಂಡೆ ಆದಕ್ಕೆ ಸೇಡ್ ತೀರ್ಸಿಕೆ ಹೊರ್ಟುಟು. ಇಂವಂದ

ಏನ್ ಮಾಡಿಕಾದು? ಮಂಜನ ಕಳ್ಕಂಡತ್. ತಮ್ಮಂದರ ಒಬ್ಬೊಬ್ಬನನೇ ಕಳ್ಕಂಡದೆ. ಈಗ ತಂಗೆನ ಗಂಡನ ಕಳ್ಕೊಂಡುಟು. ಹಟನ ಮಾತ್ರ ಕಳ್ಕಂಡತ್ಲೆ. ಸೇಡ್ ತೀರ್ಸಿದೆ ಗಡ. ಏನ್ ಮಾಡ್ದೆ? ಲಕ್ಷ್ಮಣಕುಮಾರನ ಕೊಂದದ್ಕ್ಕೆ ಅಭಿಮನ್ಯುನ ಅಧರ್ಮಲಿ ಹೇಂಗೋ ಕೊಲ್ಲಿಸಿತ್. ಜಯದ್ರಥನ ಕೊಂದದ್ಕ್ಕೆ ಪ್ರತಿಕಾರ ಆಗಿ ಅರ್ಜುನನ ಕೊಲ್ಲುಸುದೋ? ಅರ್ಜುನನ ಕೊಲ್ಲುವಂತ ಬಿಲ್ಲ್ ವಿದ್ಯೆಲಿ ಪಳ್ಗಿದೊವು ಈ ಭೂಮಿಲಿ ಯಾರಾದರ್ ಇರ್ರೊವನೋ?

ಭೀಷ್ಮರ್ ಆತಂಕಲಿ ಪ್ರಸ್ನೆ ಕೇಳ್ದೊ. "ಏನ್‌ಮಾಡ್ಯ ಕುಂಞ? ಜಯದ್ರಥನ ಕೊಂದಂವ ಅರ್ಜುನ. ನೀ ಅರ್ಜುನನ ಕೊಂದ್ಯನೋ?"

ದುರ್ಯೋಧನ ಹೇಳ್ತ್, "ಒಂದು ಪ್ರಯತ್ನ ಅಜ್ಜಪ್ಪಾ. ಇಂದ್ ಇರ್‍ಳ್ ಪಾಂಡವ ಪಾಳ್ಯಕ್ಕೆ ನಮ್ಮ ಸೇನೆನ ನುಗ್ಗುಸೊಕೊಂತ ಒಳೆ. ಈ ಇರ್‍ಳ್‌ನ ಯುದ್ಧದ ಸಲಹೆ ಹೇಳ್ದ್ ಇಂವ ದುಶ್ಯಾಸನ. ದ್ರೋಣಚಾರ್ಯರ ಮತ್ತೆ ಕರ್ಣನ ಮುಂದೆ ಈ ಸಲಹೆನ ಹೇಳಿಕನ "ಅಜ್ಜಪ್ಪನಲ್ಲಿ ಒಂದುಮಾತ್ ಕೇಳಿಮುಂದರ್‍ಸ್" ಎಂತಹೇಳ್ದೊ. ನಂಗೂ ಅದ್‌ಸರೀಂತ ಕಂಡ್‌ದ್ಕ್ಕೆನಿಮ್ಮಲ್ಲಿಗೆಬಂದೊಳೊ. ಅಪ್ಪಣೆ ಕೊಡೊಕು ಅಜ್ಜಪ್ಪಾ."

ಭೀಷ್ಮರಿಗೆ ಈಗ ನಿಜ ಗೊತ್ತಾತ್. ದುರ್ಯೋಧನನೊಟ್ಟಿಗೆ ಇಂದ್ ಯಾಗೋಳೂ ಬಾರದ ದುಶ್ಯಾಸನ ಬಂದುಟು. ದ್ರೋಣಾಚಾರ್ಯರ್, ಕರ್ಣ, ಶಲ್ಯ ಯಾರುನೂ ಬಾತ್ಲೆ. ನೇಮದ ಪ್ರಕಾರ ಕುರುಕ್ಷೇತ್ರಲಿ ಇರ್‍ಳ್ ಯುದ್ಧ ಆಕ್ರಮಣ ಮಾಡಿಕೆ ಬೊತ್ತ್. ವಿಶ್ರಾಂತಿ ತಕಂಬಕನ ಆಕ್ರಮಣ ಮಾಡಿಕೆ ಬೊತ್ತ್‌ಂತ ಯುದ್ಧ ಸುರಾಕನನೇ ನಿರ್ಣಯ ಮಾಡಿ ಆಗುಟ್ಟು. ಈಗ ದುರ್ಯೋಧನ ಇರ್‍ಳ್ ಯುದ್ಧದ ಮಾತ್‌ನ ಹೇಳ್ದೆ. ಬೋಳಾಂತೇಳ್ವ ದುಶ್ಯಾಸನನ ತಲೆಲಿ ಬೇಡದ ಐಚನೆ ಒಂದ್ ಹುಟ್ಟಿಕಂಡುಟು. ಅದ್ ದುರ್ಯೋಧನಂಗೆ ಕುಸಿ ಆಗುಟು. ದ್ರೋಣರ್ಗೆ ಕರ್ಣಂಗೆ ಇದ್ ಕುಸಿ ಕೊಡದ ಇಚಾರ ಆಗಿರೋಕು ಅದ್ಕೇ ಇಲ್ಲಿಗೆ ಬಾವುದರ ತೊಪ್ಪಿಸಿ, ಎಲ್ಲಾ ಬಾರನ ನನ್ನ ತಲೆಗೆ ಹೊರ್‍ರೋಳೊ. ನಾ ಒಪ್ಪಿರೆ ಯುದ್ಧದ ನಿಯಮನ ಮುರ್ದ ಅಪವಾದನ ನನ್ನ ತಲೆಗೆ ಕಟ್ಟಿಕೆ ನೋಡ್ವೆ. ಇರ್‍ಳ್‌ನ ಯುದ್ಧ ಧರ್ಮ ಸಮ್ಮತಿ ಅಲ್ಲಾಂತ ಗೊತ್ತಿದ್ದ್ ಇವರ ಕಳ್ಸೊಳೊ. ದುರ್ಯೋಧನನ ಎದ್ರ್ ಅದರ ಹೇಳಿಕೆ ಆಗದೆ ಅವನ ಹೊರ್‍ಡಿಸಿಯೊಳೊ. ಅವರ ಮೊನ್ಸ್‌ನ ಅರ್ತ ಮಾಡಿಕಂಬಕೆ ದುರ್ಯೋಧನಂಗೆ ಆತ್ಲೆ. ಇದ್ ಧರ್ಮ ಅಲ್ಲಾಂತೇಳ್ವ ಮಾತ್‌ನ ಹೇಳ್ರೆ ಲಕ್ಷ್ಮಣಕುಮಾರನ, ಜಯದ್ರಥನ ಕಳ್ಕಂಡ ದುರ್ಯೋಧನ ನನ್ನ ಮಾತ್‌ಗೆ ಕೆಬಿ ಕೊಡುವ ಸ್ತಿತಿಲಿ ಇರ್ದುಲ್ಲೆ.

ಬಾಳ ಎಚ್ಚರ್‍ಕಂದ ಭೀಷ್ಮರ್ ಮಾತಾಡ್ದೊ. "ಕೂಸು, ಈಗ ಕುರುಸೇನಾಧಿಪತಿಯಾಗಿ ಇರೋವು ಗುರುದ್ರೋಣರ್. ಯುದ್ಧದ ಈ ಹಂತನ ಸೇನಾಧಿಪತಿನೇ ನಿರ್ಣಯ ಮಾಡೊಕು. ಯುದ್ಧದ ಪರಿಸ್ತಿತಿ ಬದ್ಲಾಕನ ಅದ್ಕೆ ಸರಿಯಾದ ತೀರ್ಮಾನನ ತಕಂಬಕೆ ಅವರ್‌ಂದ ಮಾತ್ರ ಸಾದ್ಯ. ಅವು ಹೇಳ್ದಾಂಗೆ ನೀವು ನಡ್ಯೋಕು. ನನ್ನ ಸರೀರ ಮತ್ತೆ ಮೊನ್ಸ್ ಎರ್‍ಡೂನೂ ಗಾಸಿಗೊಂಡುಟು. ನನ್ನ ಯಾಕೆ ಇದರ ನೊಡುಲಿ ಎಳ್ಕಂಡರೆ?"

ದುರ್ಯೋಧನ ಮೆತ್ತಂಗೆ ಹೇಳ್ತ್. "ಅಜ್ಜಪ್ಪಾ, ಹೆಬ್ಬೆರ್‌ನ ಕಳ್ಕಂಡ್ ಗುರುಗಳ ಮೋನ್ಸ್‌ಗೆ ಬಾಳ ಬೇಜಾರಾಗುಟು. ನಿನ್ನೆ ಸೇನಾಧಿಪತ್ಯನ ಕರ್ಣಂಗೆ ಕೊಟ್ಟನೇಂತ ಹೇಳ್ತಿದ್ದೊ. ಕರ್ಣ ಒಪ್ಪಿತ್ಲೆ. ನನ್ನ ಮೋನ್ಸ್‌ಲಿರ್ದರ ಹೇಳ್ನೆ ಅಜ್ಜಪ್ಪಾ. ನೀವಿರಿಕನಮುಟ್ಟ ಕುರುಸೇನೆಗೆ ಬೇರೆವು ಅಧಿಪತಿಗ ಆಕೆ ಹೇಂಗಾದೆ? ನೀವು ಇರ್ನ್ಯನ ಯುದ್ಧಕ್ಕೆ ಒಪ್ಪಿಗೆ ಕೊಡೊಕು. ಕುರುಸೇನೆ ಗೆಲ್ಲೋಕರೆ ನಿಮ್ಮ ಆಶೀರ್ವಾದ ಬೇಕ್."

ಭೀಷ್ಮರ್‌ಗೆ ತಳಮಳ ಆತ್. ಈ ದುರ್ಯೋಧನಂಗೆ ಬುದ್ಧಿಮಾತ್ ಬೇಡ. ಅಂವ ಮಾಡ್ವ ಕೆಲ್ಸಕ್ಕೆ ನನ್ನ ಒಪ್ಪಿಗೆನ ಮುದ್ರೆ ಬೇಕ್. ಏನ್ ಮಾಡ್ದು? ಬಂದದರ ಉಪಾಯಂದ ಪರಿಹರ್‍ಸೋಕೂಂತ ಭೀಷ್ಮರ್ ಹೇಳ್ದೊ. "ಕುಂಞೀ, ನಿನ್ನ ಅಜ್ಜಪ್ಪ ಏನ್‌ನ ಹೇಳ್ವೇಂತ ಗೊತ್ತಿದ್ದ್‌ನೂ ನನ್ನ ಅಪ್ಪಣೆ ಕೇಳ್ಯಲೆ? ಯುದ್ಧ ಸುರಾಕನ ಮುಂದೆ ನಾವು ಮಾಡಿಕಂಡ ಕರಾರ್ ಪ್ರಕಾರ ಇರ್ನ್ಯ ಯುದ್ಧಮಾಡಿಕೆ ಬೊತ್ತ್. ಶತ್ರು ನಿದ್ದೆಮಾಡಿ ಕಂಡಿರಿಕಾಕನ ಆಕ್ರಮಣ ಮಾಡ್ದು ಅಧರ್ಮ ಆದೆ."

ದುರ್ಯೋಧನ ಮತ್ತೆ ಸಿಡ್‌ಕಿತ್. "ಜಯದ್ರಥನ ಕೊಲ್ಲಿಕೆ ಪಾಂಡೋವು ಅಡ್ಡದಾರಿನ ಹಿಡ್ದೊ ಅದ್ ಅಧರ್ಮ ಅಲ್ಲನೋ ಅಜ್ಜಪ್ಪಾ? ಅವು ಧರ್ಮಕ್ಕೆ ಇರೋದದ ಕೆಲ್ಸ ಮಾಡಿ ಗೆದ್ದವೇಂತಾದರೆ ನಾವ್ಯಾಕೆ ಇರ್ನ್ಯ ಯುದ್ಧ ಮಾಡಿ ಗೆಲ್ಲಿಕಾಗದ್? ಪ್ರೇಮಲಿ ಮತ್ತೆ ಯುದ್ಧಲಿ ಹೇಂಗೆ ಮಾಡ್ರೂ ಕ್ಷಮೆ ಉಟ್ಟೂಂತ ನೀವ್ನನೂ ಗೊತ್ತುಟು. ನಾವು ಹೇಂಗಾದರೂ ಗೆದ್ದೇ ಗೆಲ್ಲೊಕು."

ಅವಂಗೆ ಉತ್ತರ ಏನ್ ಹೇಳ್ದೂಂತ ಭೀಷ್ಮರಿಗೆ ಗೊತ್ತಾತ್ಲೆ. ಅಂವ ಮಾಡ್ವ ಕೆಟ್ಟ ಕೆಲ್ಸಲಿ ನನ್ನ ಸಾ ಎಳ್ಕಂಬ ಅಂವನ ಪ್ರಯತ್ನಕ್ಕೆ ಅವ್ಕೆ ಬೇಜಾರಾತ್. ಅಧರ್ಮ ಕೆಲ್ಸಕ್ಕೆ ಅಜ್ಜಪ್ಪ ಒಪ್ಪುದ್ಲೇಂತ ಗೊತ್ತಿದ್ದರುನೂ ನನ್ನ ಒತ್ತಾಯ ಮಾಡ್ದೆ. ಹಸ್ತಿನಾವತಿನ ರಾಜಸಭೆಗೆ ಕಾಡ್‌ಮುರ್ಗದ ಹಾಂಗೆ ದ್ರೌಪದಿನ ಎಳ್ದ್ ತಾಕಾಕನ, ಸೀರೆನ ಎಳ್ದ್‌ದ್ ಅಪಮಾನ ಮಾಡಿಕಾಕನ, ಮೂಡದ ಪಾಪ ಪ್ರಜ್ಞೆ ಈಗ ಕಾಡಿದೆನೋ? ಇಲ್ಲರೆ ಇರ್ನ್ಯನ ಕಾಳಗಲಿ ಎರ್ಡ್ ಪಾಳ್ಯಲಿ ನಡೆವ ಸಾವುಗಳ ಪಾಪನ ಪಡ್ಕಂಬಕೆ ಇಂವಂಗೆ ಒಂದು ಬಲಿಪಶು ಬೇಕಾದೆನೋ?

ಈಗ ಸಾ ಭೀಷ್ಮರ್ ಹೇಳ್ದೊ "ಕೂಸು, ಪಾಂಡೋವು ಮಾಡ್ದ್ ಧರ್ಮಂತ, ಇಲ್ಲರೆ ಸರೀಂತ ನಾ ಎಲ್ಲಿ ಹೇಳ್ದೆ? ಜಯದ್ರಥನ ಕೊಲ್ಲಿಕೆ ಅವು ಮಾಡ್ದ ಮಾರ್ಗ ಸರಿ ಅಲ್ಲ. ಎದ್‌ರ್‌ನವರ ಅಧರ್ಮ ಕೆಲ್ಸಗ ನಮ್ಮ ಧರ್ಮ ಬಾಹಿರ ಕೆಲ್ಸಕ್ಕೆ ಸಮರ್ತನೆ ಆಕೆ ಬೊತ್ತ್. ಪಾಂಡೋವು ಈಗಳೂ ಸಾಮಾನ್ಯ ಜನಂಗ. ನೀ ಹಾಂಗಲ್ಲ ರಾಜ್ಯನ ಆಡಳ್ತೆ ಮಾಡುವ ಚಕ್ರವರ್ತಿನ ಮಂಜ. ಮುಂದೆ ಕುರು ಚಕ್ರಾಧಿಪತ್ಯದ ಸಿಂಹಾಸನಲಿ ಕುದ್ರಂವ. ಪ್ರಜೆಗ ಮಾಡುವ ತೊಪ್ಪುಗೆ ಶಿಕ್ಷೆ ಉಟ್ಟು. ಕ್ಷಮೆ ಉಟ್ಟು. ಪ್ರಭುಗ ಮಾಡುವ ತೊಪ್ಪುಗೆ ಶಿಕ್ಷೆ ನೀಡೋವು ಯಾರ್? ಪ್ರಭುಗ ಮಾಡ್ವ ತೊಪ್ಪುಗ ಕ್ಷಮೆ ಇಲ್ಲದ್. ಮತ್ತೆ ಅನಾಹುತ ಮಾಡುವಂತಾದ್. ಆ ತೊಪ್ಪುಗ ಜನಸಾಮಾನ್ಯರಲ್ಲಿ ಆಚರಣೆಗೆ ಬಂದರೆ, ಅದೇ ರೂಢಿ ಆದೆ. ಸಾಸ್ತ್ರನಾದರ್ ಬದ್ಲಾಯ್ಸಕ್. ಆದರೆ ರೂಢಿಯಾಗಿ ಬಂದದರ ಬದ್ಲಾಯ್ಸಿಕಾದ್ಲೆ

ಕುಂಞೆ. ನೀ ಹಟ ಮಾಡ್ಬಡ. ಇರ್‍ಳ್ನ ಕಾಳಗಕ್ಕೆ ನಂಗೆ ಒಂದೇ ಒಂದು ಸರಿದಾರಿ ಕಾಂಬೊದ್ಲೆ."

ದುರ್ಯೋಧನ ಸೋಲ್‌ನ ಒಪ್ಪಿಕಂಡತ್ಲೆ. "ಅಜ್ಜಪ್ಪಾ, ಕುರು ಸಾಮ್ರಾಜ್ಯನ ಮುಂದೆ ಆಡಳ್ತೆ ಮಾಡುವ ರಾಜನ ನಿರ್ಧಾರ ಮಾಡ್ವ ಯುದ್ಧ ಇದ್. ಲೆಕ್ಕ ಹಾಕಿ ನೋಡಿನಿ. ಪಾಂಡೋವು ಕಳ್ಕಂಡ್‌ದ್ ಒಬ್ಬ ಅಭಿಮನ್ಯುನ ಮಾತ್ರ. ನಾನ್ ಕಳ್ಕಂಡ್‌ದ್ ಮಂಜನ, ತಮ್ಮಂದರ, ಮತ್ತೆ ಈಗ ಜಯದ್ರಥನ. ಸಿಂಹಾಸನ ಕುರುವಂಸಸ್ಥರ್ ಅಲ್ಲದವರ ಪಾಲಾದರ ತೊಪ್ಪುಸುವ ನನ್ನ ಪ್ರಯತ್ನಕ್ಕೆ ನಿಮ್ಮ ಆಶೀರ್ವಾದ ಬೇಕ್ ಅಜ್ಜಪ್ಪಾ. ಪಾಂಡವರಲ್ಲಿ ಒಬ್ಬ ಸತ್ತರೆ ನಾವು ಗೆದ್ದ ಹಾಂಗೆ. ಇರ್‍ಳ್ ನಡ್ಯವ ಯುದ್ಧಲಿ ಒಬ್ಬ ಪಾಂಡವನ ಆದರ್ ಕೊಲ್ಲಕ್. ಕುರು ಸಾಮ್ರಾಜ್ಯ ಪಾಂಡುಗೆ ಹುಟ್ಟಿದವರ ಪಾಲಾದರ ತೊಪ್ಪುಸಕ್."

ಇಂವನ ಅಪ್ಪ ಧೃತರಾಷ್ಟ್ರ ಅಂಬಿಕೆಲಿ ದ್ವೈಪಾಯನಂಗೆ ಹುಟ್ಟಿದಂವ. ಅಂಬಿಕೆ ಕುರುವಂಸದ್ ಅಲ್ಲ. ದ್ವೈಪಾಯನರ್ ಪರಾಶರ ಮಹಾಮುನಿಗಳ ಮಂಜ. ಪರಾಶರರ್ ಶೂದ್ರನೋ, ಹಾರಂವನೋ ಯಾರಿಗೆ ಗೊತ್ತ್? ಋಷಿ ಮೂಲನ ಕೆದ್ಕುದು ತೊಪ್ಪು. ಪಾಂಡು ಅಂಬಾಲಿಕೆನ ಹೊಟ್ಟೆಲಿ ದ್ವೈಪಾಯನಂಗೆ ಹುಟ್ಟಿದಂವ. ಅಂವನೂ ಕುರುವಂಸದಂವ ಆದುಲ್ಲೆ. ಹುಟ್ಟು ಕುರ್ಡ ಧೃತರಾಷ್ಟ್ರ ಹುಟ್ಟಿಕಾಕನ ಕಣ್ಣ್ ಕಾಂಬೊದುಲ್ಲೇಂತ ಹೇಳ್ದರ ಬುಟ್ಟರೆ ಅಂವ ಆರೋಗ್ಯಲಿ ಇತ್ತ್. ಸುರುಗೆ ಹುಟ್ಟಿದಂವ ಆದ ಕಾರ್‍ಣ ಧೃತರಾಷ್ಟ್ರ ಕುರುಸಾಮ್ರಾಜ್ಯದ ಚಕ್ರವರ್ತಿ ಆತ್. ಗಾಂಧಾರ ದೇಶದ ರಾಜ ಸಬಲನ ಹನ್ನೊಂದು ಜನ ಮಗಕ್ಕಳ ಮೊದ್ವೆ ಆಗಿ ನೂರ ಒಂದು ಮಕ್ಕಳ ಪಡ್ತ್. ಅರಮನೆಲಿ ಕೆಲ್ಸ ಮಾಡಿಕಂಡಿದ್ದ ಹೆಣ್ಮಕ್ಕಳಿಗೂ ಸಂತಾನ ಭಾಗ್ಯನ ಕೊಟ್ಟತ್. ಮಕ್ಕಳ ಹುಟ್ಟುಸದರ್ಲಿ ಅಂವ ಬಿರ್ಸ. ಆದರೆ ಪಾಂಡು ರೋಗಿ ಆಗಿ ಹುಟ್ಟಿತ್. ರೋಗಿ ಆಗಿನೇ ಬೆಳ್ತ್. ಕುಂತೀಭೋಜನ ಸಾಕ್ ಮಗಳ್ ಕುಂತಿನ ಮೊದ್ವೆ ಆತ್. ಮಕ್ಕ ಆತ್ಲೆ. ಮದ್ರ ದೇಸದ ರಾಜನ ಮಗ ಮಾದ್ರಿನ ಮೊದ್ವೆ ಆತ್. ಅದರ್‍ಲೂ ಮಕ್ಕ ಆತ್ಲೆ. ಪಾಂಡುಗೆ ಸಂತಾನ ಸಕ್ತಿನೇ ಇತ್ಲೆ. ಬೇಕಾದ ಮೊದ್ದ್ ಎಲ್ಲ ಮಾಡ್ಸಿರುನೂ ಗುಣ ಕಂಡತ್ಲೆ. ಗಂಡನ ಅಪ್ಪಣೆ ಪಡ್ದೇ ಕುಂತಿ ಬೇರೆವ್ರಂದ ಯುಧಿಷ್ಠಿರ, ಭೀಮಸೇನ, ಅರ್ಜುನನ ಪಡ್ದತ್. ಮಾದ್ರಿ ನಕುಲ, ಸಹದೇವರ ಪಡ್ತ್. ಗಂಡಂಗೆ ಮಕ್ಕ ಹುಟ್ಟುಸುವ ಸಕ್ತಿ ಇಲ್ಲದಿರಿಕಾಕನ ಬೇರೆವರ್‌ಂದ ಮಕ್ಕಳ ಪಡ್ಯೋದು ಧರ್ಮಕ್ಕೆ ಇರೋದ ಆದುಲ್ಲೆ. ಪಾಂಡೋವು ಅಪ್ಪಂಗೆ ಹುಟ್ಟಿದೋವು ಅಲ್ಲಾಂತ ಹೇಳಿಕಂಬದರ್ಲಿ ದುರ್ಯೋಧನ ಸಂತೋಷಪಡ್ತಿತ್ತ್. ಅಪ್ಪ ಎಂತ ಹೇಳ್ದು ನಂಬಿಕೆ ಮೇಲೆ ನಿತ್ತದೆ. ಅವ್ವ ಎಂತ ಹೇಳ್ದು ಕಣಿಗೆ ಕಂಡದೆ. ಇದರ ಎಸ್ಟ್ ಸಲ ಹೇಳ್ರೂ ದುರ್ಯೋಧನ ಪಾಂಡವರ ಹಡಬೆಗ ಎಂತ ಹೇಳ್ದರ ನಿಲ್ಸಿತ್ಲೆ.

ಗಟ್ಟಿ ದನಿಲಿ ಭೀಷ್ಮರ್ ಹೇಳ್ದೊ, "ಕೂಸೂ, ಜೂವನಲಿ ಹಟ ಸಾಧನೆನ ದೊಡ್ಡದ್‌ಂತ ತಿಳ್ದಂವ ನೀ. ಬುದ್ಧಿ ಮಾತ್ ಹೇಳ್ರೆ ಕೇಳಂವ ಅಲ್ಲ. ಆಚಾರ್ಯಂತ ಹೇಳಿ ಕರ್ಸಿಕಂಬ ನಾ, ಅಧರ್ಮಾಂತ ತಿಳ್ದರೂ ಇರ್‍ಳ್ ಹೊತ್ತ್ ಪಾಂಡವ ಪಾಳ್ಯಕ್ಕೆ ಮುತ್ತಿಗೆ ಹಾಕಿಕೆ ಹೇಂಗೆ

ಒಪ್ಪಿಗೆ ಕೊಡಲಿ? ಇಂತಾ ಹಾಳ್ ಬುದ್ಧಿನ ಬುಡು. ಮೋಸಂದ ಈಗನ ಮಟ್ಟ್‌ಗೆ ಜಯ ಗಳ್ಸಕ್. ಆದರೆ ಅದರ್‌ಂದ ಸುಕ ಸಿಕ್ಕಿಕಿಲ್ಲೆ. ಸುಕನೇ ಇಲ್ಲದ ಮೇಲೆ ಸಂತೋಸ ಎಲ್ಲಿಂದ ಸಿಕ್ಕುದು? ಸುಮ್ಮಂಗೆ ನನ್ನಂದ ಹೇಳ್ಸಿಕಂಬಡ. ನಾಳೆ ಬೊಳ್ಪುಗೆ ಧರ್ಮಯುದ್ಧನ ಸುರು ಮಾಡ್. ನಿನ್ನದ್ ಧರ್ಮ ಎಂತ ಆದರೆ ಜಯ ಸಿಕ್ಕಿನೇ ಸಿಕ್ಕುದು".

ದುರ್ಯೋಧನ ಕಾಲ್‌ಗೆ ಅಡ್ಡ ಬೀತ್. "ಅಜ್ಜಪ್ಪಾ, ಆ ಪಾಂಡೋವ್ಕೆ ಆದರೆ ತಂತ್ರ, ಪ್ರತಿತಂತ್ರ, ಯುದ್ಧ ಹೇಂಗೆ ನಡ್ಸೋಕೂಂತ ಹೇಳಿ ಕೊಡಿಕೆ ಒಬ್ಬ ಕೃಷ್ಣ ಉಟ್ಟು. ನೀವು ಅಂವಂದ ವಿದ್ಯೆ, ಪ್ರಾಯ, ಅನ್ಬವಲಿ ಮತ್ತೆ ಜ್ಞಾನಲಿ ದೊಡ್ಡೋವು. ನಿಮ್ಮಸ್ಟ್ ಧರ್ಮ ಸೂಕ್ಷ್ಮಗ ಗುರುಗಳಿಗೆ ಕರ್ಣಂಗೆ ಗೊತ್ತಿಲ್ಲೆ. ನೀವು ಇರ್‍ಳ್ ಯುದ್ಧಕ್ಕೆ ಒಪ್ಪಿಗೆ ಕೊಡಿಕಿಲ್ಲೇಂತ ನನ್ನ ಮೊನ್ಸ್ ಹೇಳ್ತಿತ್ತ್. ಆದರೆ ಅಜ್ಜಪ್ಪಾ, ನೀತಿನ ಅಡಿಪಾಯ ಇಲ್ಲದೆ ಯಾವ್ದೇ ಕೆಲ್ಸಕ್ಕೆ ಮುಂದಾಕೆ ಆದುಲ್ಲೆ. ನೀವು ಹಸ್ತಿನಾವತಿನ ನೀತಿನ ಅಡಿಪಾಯ. ನಿಮ್ಮ ಬುಟ್ಟರೆ ನಮ್ಮ ಉದ್ಧಾರ ಮಾಡೋವು ಯಾರೊಳೊ ಅಜ್ಜಪ್ಪಾ? ಇರ್‍ಳ್‌ನ ಕಾಳಗಕ್ಕೆ ನಿಮ್ಮ ಮೊನ್ಸ್ ಒಪ್ಪಿತ್ಲರೆ ಬೇಡ. ಕಡೆಗೆ ನೀವು ಒಂದು ಹರ್‍ಸಟ ಹರ್‍ಸಿ ನಮ್ಮ ಕಳ್ಸಿ ಕೊಡಿನಿ."

ಭೀಷ್ಮರ್ ದುರ್ಯೋಧನನ ತಲೆನ ಮೂಜಿ, 'ಧರ್ಮಕ್ಕೆ ಜಯಸಿಕ್ಕಲಿ'– ಎಂತ ಹರ್‍ಸಿದೊ. ಬಿಡಾರಂದ ಹೊರಗೆ ಹೋಕನ ದುರ್ಯೋಧನನ ಮೋರೆ ಗಂಭೀರ ಆಗಿತ್ತ್. ಇಸ್ಟರಮುಟ್ಟ ಮಾಯ ಆದ ಭೀಷ್ಮರ ಎದೆಬೇನೆ ಮತ್ತೆ ಸುರಾತ್. ಅದರೊಟ್ಟಿಗೆ ನೆಂಪುಗ ಹಿಂದೆಗೆ ಓಡಿ ಆ ಮಾತ್‌ಗ ಕೆಬಿಲಿ ಗುಂಯಿ ಗುಟ್ಟಿತ್. – "ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ..."–

*****

## ಹೋಳು – 07

# ನಂಗೆ ಬೇಡ ಹಸ್ತಿನಾವತಿನ ಬಿಕ್ಸೆ

ಪರ್ದೇಸಿ ಗೂಡೆ ಒಂದು ಮುದಿ ಹಾರಂವನೊಟ್ಟಿಗೆ ತನ್ನನ ನೋಡಿಕೆ ಬಂದುಟೊಂತ ಕಾವಲ್‌ಗಾರ ಹೇಳಿಕಾಕನ ಸಾಲ್ವ ಭೂಪತಿಗೆ ಅಚ್ಚರಿ ಆತ್. ಮಗಳ ಮೊದುವೆಗೆ ಹಣ, ಚಿನ್ನ ಬೇಡಿಕೇಂತ ಬಾವ ಸೌಭದ ಹೆಣ್ಣ್ ಹೆತ್ತೋವು ಮಗಕ್ಕಳೊಟ್ಟಿಗೆ ಅವನ ನೋಡಿಕೆ ಕಾದ್ ನಿಲ್ತಿದ್ದೊ. ಅದಕ್ಕೇಂತ ವಾರಲಿ ಒಮ್ಮೆ ಮಂಗ್ಳವಾರ ಎರ್ಡ್ ಗಂಟೆ ಸಮಯನ ನಿಚ್ಚಯ ಮಾಡಿತ್ತ್. ಆದರೆ ಇಂದ್ ಮಂಗ್ಳವಾರ ಅಲ್ಲ. ಬಂದೋವು ಪರ್ದೇಸಿಗ. ಯಾರ್ ಇರ್‌ವೋ? ಒಂದು ಚಣ ಏಚನೆ ಮಾಡ್ದೆ. ಯಾರಾದರೇನ್? ಬಂದವರ ಸುಮ್ಮಂಗೆ ಕಾಯಿಸುದು ತೊಪ್ಪೂಂತ ಕೂಡ್ಲೇ ಒಳಗೆ ಬಾಕೆ ಹೇಳ್ದೆ.

ಪುರೋಹಿತ ದೇವೀಚರಣದಾಸರ ಒಟ್ಟಿಗೆ ಇದ್ದ ಅಂಬೆನ ನೋಡಿ ಅಂವನ ಮೋರೆ ಕಪ್ಪಾತ್. ಕಾಶೀ ರಾಜ್ಯದ ಉಪವನಲಿದ್ದ ಆ ದೊಡ್ಡ ಸರೋವರಲಿ ಅದರ ಅಚ್ಚರಿ ಆಗುವ ರೀತಿಲಿ ತಾನ್ ಕಂಡ ರಸಂದ ಕೂಡ್ದ ಸಮಯ ಮತ್ತೆ ಮಾತ್‌ಕತೆಗ ನೆಂಪಾದೊ. ಅದ್ಕೆ ಮೊನ್ಸ್ ಇದ್ದರೂ ಅದ್ ಅಂವನೊಟ್ಟಿಗೆ ಅಲ್ಲಿಂದ ಹೊರ್ಟ್ ಬಾತ್ಲೆ. ಮೊರ್ದಿನ ಸೊಂಯಂವರ ಮಂಟಮೆಲಿ ಸೇರ್ದ, ರಾಜನ ಮಗಕ್ಕಳ ಮೊದ್ವೆ ಆಕೆ ಬಂದಿದ್ದ ಗಂಡ್‌ಗಳ ಯುದ್ಧಲಿ ಗೆದ್ದ್, ಅಂಬೆನ ಕೈಲಿದ್ದ ಸೊಂಯಂವರದ ಹೂಮಾಲೆ ತನ್ನ ಕುತ್ತಿಗೆಗೆ ಬೀಳುವ ಕ್ಷಣಕ್ಕೆ ಅಂವ ಕಾದ್‌ಕಂಡಿತ್ತ್. ತಾನ್ ಬಯಸಿದ್, ತನ್ಗೆ ಸಿಕ್ಕಿದೇಂತ ಕುಸಿಲಿರಿಕಾಕನ ಆ ಭೀಷ್ಮ ಗೂಳಿನಾಂಗೆ ಸೊಂಯಂವರ ಮಂಟಮೆಗೆ ನುಗ್ಗಿ ತನ್ನ ಕನ್ಸ್‌ನ ಬಂಗಗೊಳ್ಸಿದರ ನೆಂಪಾಗಿ ಅಂವನ ಮೊನ್ಸ್‌ಲಿ ಬೇಜಾರಾತ್. ಗೆದ್ದ ಅಂವನ ಭೀಷ್ಮ ಸೋಲ್ಸಿತ್. ತನ್ನಂದ ಸೋಲು ಕಂಡ ರಾಜ, ಮಹಾರಾಜರ ಎದ್ರ್‌ಲಿ, ಭೀಷ್ಮಂದ ಸೋಲಿಕಾಕನ, ತಾನ್ ಕಾಡ್‌ಮೊಯಿಂಸಾಂತ ಹಿಯ್ಯಾಳ್ಸ್‌ತಿದ್ದ ಆರ್ಯಾವರ್ತದ ಕ್ಷತ್ರಿಯರ್ ಮೊನ್ಸ್‌ನೊಳಗೆ ಬಾರಿ ಕುಸಿ ಪಟ್ಟೋಂತ ಅಂವಂಗೆ ಗೊತ್ತಿತ್ತ್. ಅಂವನ ನರನಾಡಿಲಿ ಪ್ರೀತಿನ ನೆತ್ತರ್ ಹರಿವಾಂಗೆ ಮಾಡ್ದ ರೂಪಲಿ, ಚಿಂತನೆಲಿ, ಧೈರ್ಯಲಿ ಹೆಣ್ಣ್ ಕುಲಕ್ಕೆ ರತ್ನದ ಹಾಂಗಿದ್ದ ಅಂಬೆ ಆಗ ಅಂವನ ಕೈ ತಪ್ಪಿ ಹೋಗಿತ್ತ್. ಯಾವ ಅಂಬೆನ ಅಂವ ತನ್ನ ಜೂವಮಾನಲಿ ಇನ್ನ್ ತಿರ್ಗ ನೋಡಿಕಿಲ್ಲೇಂತ ತಿಳ್ದ್‌ಕಂಡಿತ್ತೋ ಅದೇ ಅಂಬೆ ಈಗ ಅಂವನ ಎದ್ರ್ ನಿತ್ತುಟು. ಮೋರೆಲಿ ಆಯಾಸ ಎದ್ದ್ ಕಂಡರ್‌ನೂ ಅದರ ಕಣ್ಣ್‌ಲಿ ಅದೇ ಹೊಳ್ಪು ಎದ್ದ್‌ಕಂಡದೆ.

ಬಂದೋವು ಅಂವನ ಅಪ್ಪಣೆನ ಹಾಂಗೆ ಎದ್ರ್ ಇದ್ದ ಆಸನಲಿ ಕುದ್ದ್‌ಕಂಡೊ. ತಣ್ಣಂಗೆನ ಪಾನಕ ಕುಡ್ದ್ ದಣ್ಕೆನ ತೀರ್ಸಿಕಂಡೊ. ಸಾಲ್ವ ಭೂಪತಿ ಮುದಿ ಹಾರಂವನ

ಕಡೆಗೆ ನೋಡ್ದೊ. ಪುರೋಹಿತ ದೇವಿಚರಣದಾಸ ತನ್ನ ಪರ್ಚಯನ ಹೇಳ್ತ್. "ನಾಬ್ರಹ್ಮಶ್ರೀಪುರೋಹಿತ ದೇವಿ ಚರಣದಾಸ ಚತುರ್ವೇದಿ. ಹಸ್ತಿನಾವತಿನ ಆಸ್ಥಾನ ವಿದ್ವಾಂಸ. ಆಚಾರ್ಯಭೀಷ್ಮರ ಅಪ್ಪಣೆಪ್ರಕಾರಸೌಭಕ್ಕೆಬಂದಳೆ. ಕಾಶೀರಾಜ ಪ್ರತಾಪಸೇನನ ದೊಡ್ಡಮಗಳ್ ಈ ಅಂಬೆನನಿನ್ನಹಕ್ಕಲೆಬುಡಿಕೆ ನಂಗೆ ಅಪ್ಪಣೆ ಆಗುಟ್ಟು. ಇದರ ನಿನ್ನ ಪಟ್ಟದ ರಾಣಿಯಾಗಿ ಮಾಡಿಕಂಡ್ ಕೀರ್ತಿವಂತ ಆಗ್. ಹಿರಿಯಂವ ಆಗಿ ನಾ ಆಶೀರ್ವಾದ ರೂಪಲಿ ಈ ಮಾತ್ನ ಹೇಳ್ನೆ. ಇನ್ನ್ ನಾ ತಿರ್ಗ ಹೋಕೆ ನಂಗೆ ನೀ ಅಪ್ಪಣೆ ಕೊಡೊಕು."

ಪುರೋಹಿತ ದೇವಿಚರಣದಾಸರ ಅಮ್ಸರನ ನೋಡಿದ್ ಸಾಲ್ವ ಭೂಪತಿಗೆ ನಗೆ ಬಾತ್. "ಪುರೋಯ್ತರೇ, ಸೌಭಂದಹಸ್ತಿನಾವತಿಗೆ ಹೋದೂಂತೇಳ್ರೆ ಅದೇನ್ ಮಕ್ಕಳಾಟಿಕೆನೋ? ನೀವು ಹಸ್ತಿನಾವತಿನ ರಥನ ಗಡಿಲಿ ನಿಲ್ಸಿರೋಕೂಂತ ಕಂಡದೆ. ಅಲ್ಲಿಂದ ಇಲ್ಲಿಗೆ ಮುಟ್ಟ ನಡ್ದ್‌ದ್ ನೀವ್ಗೆ ಬೊಚ್ಚಿಟ್ಟೂಂತ ಕಂಡದೆ. ನೀವು ಪ್ರಾಯಸ್ತರ್, ಜ್ಞಾನಿಗ, ಮತ್ತೆ ಬಂದ ದಾರಿಲಿನೇ ನೀವು ತಿರ್ಗ ಹೋದರೆ ನಿಮ್ಮ ಸರೀರಕ್ಕೆ ಎಸ್ಟ್ ದಣ್ಕೆ ಆದು? ಸಾಲ್ವ ಭೂಪತಿನ ಬುದ್ಧಿ ಇಲ್ಲದಂವಾಂತ ಗ್ರೇಸ್‌ಬೊಡಿ. ಇಸ್ಟರ ಮುಟ್ಟ ನಾ ಹಸ್ತಿನಾವತಿನ ಎದ್ರ್ ಹಾಕಂಡಂವ ಅಲ್ಲ. ಮೊನ್ನೆ ಸೊಂಯಂವರ ಮಂಟಮೆಲಿ ಭೀಷ್ಮರೊಟ್ಟಿಗೆ ಕಾಳಗ ಕೊಟ್ಟಳೆ. ಅದ್ ಪಂತ. ಅದರ್ಲಿ ಸೋಲಟ, ಗೆಲ್ಲಟ ಇದ್ದದೆ. ಸೋಲ್‌ನ ಇರೋದಾಂತ ಹೇಳ್ದು ಸರಿ ಅಲ್ಲ. ನೀವು ಈಗ ಸೌಭದೇಸದ ನೆಂಟ್ರ್‌ಗ. ಇಂದ್ ನಮ್ಮ ಅತಿಥಿಗೃಹಲಿ ಒಳ್ದ್‌ಕಂಡ್, ನಮ್ಮ ಸಮ್ಮಾನಗಳ ಉಂಡ್‌ದ್ ದಣ್ಕೆ ತೀರ್ಸಿಕಣಿ. ನಾಳೆ ತಿರ್ಗ ಹೋಕ್ ಬಲರಿಯೋ. ಹಸ್ತಿನಾವತಿನ ದೊಡ್ಡ ವಿದ್ವಾಂಸರ್ ಒಬ್ಬರ್ ಈ ಕಾಡ್ ಮೊಯಿಂಸನ ಆಸ್ಥಾನಕ್ಕೆ ಬಾದೂಂತೇಳ್ರೆ ಅದ್ ನಮ್ಮ ದೊಡ್ಡ ಭಾಗ್ಯ." ಸಾಲ್ವ ಭೂಪತಿ ಹೇಳ್ದರ ಕೇಳಿ ಪುರೋಯ್ತ ದೇವಿಚರಣದಾಸ ಉಬ್ಬಿ ಹೋತ್. ಕುಸಿಂದ ಮೋರೆ ಅರ್ಳಿಸಿಕಂಡ್ ಅಂವ ಹೇಳ್ತ್.

"ಮಾರಾಜಾ, ನಿನ್ನಮೊನ್ಸ್ ಒಳ್ಳೆದ್. ಬಂದ ನೆಂಟ್ರ ಆದರ್ಸಿ ಗೌರವ ಕೊಡ್ದು ಒಳ್ಳೆ ಗುಣ. ನಿಂಗೆ ಒಳ್ಳದಾಗಲಿ. ತುಂಬಾ ಕಾಲ ಬಾಳಿ ಬೊದ್ಕ್."

ಸಾಲ್ವ ಭೂಪತಿ ಮಾತ್‌ನ ಮುಂದರ್ಸಿತ್ "ಆದರೆ ಚತುರ್ವೇದಿಗಳೇ, ನಿಮ್ಮ ಒಟ್ಟಿಗೆ ಒಂದು ಹೊಂತಗಾರ್ತಿ ಗೂಡೆ ಉಟ್ಟು. ಇದ್ ಸೊಂಯಂವರದ ಪಂತದ ಪ್ರಕಾರ ಹಸ್ತಿನಾವತಿನ ಅಂತಃಪುರಲಿ ಇರಕಾಗಿತ್ತ್. ಕುರು ಸಾಮ್ರಾಟನ ಪಟ್ಟದ ರಾಣಿ ಆಕಾಗಿದ್ದ ಹೆಣ್ಣ್‌ನ ಈ ಕಾಡ್ ಮೊಂಯಿಂಸ ಸಾಲ್ವ ಭೂಪತಿಗೆ ನೀಡುವ ದುರವಸ್ತೆ ಹಸ್ತಿನಾವತಿಗೆ ಏಕೆ ಬಾತ್? ಇದರ ಹಿಂದೆನ ಮರ್ಮ ಏನ್?"

ಪುರೋಹಿತ ದೇವಿಚರಣದಾಸನ ಮೋರೆ ಕಪ್ಪಾತ್. "ಸಾಲ್ವಭೂಪತಿ ಎಂತಾ ಮಾತಾಡ್ದ? ನಾ ಆಚಾರ್ಯಭೀಷ್ಮರ ಅಪ್ಪಣೆನಹಾಂಗೆ ಇದರನಿನ್ನಲ್ಲಿಗೆ ಕರ್ಕಂಡ್‌ಬಂದಂವ. ಇದರಹಿಂದೆ ಇಲ್ಲದ ರಾಜಕಾರಣನಹುಡ್ಕ್‌ಬಡ. ಭೀಷ್ಮಾಚಾರ್ಯರ್ ಕಾಶಿಂದಮೂರ್ಜನ ರಾಜಕುಮಾರಿಗಳ ಗೆದ್ದ್ ತಂದದ್ ಅವ್ಕಾಗಿ ಅಲ್ಲ. ಅವರ ತಮ್ಮವಿಚಿತ್ರವೀರ್ಯಂಗಾಗಿ.

ಅಂಬಿಕೆ ಮತ್ತೆ ಅಂಬಾಲಿಕೆಗ ವಿಚಿತ್ರವೀರ್ಯನ ಮೊದ್ವೆ ಆದೊ. ಈ ಅಂಬೆನ ಮೊನ್ಸ್‌ಲಿ ನೀನೇ ತುಂಬಿಕಂಡಳಗಡ. ಸರೀರನ ಒಬ್ಬಂಗೆ, ಮೊನ್ಸ್‌ನ ಇನ್ನೊಬ್ಬಂಗೆ ಕೊಡ್ದು ಪಾಪಾಂತ ಅದ್ ತಿಳ್ದುಟು. ನಿನ್ನ ಮೇಲೆ ಇದಕ್ಕೆ ಇರ್ವ ಬಾಳ ಪ್ರೀತಿನ ನೀ ಅರ್ತ ಮಾಡಿಕಂಡ್, ಭೀಷ್ಮಾಚಾರ್‍ಯರ್ ಇದರ ಅತ್ಯಂತ ಗೌರವಂದ ಇಲ್ಲಿಗೆ ಕಳ್ಸಿ ಕೊಟ್ಟೊಳೊ. ಸಾಲ್ವ ಭೂಪತಿ ಆರ್ಯಾವರ್ತದ ಬಾಳ ದೊಡ್ಡ ವಿದ್ವಾಂಸನಾ. ಈ ಪ್ರಾಯಲಿ ನನ್ನೊಟ್ಟಿಗೆ ಅಂಬೆನ ಸೌಭದೇಸಕ್ಕೆ ಭೀಷ್ಮರ್ ಕಳ್ಸಿ ಕೊಟ್ಟೊಳೋಂತೇಳ್ರೆ ಅದ್ ಅವರ ದೊಡ್ಡಸ್ತನ. ಮತ್ತೆ ಅವರ ಒಳ್ಳೆತನಕ್ಕೆ ಉದಾರ್ಣೆ. ಹಸ್ತಿನಾವತಿಗೆ ಯಾವ ದುರವಸ್ತೆನೂ ಬಾತ್ಲೆ. ಅದ್ ಹೆಣ್ಮಕ್ಕಳ ಗೌರವಿಸಿದೆ. ಮತ್ತೆ ಅವರ ಮೊನ್ಸ್‌ನ ಅರ್ತ ಮಾಡಿಕಂಡದೆ. ಇದರ ನೀ ತಿಳ್ಕ ಇಲ್ಲದರ ಎಲ್ಲಾ ಏಚನೆ ಮಾಡಿ ಮೊನ್ಸ್‌ನ ಮುರ್‍ಯಬಡ."

ಸಾಲ್ವ ಭೂಪತಿ ತಲೆದೂಂಗಿತ್. "ಚತುರ್ವೇದಿಗಳೇ, ಹಸ್ತಿನಾವತಿನ ರೀತಿ, ನೀತಿನ ಮತ್ತೆ ನಿಮ್ಮ ರಾಜನಿಸ್ಟೆನ ನಾಮೆಚ್ಚ್‌ನೆ. ಆದರೆನೀವು ಕರ್ದ್ಂ ತಂದೊಳೊರಿಲೆ ಈ ಅಂಬೆನ. ಇದ್ಕೆ ಪ್ರೀತಿನ ಬೆಲೆ ಗೊತ್ತಿರ್‍ತಿದ್ದರೆ ಅಸ್ಟ್ ದೂರದ ಹಸ್ತಿನಾವತಿಂದ ಈ ಮುದಿ ಪ್ರಾಯಲಿ ಇಸ್ಟ್ ಕಸ್ಟ ಪಟ್ಟ್ ನೀವು ಸೌಬದೇಸಕ್ಕೆ ಬರಕಾದ ಅಗತ್ಯ ಇರ್‍ತ್ಲೆ."

ಪುರೋಯ್ತು ದೇವೀಚರಣದಾಸ ಮತ್ತೆ ಸಾಲ್ವ ಭೂಪತಿನ ನೊಡುನ ಮಾತುಕತೆ ಯಾವ ಮಟ್ಟಿಗೆ ಮುಟ್ಟಿದೆ ಮತ್ತೆ ಯಾಗ ತನಿಗೆ ಮಾತಾಡಿಕೆ ಎಡೆ ಸಿಕ್ಕಿದೇಂತ ಕಾದ್ ಕಂಡಿದ್ದ ಅಂಬೆ ಈಗ ಮಾತಾಡ್ತ್. "ಸಾಲ್ವ ಭೂಪತಿ, ನಿನ್ನ ಮಾತ್‌ಗೆ ಉತ್ತರ ಕೊಡಕಾದವ್ಳು ನಾ. ಆದರೆ ಇದ್ ತುಂಬಿದ ಸಭೆ ಆದರ್‌ಂದ ಚರ್ಚೆ ಮಾಡುವ ಇಸಯ ಅಲ್ಲ. ಈ ಪುರೋಯ್ತರ ಎದ್ರ್‌ಗಡೆ ನಮ್ಮ ಮಾತ್‌ಕತೆ ನಡ್ಯಲಿ. ದಯಮಾಡಿ, ನಿನ್ನ ರಾಜ ಸಭೆನ ಮುಂದರ್ಸ್."

ಕೂಡ್ಲೇ ಸಾಲ್ವ ಹೇಳ್ತ್. "ರಾಜಕುಮಾರಿ ಈ ಸಾಲ್ವಭೂಪತಿನ ಜೂವನ ಒಂದು ಬುಡ್ಸಿ ಇಸಿದ ಪುಸ್ತಕದ ಹಾಂಗೆ. ಅಲ್ಲರೆ ಈ ಆರ್ಯಾವರ್ತಲಿ ಒಬ್ಬ ಕಾಡ್ ಮೊಂಯಿಂಸಂಗೆ ಇಂತಾ ಒಂದು ರಾಜ್ಯನ ಕಟ್ಟಿಕಾಗ್ತ್ಲೆ. ಸೊಂಯಂವರ ಮಂಟಮೆಲಿ ನಡ್ದ ವಿಸಯ ಎಲ್ಲಾ ಈಗ ಗುಟ್ಟಾಗಿ ಇಲ್ಲೆ. ನಾವು ಮೂರ್ಜನನೇ ಮಾತಾಡಿಕಂಡ್ರೆ ನಮ್ಮ ರಾಜ್ಯಕ್ಕೆ ಸತ್ಯ ಸಂಗತಿ ತಿಳ್ಯೋದಿಲ್ಲೆ. ಈಗ ನಡ್ದ ಇಸಯಕ್ಕೆ ಕೈಕಾಲ್ ಹುಟ್ಟಿಕಂಬೊದು ಬೇಡ. ನಿಂಗೆ ಎಂತದ್ ಹೇಳಿಕೆ ಉಟ್ಟೊ ಅದರ ಬೇಗ ಹೇಳಿ ಇಲ್ಲಿಂದ ಹೊರ್‌ಡ್."

ಅಂಬೆ ಅಂಜಿತ್. ಇಂವ ಎಂತದ್ ಹೇಳ್ದ್? ಇಂವನ ಆಸ್ತಾನಕ್ಕೆ ಕುಂದು ಕೊರ್ತೆನ ಹೇಳಿ ಪರ್‍ಯಾರ ಕೇಳಿಕೆ ನಾ ಬಂದಂವಾಂತ ಇಂವ ತಿಳ್ದುಟೋ ಹೇಂಗೆ? ಉಪವನದ ಸರೋವರಲಿ ಎದೆಲಿ ಪ್ರೇಮದ ಅಲೆನ ಎದ್ರಿಸಿದಂವ, ಈಗ ಸುಂಟರಗಾಳಿ ಆದೆ. ಸೊಂಯಂವರ ಮಂಟಮೆಲಿ ಆಚಾರ್ಯ ಭೀಷ್ಮರ್‌ಂದಾದ ಸೋಲ್‌ಗೆ ಇಂವ ಯಾರ ಬಲಿತಕಂಡದೆ?

ಅಂಬೆ ಮೊರ್ದುವ ದನಿಲಿ ಹೇಳ್ತ್. "ಸಾಲ್ವಭೂಪತಿ, ನಿನ್ನಬೇನೆನಂಗೆ ಅರ್ತ ಆದೆ. ಆದರೆ ನನ್ನ ಬೇನೆನ ನಿಂಗೆ ಅರ್ತ ಮಾಡಿಕಂಬಕೆ ಸಾದ್ಯ ಆದ್ಲೆ. ಈಗನ ರೀತಿ ರಿವಾಜ್‌ಲಿ

ಹೆಣ್ಣ್‌ನ ಇತಿಮಿತಿನ ಬಗ್ಗೆ ಹಂಇನಾದರ್ ಏಚನೆ ಮಾಡ್ಯೆಳನಾ? ಸರೋವರಲಿ ನಿನ್ನ ನೋಡಿಕಾಕನ, ನಿನ್ನ ವೀರತನದ ಮಾತ್‌ಗಳ ಕೇಳಿಕಾಕನ, ಸೊಂಯಂವರಲಿ ನೀ ಎಲ್ಲರನೂ ಗೆಲ್ಲುವಾಂತ ನಾ ನೆನ್ಸಿಕಂಡಿದ್ದೆ. ನೀನೇ ಗೆಲ್ಲಿಕಾಕನ ಹೆಮ್ಮೆಂದ ನಿನ್ನ ರಥನ ಹತ್ತಿಕೆ ಹೊರ್ಟವಳ್ ನಾ. ಆಗ ಭೀಷ್ಮಾಚಾರ್ಯರ್ ಬಾರದಿರ್ತಿದ್ದರೆ, ನಿನ್ನ ಪಟ್ಟದ ರಾಣಿಯಾಗಿ, ಈ ಸಿಂಹಾಸನದ ಎಡ್ದಪುಡೆಲಿ ಕುದ್ರ್‌ತಿದ್ದೆ. ಈಗ ನಿನ್ನ ಎದ್ರ್ ನಿತ್ತದ್ ಕಳ್ದದರ ಹೇಳಿಕಂಬ ಹೀನ ಸ್ತಿತಿ ನನ್ನದಾಗುಟು. ಅಂದ್ ಸೊಂಯಂವರ ಮಂಟಮೆಲಿ ಎಲ್ಲೋವೂ ಸುಮ್ಮಂಗಿರಿಕಾಕನ ಒಬ್ಬ ಹೆಣ್ಣ್ ಗೂಡೆ ಏನ್ ಮಾಡಿಕೆ ಆಗ್ತಿತ್ತ್ ಹೇಳ್? ಕಾಶಿಂದ ಹಸ್ತಿನಾವತಿಗೆ ಹೋದ ಮೇಲೆ ನಾವಿಬ್ಬೊರು ಪ್ರೀತಿಸಿದರ ಹೇಳುವ ಅವಕಾಸ ನಂಗೆ ಸಿಕ್ತ್. ನಿನ್ನ ಮೇಲ್‌ನ ಗೌರವಂದ, ನನ್ನ ಮಾತ್‌ಗೆ ಬೆಲೆಕೊಟ್ಟ್ ಭೀಷ್ಮಾಚಾರ್ಯರ್ ನನ್ನ ಇಲ್ಲಿಗೆ ಕಳ್ಸಿಕೊಟ್ಟೊಳೊ. ಪ್ರೀತಿನ ನೊಂಬಿದ್ ಬಂದವಳ್‌ನ ಹೀಂಗೆ ನೊಡು ನೀರ್‌ಲಿ ಕೈ ಬುಡ್ದು ಧರ್ಮ ಆದ್ಲೆ."

ಕಾಶೀ ರಾಜ್ಯದ ಸರೋವರ ಅಂವಂಗೆ ನೆಂಪಾತ್. ಸರೋವರಲಿ ಸುರುನ ಸಲನೆ ಇದರ ನೋಡಿಕಾಕನ ಇದರ ರೂಪಕ್ಕೆ ಮರ್ಳಾತ್. ಚಿನ್ನದ ಪುತ್ತೋಳಿ ಗೊಂಬೆಗೆ ಜೂವ ಬಂದ ಹಾಂಗೆ ಇದ್ದ ಇದರ ನಡೆ ನುಡಿ, ಧೈರ್ಯಕ್ಕೆ ಮೆಚ್ಚಿತ್. ಇಂತಾ ಹೆಣ್ಣ್‌ಗ ಇರ್‍ದು ಬಾಳ ಅಪ್ರೂಪ. ಯಾರೋ ಒಬ್ಬ ರಾಜಂಗೆ ಸಂಗಾತಿ ಆಗಿ ಅವನಿಸ್ಟದ ಹಾಂಗೆ ನಡ್ಕಂಡ್, ಅಂವನ ಮಕ್ಕಳಿಗೆ ಅಯ್ಯೆ ಆಗಿರ್‍ದು ದೊಡ್ಡ ಸಾಧನೇಂತ ತಿಳ್ಕಂಡ ಹೆಣ್ಣ್ ಇದಲ್ಲ. ತನ್ನ ಗಂಡನ ಪ್ರೀತಿ ತನಿಗೆ ಮಾತ್ರ ಸಿಕ್ಕೊಕೂಂತ ಬಯಸುವ ಹೆಣ್ಣ್ ಇದ್. ನಾ ಕೂಡಾ ಒಬ್ಬ ಹೆಣ್ಣ್‌ನನೇ ಕಟ್ಟಿಕಣೊಕೂಂತ ಕನ್ಸ್ ಕಂಡಂವ. ಇದ್ ನನ್ನ ರಾಣಿ ಆದ್ರೆ ಸೌಬದೇಸದ ಇಡೀ ಹೆಣ್ಮಕ್ಕಳ ಹಣೆ ಬರ ಬದ್ಲಾಗ್ತಿತ್ತ್. ಇಲ್ಲಿನ ಎಲ್ಲಾ ಹೆಣ್ಮಕ್ಕಳ ಶಸ್ತ್ರ ವಿದ್ಯೆ ಕಲಿವ ಹಾಂಗೆ ಮಾಡ್ತಿತ್ತ್. ಇದರ್‌ಂದಾಗಿ ಬಲಿಷ್ಟ ಪಡೆನ ಮಾಡಿಕೆ ಆಗ್ತಿತ್ತ್. ನನ್ನ ರಾಜ್ಯನ ಇನ್ನೂ ದೊಡ್ಡದ್ ಮಾಡಕಾಗಿತ್ತ್. ತಾವು ಮೇಲ್ಜಾತಿಯೊವುಂತ ಹೇಳಿಕಂಡ್ ಕಾಡ್ ಮೊಂಯಿಂಸರ, ಸೂದ್ರರ ಹೆಣ್ಮಕ್ಕಳ ಮೇಲೆ ದಬ್ಬಾಳಿಕೆ ನಡ್ಸುವ ಕ್ಷತ್ರಿಯರಿಗೆ ಒಂದು ಪಾಟನ ಕಲ್ಸಕಾಗಿತ್ತ್. ನನ್ನ ಎಲ್ಲಾ ಆಸೆಗಳಿಗೆ ಇದ್ ಬೆನ್ನೆಲ್ಬಾಗಿ ನಿಲ್ತಿತ್ತ್. ಹುಟ್ಟುನ ಕಾರಣಕ್ಕಾಗಿ ತಾವು ದೊಡ್ಡೊವೂಂತ ಹಂಕಾರ ಬೆಳ್ಸಿಕಂಡ್ ಕ್ಷತ್ರಿಯರಿಗೆ ಒಂದು ಪಾಟನ ಕಲ್ಸುವ ಅವಕಾಸ ಆ ಭೀಷ್ಮಂದ ಹಾಳಾತ್. ಇದರೆಲ್ಲಾ ನೆನ್ಸಿಕಂಡ್ ಸಾಲ್ವ ಭೂಪತಿ ಒಂದು ಉದ್ದದ ಉಸ್ರುನ ಬುಟ್ಟುದ್ ಹೇಳ್ತ್.

"ರಾಜಕುಮಾರಿ, ಸೊಂಯಂವರ ಮಂಟಮೆಲಿ ನೀವ್ಗೆ ಮೂರ್ಚನಕ್ಕೆ ರಥನ ಹತ್ತಿಕೆ ಭೀಷ್ಮಾಚಾರ್ಯರ್ ಹೇಳಿಕಾಕನ ಅಂವನೊಟ್ಟಿಗೆ ಕಾಳಗ ಕೊಟ್ಟ್ ನಾ ಸೋತ್‌ಹೋದೆ. ಆಗ ನಾ ನಿನ್ನ ಕಡೆಗೆ ಸೋತದಿಟ್ಟಿಂದ ನೋಡಿದರ ನೀ ಮರ್ತಿರಿಕಿಲ್ಲೇಂತ ತಿಳ್ದನೆ. ನೀ ಅಂವನ ರಥ ಹತ್ತಿಕಿಲ್ಲೇಂತ ನಾ ಆಗ ತಿಳ್ದಿದ್ದೆ. ಅದರ ನೀ ಸುಳ್ಳು ಮಾಡ್ದೆ. ನಿಜ ಹೇಳುಕೂಂತೇಳ್ರೆ ಭೀಷ್ಮನಲ್ಲಿ ನಾ ಸೋತದ್ಕ್ಕೆ ನಂಗೆ ಏನೂ ಬೇಜಾರಿಲ್ಲೆ. ಅಂವಂಗೆ ಪರಶುರಾಮರ್ ಬಿಲ್ವಿದ್ಯೆ ಕಲ್ಸಿದೊ. ಅಂತಾ ಗುರುಗಳ್‌ಂದ ಬಿಲ್ವಿದ್ಯೆ ಕಲ್ತವ ಯೋಗ

ನಂಗೆ ಇತ್ಲೆ. ಮುಂದೊಂದು ದಿನ ನಂಗೆ ಗೊತ್ತಿಲ್ಲದ ಬಿಲ್ಲ್ ವಿದ್ಯೆನ ರೀತಿನ ಎಲ್ಲಾ ಕಲ್ತ್‌ದ್ ಭೀಷ್ಮನ ಹಂಕಾರನ ಮುರ್ದನೆ. ಹಿಂದೆನ ದಿನ ಸರೋವರಲಿ ನಿನ್ನ ನೋಡಿಕನ ನಡ್ದ ಮಾತ್‌ಕತೆಗ ನೆಂಪಾಗಿ ನಿನ್ನ ಕಡೆಗೆ ನೋಡ್ದಂವ ನಾ. ನನ್ನ ಕಣ್ಣೆದ್ರ್‌ಲೇ ನೀ ಅಂವನ ರಥ ಹತ್ತಿದ. ಆಗ ನಾ ಬೊದ್ಕಿದ್ದ್‌ದ್‌ನೂ ಸತ್ತಾಂಗಾದೆ. ಅಂಥಾ ಒಂದು ಅಪಮಾನ ನನ್ನ ಜೂವನಲಿ ಅಸ್ಟರಮುಟ್ಟ ನಂಗಾತ್ಲೆ. ಯಾವ್ದರ ಬೇಕರೂ ತಡ್ಕಣಕ್. ನಾವು ತುಂಬಾ ಪ್ರೀತಿ ಮಾಡ್ದೋವು ಮಾಡ್ವ ಅಪಮಾನನ ಮಾತ್ರಾ ನಾವ್ಗೆ ತಡ್ಕಂಬಕೆ ಆದುಲ್ಲೆ. ಅದ್ ನಮ್ಮ ಜೂವನ ಹಿಂಡಿ ಬುಟ್ಟದೆ. ಬೊದ್ಕಿರುನೂ ಸತ್ತಾಂಗಾದೆ."

ಅಂಬೆನ ಕಣ್ಣ್‌ನ ಮುಂದೆ ಸರೋವರಲಿ ನಡ್ದ ಸಂಗತಿ ಎಲ್ಲಾ ಬಾತ್. ಅಲ್ಲಿ ಅವಿಬ್ರೊರೇ ಇರಿಕಾಕನ ಅದ್ ಅರೆಬರೆ ಬಟ್ಟೆ ಉಟ್ಟ್‌ಕಂಡಿದ್ದರುನೂ ಅಂವ ಅಂವನ ಮೊನ್ಸ್‌ನ ಹಾಳು ಮಾಡಿಕಂಡತ್ಲೆ. ಅಲ್ಲಿಂದಲೇ ಅದರ ಸೌಭದೇಸಕ್ಕೆ ಕರ್ಕಂಡೋಕೆ ಅಂವ ತಯಾರಿತ್ತ್. ಯಾರ ಮೊನ್ಸ್‌ಗೂ ಬೇನೆ ಆಗದಾಂಗೆ ಮಾಡಿ, ಯಾರಿಗೂ ತೊಂದರೆ ಆಗದಾಂಗೆ ಅಂವನ ಕೈ ಹಿಡ್ಯಕೆ ಅದ್ ಮಾಡ್ದ ಪ್ರಯತ್ನನ ಅಂವ ಅರ್ತ ಮಾಡಿಕಂಡತ್ಲೆ. ಅಂವ ಅಂವನ ನೇರಲೇ ಏಚನೆ ಮಾಡ್ದರ ನೋಡಿ ಅಂಬೆಗೆ ಬೇಜಾರಾತ್. ಅದ್ ಹೇಳ್ತ್,

"ಸಾಲ್ವಭೂಪತೀ, ನಾ ಈಗಳೂ ಸಾ ನಿನ್ನ ತುಂಬಾ ಪ್ರೀತಿ ಮಾಡ್ನೆ. ನಾನಿನ್ನ ಅಪಮಾನ ಮಾಡ್ದೆನೋ? ನಾ ಭೀಷ್ಮರ ರಥನ ಹತ್ತಿದರ ನೀ ಅರ್ತಮಾಡಿಕಂಡಳಾಂತ ನಾ ತಿಳ್ದಿದ್ದೆ. ಭೀಷ್ಮಾಚಾರ್ಯರ ಬ್ರಹ್ಮಚಾರಿ ದೀಕ್ಷೆ ಎಲ್ಲೋವ್ಕನೂ ಗೊತ್ತಿದ್ದ ಇಚಾರ. ಅವು ನಮ್ಮ ಅಪ್ಪಂದಳೂ ಪ್ರಾಯಲಿ ದೊಡ್ಡೋವು. ಅವರ ರೂಪಕ್ಕೆ, ಶೌರ್ಯಕ್ಕೆ ನಾ ಮೊನ್ಸ್ ಕೊಟ್ಟತ್ಲೆ. ನನ್ನ ಮೊನ್ಸ್‌ನ ಮೇಲೆ ಆಣೆ ಇಸಿ ಹೇಳ್ನೆ ನಾ. ಮುಂದೆ ಮತ್ತೆ ಅಕೆರಿನ ಪ್ರೇಮಿ ನೀನೆ. ನಿನ್ನ ಗೆದ್ದ ಭೀಷ್ಮರ್ ನಮ್ಮ ರಥ ಹತ್ತಿಕೆ ಹೇಳಿಕನ ನಾ ನಿನ್ನೊಟ್ಟಿಗೆ ಹೊರ್ಟ್ ಬಾಕೆ ಹೇಂಗೆ ಆದೆ? ಹಾಂಗೇನಾದರೂ ನಾ ಹೊರ್ಟ್ ಬಾತಿದ್ದರೆ ಅವು ಅದರ ಅಪಮಾನಾಂತ ತಿಳ್ಕಂಬತಿದ್ದೊ. ಸೊಂಯಂವರದ ಕಾಗ್ದ ಸಿಕ್ಕದಕ್ಕೆ ಅವು ಸಿಟ್ಟಾದೋವು. ಅಪ್ಪ ಹಾಂಗೆ ಅಪಮಾನ ಮಾಡ್ರೆ ಮಗಳ್ ಹೀಂಗೆ ಅಪಮಾನ ಮಾಡ್ತ್‌ಂತ ಅವರ ಕೋಪ ನೆತ್ತಿಗೇರಿ ನೆತ್ತರ್‌ನ ಕೋಡಿನನೇ ಹರ್ಸ್‌ತಿದ್ದೊ. ಆಗ ನಿಂಗೇ ಏನಾದರ್ ಆಗಿ, ನಾ ನಿನ್ನ ಕಳ್ಕಂಡನೇಂತ ತಿಳ್ದ್ ನಾ ನಿನ್ನೊಟ್ಟಿಗೆ ಬಾತ್ಲೆ."

ಬಾಯಿ ಒಣ್‌ಂಗಿಕಂಡ್ ಬಾಕಾಕನ ಅಂಬೆ ಮಾತ್‌ನ ನಿಲ್ಲಿಸಿ, ಹಂಞ ನೀರ್ನ ಕುಡ್ದ್‌ದ್ ಮಾತ್‌ನ ಮುಂದರ್ಸಿತ್. "ಸಕ್ತಿನೇ ಪಂತ ಆಗಿದ್ದ ಸೊಂಯಂವರ ಮಂಟಮೆಲಿ ಯಾವ ಕ್ಷತ್ರಿಯ ಪ್ರೇಮಕ್ಕೆ ಬೆಲೆ ಕೊಟ್ಟದೆ? ಇದರೆಲ್ಲಾ ಏಚನೆ ಮಾಡಿನೇ ನಾ ಭೀಷ್ಮನ ರಥನ ಹತ್ತಿದ್. ಭೀಷ್ಮರ್ ಬ್ರಹ್ಮಚರ್ಯನ ಬುಡೋವು ಅಲ್ಲಾಂತ ಗೊತ್ತಿದ್ದರುನೂ ಪಂತಲಿ ಗೆದ್ದಂವನೇ ನನ್ನ ಗಂಡ ಆಕೂಂತ ಹಟ ಹಿಡ್ದೆ. ವಿಚಿತ್ರವೀರ್ಯಂಗಾಗಿ ಅವು ಸೊಂಯಂವರ ಮಂಟಮೆಗೆ ಬಂದದ್ ಧರ್ಮ ಅಲ್ಲಾಂತ ಅವ್ಕೆ ತೋರ್ಸಿ ಕೊಟ್ಟೆ. ಮೊದ್ವೆ ಆಗುವ ಮೊನ್ಸ್ ಇದ್ದ ಸಾಲ್ವ ಭೂಪತಿ ಧರ್ಮ ಪ್ರಕಾರಲಿ ನನ್ನ ಮೊದ್ವೆ ಆದೂಂತ ವಾದ

ಮಾಡ್ದೆ. ನನ್ನ ನಿನ್ನ ಪ್ರೀತಿನ ಅವ್ವೆ ಅರ್ತ ಮಾಡ್ಸಿ, ಅವಾಗಿಯೇ ನನ್ನ ನಿನ್ನಲ್ಲಿಗೆ ಕಳ್ಸಿ ಕೊಡುವಾಂಗೆ ಮಾಡ್ದೆ. ನಿನ್ನ ಮೇಲೆ ನಂಗೆ ಇರ್ವ ಕಲ್ಮಸ ಇಲ್ಲದ ಪ್ರೀತಿಂದಾಗಿ ಉಟ್ಟ ಸೀರೆಲೇ ಹಸ್ತಿನಾವತಿಂದ ಬಾಳ ದೂರಲಿರುವ ಈ ಸೌಭದೇಸಕ್ಕೆ ಬಂದ್ ಬುಟ್ಟೆ. ಶೌರ್ಯಂದ ನೀ ಮಾಡದರ, ನಿಂಗೆ ನಮ್ಮ ಅಪ್ಪ ಕಾಶೀ ರಾಜಂಗೆ ಯಾವ ರೀತಿಲಿನೂ ತೊಂದರೆ ಆಗದಾಂಗೆ ನಿನ್ನ ಅಂಬೆ ಮಾಡಿ ತೋರ್ಸಿಟ್ಟು. ಸಾಲ್ವ ಭೂಪತೀ, ಅಂಬೆ ತೊಪ್ಪು ಮಾಡ್‌ತ್ಲೆ. ನನ್ನ ನೀ ಬುಟ್ಟ್ ಹಾಕ್ಬಡ."

ಸಾಲ್ವ ಭೂಪತಿನ ಮೊನ್ಸ್‌ಗೆ ಅಂಬೆನ ಮಾತ್‌ಗ ನಾಟಿದೊ. ಅದ್ಕೆ ಬಿರ್ಸ್‌ನ ಮಾತ್‌ಗಳ ಹೇಳ್ದಕ್ಕೆ ಅಂವಂಗೆ ನಾಚಿಕೆ ಆತ್. ನನ್ನ ರಥನ ಏರಿನೀಂತ ಭೀಷ್ಮ ಹೇಳಿಕಾಕನ ಅಲ್ಲಿದ್ದ ಯಾರ್‌ಂದಲೂ ಅದರ ತಡ್ಯಕಾತ್ಲೆ. ತಡ್ಯಕೆ ಹೋದ ಅಂವನೂ ಗೆಲ್ಲಿಕಾಕನ ಭೀಷ್ಮಂಗೆ ಆ ಮೂರ್ಜನ ಗೂಡೆಗಳ ಮೇಲೆ ಹಕ್ಕ್ ಬಾತ್. ಆ ಕ್ಷಣಕ್ಕೆ ಆ ಮೂರು ಗೂಡೆಗಳ ಮೇಲೆ ಭೀಷ್ಮಂಗೆ ಗೆದ್ದ ಹಕ್ಕ್ ಇತ್ತ್. ಆಗ ಎಲ್ಯಾದರ್ ಅಂಬೆ ಅಂವನ ಹಕ್ಕಲೆ ಬಾತಿದ್ದರೆ ಭೀಷ್ಮ ಸುಮ್ಮಂಗಿರಿಕಿತ್ಲೆ. ಅಂವನ ಕೊಂದದ್ ಅಂಬೆನ ಬಲಾತ್ಕಾರಂದ ಅಂವನ ರಥ ಹತ್ತಿಸಿಕಂಡ್ ಹೋಗ್ತಿತ್ತ್. ಪಂತದ ಪ್ರಕಾರ ಅದ್ ಅಧರ್ಮ ಆದ್ಲೆ. ಬಯಸಿ ಬಂದ ಹೆಣ್ಣ್‌ನ ಅಂವನ ಕಣ್ಣ್‌ದ್‌ರ್‌ಗೆನೇ ಅಂವಂದ ಬಲಶಾಲಿ ಆದಂವ ಒಬ್ಬ ಬಲತ್ಕಾರಂದ ರಥ ಹತ್ತಿಸುದರ ನೋಡಿಕಂಡ್ ನಿಲ್ಲುದರ್‌ಂದ ಗಂಡ್‌ಗೆ ಸಾಯುದೇ ಒಳ್ಳದ್. ಭೀಷ್ಮನ ರಥನ ಅಂಬೆ ಹತ್ತುದರ ಅಂವಂದ ನೋಡಿಕೆ ಆತ್ಲೆ. ಭೀಷ್ಮ ಅಂಬೆನ ಅಂವನ ಹಕ್ಕಲೆ ಹೋಕೆ ಬುಟ್ಟರುನೂ, ಅಲ್ಲಿದ್ದ ಕ್ಷತ್ರಿಯರ್ ಒಟ್ಟು ಸೇರಿ ಅಂವಂಗೆ ಮುತ್ತಿಗೆ ಹಾಕ್ತಿದ್ದೊ. ಕಾಡ್ ಮೊಯಿಂಸರ ರಾಜನ ಮುಗ್ಸಿಕೆ ಸಿಕ್ಕುವ ಈ ಸಂದರ್ಬನ ಅವು ಬುಡ್ತಿತ್ಲೆ. ಹಿಂದೆನ ದಿನನೇ ಅಂಬೆ ತನ್ನೊಟ್ಟಿಗೆ ಹೊರ್ಟ್ ಬರಕಾಗಿತ್ತ್‌ಂತ ಅಂವನ ಮೊನ್ಸಿಗಾತ್. ಇಲ್ಲರೆ ಪಂತ ನಡ್ಯಕೆ ಮುಂದೆ ಅದರ ಇಸಯನ ಅಪ್ಪಂಗೆ ತಿಳ್ಸ್‌ತಿದ್ದರೆ ಎಲ್ಲಾ ಸರಿಯಾಗ್ತಿತ್ತೇನೋ?

ಹಾಂಗೆ ಏಚನೆ ಮಾಡಿ ಸಾಲ್ವ ಭೂಪತಿ ಹೇಳ್ತ್. "ಅಂಬೇ, ಅಂದ್ ಸರೋವರಲಿ ನಿನ್ನ ಸುರುನ ಸಲ ನೋಡಿಕಾಕನ ಸೌಭಕ್ಕೆ ನನ್ನೊಟ್ಟಿಗೆ ಬಾಂತ ಕರ್ದೆ. ಏನೇನೋ ಕುಂಟುನೆಪನ ನೀ ಹೇಳ್ದೆ. ಅಂದೇ ನೀ ಬಾತಿದ್ದರೆ ಈಗ ಈ ಪರಿಸ್ತಿತಿ ಹುಟ್ತಿತ್ಲೆ. ಅದಾತ್ಲೆ, ಹೋಗಲಿ ಅರಮನೆಗೆ ಹೋದ ಮೇಲೆ ಅಲ್ಲಿ ನಡ್ದದರ ನಿನ್ನ ಅಪ್ಪಂಗೋ, ಅವ್ವಂಗೋ ಹೇಳ್ತಿದ್ದರ್ನೂ ಹೀಂಗಾಗ್‌ತಿತ್ಲೆ. ಇದರ ಯಾವ್ದರನೂ ನೀ ಮಾಡದ ಕಾರ್ಣ ನಾ ಭೀಷ್ಮಂದ ಅಪಮಾನ ಪಡ್ದೆ. ಪಂತಲಿ ಗೆಲ್ಲಿಕಾಗದ ನಾ ಈಗ ನಿನ್ನ ಮೊದ್ವೆ ಆದು ಅಧರ್ಮ ಆದೆ. ಧರ್ಮದ ಪ್ರಶ್ನೆನ ಕಡೆಗಿಟ್ಟರೂ ಈಗ ನೀ ಸಾಲ್ವ ಭೂಪತಿ ಮೆಚ್ಚಿದ ಅಂಬೆ ಅಲ್ಲ. ಭೀಷ್ಮ ಗೆದ್ದ ಅಂಬೆ. ನಿನ್ನ ಪಟ್ಟದ ರಾಣಿ ಆಗಿ ನಾ ಮಾಡಿಕಂಬೊದ್ಲೆ. ನನ್ನ ದಾರಿ ನಂಗೆ, ನಿನ್ನ ದಾರಿ ನಿಂಗೆ."

ಅಂಬೆ ಕೂಡ್ಲೆ ಮಾರುತ್ತರ ಕೊಟ್ಟತ್ "ಸಾಲ್ವಭೂಪತೀ,ನೀ ಹೇಳ್ದಾಂಗೆ ಮಾಡಿಕೆ ಆದೆನೋಂತ ಏಚನೆ ಮಾಡಿ ನೋಡ್. ಸೊಂಯಂವರಕ್ಕೆ ಸಕ್ತಿನೇ ಪಂತಾಂತ ಅಪ್ಪ

ಹೇಳಿಕಾಕನನೇ ನಾ ನನ್ನ ಸ್ವತಂತ್ರನ ಕಳ್ಕಂಡಂವಳ್. ನಿನ್ನೊಟ್ಟಿಗೆ ನಾ ಸರೋವರಂದಳೇ ಹೊರ್ಟ್ ಬಾತಿದ್ದರೆ ಇಡೀ ದೇಸದ ರಾಜ, ಮಹಾರಾಜರ್‌ಗ ನಿನ್ನ ಸುಂಮಂಗೆ ಬುಡ್ತಿದ್ದನೋ? ನಿನ್ನ ಕೊಂದ್ ಬುಡ್ತಿದ್ರೊ. ಸೊಂಯಂವರದ ವಿಧಿವಿಧಾನನ ಒಮ್ಮೆ ಗೊತ್ತ್ ಮಾಡ್ದ ಮೇಲೆ ಅದರ ಮಿರಿಕೆ ಅಪ್ಪಂಗಾಗಲೀ, ಅವ್ವಂಗಾಗಲೀ ಸಾದ್ಯ ಆಗ್ತಿತ್ತೋ? ಇದೆಲ್ಲ ಗೊತ್ತಿದ್ದ ಮೇಲೆ ನಾ ಸರೋವರಲಿ ನಿನ್ನ ನೋಡ್ದರ ಅವ್ಕೆ ತಿಳ್ಸಿ ಏನ್ ಪ್ರೋಜನ? ನಡ್ದ ಇಸಯ ಎಲ್ಲಾ ನಿಂಗೆ ತಿಳ್ದರುನೂ ನೀ ನನ್ನ ಮೇಲೆ ತೊಪ್ಪುನ ಹೊರ್ಸಿಯ. ನೀ ಕಾವಲ್ಗಾರನ ಕಣ್ತೊಪ್ಪುಸಿ ಅಲ್ಲಿಗೆ ಬಂದದೇ ತೊಪ್ಪು. ನೀ ದೊಡ್ಡ ಈಜಂವಾಂತೇಳ್ವ ಹಂಕಾರ ಸರೋವರಲಿ ಈಜಿಕಂಡಿದ್ದ ನನ್ನ ಹಕ್ಕಲೆ ಬಾವ ಹಾಂಗೆ ಮಾಡ್ತ್. ನಂಗೆ ಗಂಡ್‌ನ ಮೇಲೆ ಮೊನ್ಸ್ ಆದೇ ನಿನ್ನ ನೋಡ್ದ ಮೇಲೆ. ಅಂದ್ ನೀ ನನ್ನ ಜೂವನಲಿ ಬಾರದಿರ್ತಿದ್ದರೆ, ನಾ ಹೀಂಗೆ ಇಂದ್ ನಿನ್ನ ಹಕ್ಕಲೆ ಬಾವ ಪರ್‌ಸಂಗನೇ ಬಾತಿಲ್ಲೆ. ತಂಗೆಕಳ ಹಾಂಗೆ ನನ್ನ ಹಣೆ ಬರನೇ ಹೀಂಗೇಂತ ವಿಚಿತ್ರವೀರ್ಯನ ರಾಣಿ ಆಗ್ತಿದ್ದೆ."

ಸಾಲ್ವ ಭೂಪತಿ ಹೇಳ್ತ್, "ನಾ ಅಂದ್ ಉಪವನನ ಪ್ರವೇಶ ಮಾಡ್ದ್ ಗೊತ್ತಿಲ್ಲದೆ. ನನ್ನ ಕುದ್ರೆಗ ನೀರ್ ಕುಡ್ಯಕೆಂದ ಸೇಂಕ್‌ತಿದ್ರೊ. ನಂಗೆ ಸಾ ದಣ್ಕೆ ಆಗಿತ್ತ್. ನಿನ್ನ ಅಪ್ಪ ಪ್ರತಾಪಸೇನ ದಾರಿಲಿ ಅಲ್ಲಲ್ಲಿ ಕುಡ್ಯವ ನೀರ್ ಸಿಕ್ಕುವಾಂಗೆ ಮಾಡ್ತಿದ್ದರೆ ನಾ ಉಪವನಕ್ಕೆ ಬಾತಿಲ್ಲೆನೋ ಏನೋ? ಸರೋವರಲಿ ಗಂಡುಡ್ಗೆ ಹಾಕಂಡ್ ಈಜಂವ ಗಂಡ್‌ಂತಳೇ ನಾ ಗ್ರೇಸಿದ್ದೆ. ದೂರಂದ ಯಾರ್‌ಂತ ಗುರ್ತ ಹಿಡ್ಯಕೆ ಆಗ್ತಿಲ್ಲೆ. ಈಜುದೂಂತೇಳ್ರೆ ನಂಗೆ ಪ್ರಾಣ. ನನ್ನ ಹಾಂಗೆ ನೀಂತ ಗ್ರೇಸಿ ನಿನ್ನ ಸ್ನೇಹ ಪಡ್ಯಕೆ ನಾ ನಿನ್ನ ಹಕ್ಕಲೆ ಬಂದೆ. ದಂಡೆಲಿ ಹೆಣ್ಣುಡ್ಗೆ ಇರ್ತಿದ್ದರೆ ನಾ ಹಾಂಗೆ ಸರೋವರಕ್ಕೆ ಇಳ್ಯತಿಲ್ಲೆ. ಸರೋವರಲಿ ಈಜುದು ಹೆಣ್ಣ್ಂತ ಗೊತ್ತಾದ ಕೂಡ್ಲೆ ನಾ ನಿನ್ನಲ್ಲಿ ಕ್ಷಮೆ ಕೇಳಿ ತಿರ್ಗ ಹೊರ್ಟೆ. ಆದರೆ ನೀನೇ ನಿನ್ನ ದರ್ಪದ ಮಾತ್‌ಂದ ನನ್ನ ತಡ್ದವ್ಳು. ನೀ ನನ್ನ ನಿಲ್ಲಿಸಿಕಂಡ್, ಅಷ್ಟ್ ಹೊತ್ತ್ ನನ್ನಲ್ಲಿ ಮಾತಾಡದೆ ಇರ್ತಿದ್ದರೆ, ಸೊಂಯಂವರ ಮಂಟಮೆಲಿ ನಾ ಸೋಲಿಕಾಕನ ನಂಗೆ ಬೇನೆ ಆಗ್ತಿಲ್ಲೆ. ನೀ ಭೀಷ್ಮನ ರಥನ ಹತ್ತಿದ್ ನಂಗೆ ಅಪಮಾನಾಂತ ತಿಳ್ದ್ ನಾ ಬೇಜಾರ ಪಡ್ತಿಲ್ಲೆ. ತೊಪ್ಪು ಮಾಡ್ದವ್ಳು ನೀ. ಸುಮ್ಮಂಗೆ ನನ್ನ ಮೇಲೆ ತೊಪ್ಪುನ ಹೊರ್ಸಬಡ."

ಅಂಬೆ ತಗ್ಗಿದ ದನಿಲಿ ಹೇಳ್ತ್. "ಸಾಲ್ವ ಭೂಪತಿ ನಮ್ಮಿಬ್ಬರ ನೊಡುಲಿ ಬೆಳ್ದ ಪ್ರೀತಿಗೆನೀ ಗಂಡ್, ನಾಹೆಣ್ಣ್ ಆಗಿ ಇದ್ದದೇ ಕಾರ್ಣ. ಗಂಡ್ ಹೆಣ್ಣ್‌ನ ನೊಡುಲಿ ಬೆಳ್ಯವ ಪ್ರೀತಿನ ತೊಪ್ಪೂಂತ ಹೇಳಿಕೆ ಆದುಲ್ಲೆ. ಅದ್ ಪ್ರಕೃತಿನ ರೀತಿ. ನಾವಿಬ್ಬೊರು ಆ ಸರೋವರಲಿ ನೋಡ್ದ್ ಗೊತ್ತಿಲ್ಲದೆ. ನಾವು ಪ್ರಕೃತಿನ ಕೂಸುಗ. ಇದರ್ಲಿ ತೊಪ್ಪು ಮಾಡ್ದೋವು ಭೀಷ್ಮಾಚಾರ್ಯರ್. ಆದರೆ ಅವು ನಮ್ಮಿಬ್ಬರ ಪ್ರೀತಿಗೆ ಬೆಲೆ ಕೊಟ್ಟ್‌ದ್ ನಿನ್ನಲ್ಲಿಗೆ ಗೌರವಂದ ನನ್ನ ಕಳ್ಸಿ ಕೊಟ್ಟೊಳೊ. ಅಲ್ಲಿಗೆ ಅವು ಮಾಡ್ದ ತೊಪ್ಪು ಕಳ್ದ್ ಹೋತ್. ಸಾಲ್ವ ಭೂಪತಿ, ನಿನ್ನೊಟ್ಟಿಗೆ ಮಾತಾಡ್ದ ಮೇಲೆ ನಾ ನಾ ಆಗಿನೇ ಇತ್ಲೆ. ನಿನ್ನ ಸರೀರದ ಒಂದ್ ಬಾಗ ಆದೆ. ನನ್ನ ಮೊನ್ಸ್‌ಲಿ ಇಡೀ ನೀನೇ ತುಂಬಿಕಂಡಿದ್ದ. ಒಬ್ಬಂಗೆ

ದೇಹನ ಇನ್ನೊಬ್ಬಂಗೆ ಮೊನ್ಸ್‌ನ ಕೊಡುವ ಶಿಕ್ಷೆಂದ ನನ್ನ ಬುಡ್ಗಡೆಗೊಳ್ಸ್. ನಾ ಎಲ್ಲಿನೂ ತೊಪ್ಪಿದ್ ನಡ್ತಿಲ್ಲೆ. ನಾ ತೊಪ್ಪು ಮಾಡ್ತಿದ್ದರೆ ನಿನ್ನ ಎದ್ರ್ ನಿತ್ತ್ ಮಾತಾಡಿಕೆ ನಂಗೆ ಆಗ್ತಿತ್ತೋ? ಆ ಸರೋವರಲೇ ಅಂಬೆ ಮೊನ್ಸ್‌ಲೇ ನಿನ್ನ ಒಪ್ಪಿಕಂಡುಟ್ಟು. ಈಗ ನೀ ನನ್ನ ನಿನ್ನ ಹೆಣ್ಣ್‌ನ ಆಗಿ ಮಾಡಿಕ. ಹೆಣ್ಣ್‌ನ ಪ್ರೀತಿಂದ ಗೆಲ್ಲೊಕೂಂತೇಳ್ವ ಪಾಟ ಜನಕ್ಕೆ ನಿನ್ನಂದ ಗೊತ್ತಾಗಲಿ. ಹೆಣ್ಣ್‌ನ ಭೋಗದ ವಸ್ತೂಂತ ಹೇಳ್ವ ಇಡೀ ಆರ್ಯವರ್ತದ ಜನಂಗಳಿಗೆ ಪ್ರೀತಿನ ಬೆಲೆ ಗೊತ್ತಾಗಲಿ."

ಸಾಲ್ವ ಭೂಪತಿ ಏಚನೆ ಮಾಡ್ದೆ. ನಾ ಮತ್ತೆ ಅಂಬೆ ಇಬ್ರೊರು ಒಬ್ಬಂದೊಬ್ಬ ಪ್ರೀತಿ ಮಾಡ್ದೊವು. ಅದ್ ತೊಪ್ಪುನೂ ಅಲ್ಲ. ಎಲ್ಲನೂ ನಾವು ನೆಂದ ಹಾಂಗೆ ನಡ್ಯತಿರ್ತಿದ್ದರೆ ಈಗ ಅದ್ ನನ್ನ ರಾಣಿ ಆಗಿರ್ತಿತ್ತ್. ಭೀಷ್ಮ ಬಂದ್ ಎಲ್ಲಾ ಹಾಳ್ ಮಾಡ್ತ್. ತೊಪ್ಪು ಅಂವಂದ್. ಆದರೆ ತೊಪ್ಪು ಅಂವಂದನೆ? ಆರ್ಯಾವರ್ತದ ಬೇರೆ ಯಾವ ಕ್ಷತ್ರಿಯ ರಾಜನೂ ಪ್ರೇಮನ ಗೌರವಿಸಿ ಅಂಬೆನ ಹೀಂಗೆ ಕಳ್ಸಿ ಕೊಡ್ತಿತ್ತೆ. ಹಾಂಗಾರೆ ತೊಪ್ಪು ನಡ್ದದ್ ಯಾರ್‌ಂದ? ಕಾಶೀರಾಜ ನನ್ನ ಕಾಡ್ ಮೊಂಯಿಂಸಾಂತ ದೂರನೇ ಇಸಿತ್ತ್. ಹಸ್ತಿನಾವತಿನವರನೂ ಬಾಕೆ ಹೇಳ್ತಿಲ್ಲೆ. ಗಂಡ್ ಮಕ್ಕ ಇಲ್ಲದ ಕಾಶೀರಾಜ ಮಗಕ್ಕಳ ಯಾರ್ ಮೊದ್ವೆ ಆದವೆನೋ ಅವೇ ಮುಂದೆ ಕಾಶೀ ರಾಜ್ಯದ ರಾಜ ಆದವೆ. ರಾಜ್ಯ ಭಾಗ ಆಗಿ ಬಲ ಇಲ್ಲದೆ ಆದು ಬೇಡಾಂತ ತನ್ನ ಮೂರ್ಜನ ಮಗಕ್ಕಳ ಒಬ್ಬಂಗೇ ಮೊದ್ವೆ ಮಾಡಿ ಕೊಡಿಕೆ ರಾಜ ನೋಡ್ತ್. ಒಟಾರೆ ಆಗಿ ನೋಡ್ರೆ ಇದ್ ತೊಪ್ಪೂಂತ ಕಾಂಬೊದಿಲ್ಲೆ. ಭೀಷ್ಮ ಬ್ರಹ್ಮಚಾರಿ. ವಿಚಿತ್ರವೀರ್ಯ ಬಲ ಇಲ್ಲದ ರಾಜ ಆದಕಾರ್ಣ ವಿಚಿತ್ರವೀರ್ಯ ಅಳ್ಯ ಆದು, ಸುಲಬಲಿ ಕಾಶೀ ರಾಜ್ಯ ಕುರುಸಾಮ್ರಾಜ್ಯಕ್ಕೆ ಸೇರಿ ಹೋದು ಪ್ರತಾಪಸೇನಂಗೆ ಇಸ್ಟ ಇಲ್ಲದರ್‌ಂದ ಹಸ್ತಿನಾವತಿಯೊಪ್ಕೆ ಸೊಂಯಂವರಕ್ಕೆ ಬಾಕೆ ಕಾಗ್ದ ಕಳ್ಸಿತ್ಲೆ. ಕಾಗ್ದ ಬಾತ್ಲರೂ ಭೀಷ್ಮ ತಮ್ಮಂಗಾಗಿ ಬಾತ್. ವಿಚಿತ್ರವೀರ್ಯ ಬಾತಿದ್ದರೆ ಅಂವನ ಒಂದೇ ನಿಮ್ಸಲಿ ಗೆಲ್ತಿದ್ದೆ. ಭೀಷ್ಮನೇ ಬಂದ್‌ಬುಟ್ಟತ್. ಹಾಂಗೆ ಬರದಿರ್ತಿದ್ದರೆ ಕುರುಸಾಮ್ರಾಜ್ಯ ಬಲ ಇಲ್ಲದಾಗಿ ಬೇರೆ ರಾಜರ್‌ಗಳ ಪಾಲಾದೆ ಮತ್ತೆ ಅದ್ಕೆ ತಾನೇ ಕಾರ್ಣಕರ್ತ ಆನೇಂತ ಭೀಷ್ಮ ಹೆದ್ರಿರೋಕು. ನನ್ನ ಹಾಂಗೆ ಬೀಷ್ಮನ ಸೊಂಯಂವರ ಮಂಟಮೆಗೆ ಬಾಕೆ ಮಾಡ್ದ್ ಸ್ವಾಭಿಮಾನ. ಅಂವಂದ್ ಒಂದಿಸ್ಸೂ ಸ್ವಾರ್ತ ಇಲ್ಲದ ಸ್ವಾಭಿಮಾನ. ಕಾಶೀ ರಾಜ ನನ್ನನ ಮತ್ತೆ ಹಸ್ತಿನಾವತಿನ ದೂರ ಇಸಿದ್ ಮಗಕ್ಕಳ ಅಪ್ಪನ ಸ್ತಾನಲಿ ನಿತ್ತ್ ನೋಡ್ರೆ ತೊಪ್ಪಾದುಲ್ಲೆ. ನನ್ನ ಮತ್ತೆ ಅಂಬೆನ ಪ್ರೀತಿನೂ ಯಾರ್ ಸಾ ತಪ್ಪೂಂತ ಹೇಳಿಕಿಲ್ಲೆ. ನಾ ಆಗಲಿ, ಭೀಷ್ಮ ಆಗಲಿ ಸ್ವಾಭಿಮಾನಂದ ಸೊಂಯಂವರ ಮಂಟಮೆಗೆ ಹೋದುನೂ ತೊಪ್ಪು ಅಲ್ಲ. ನಂಗೆ ಭೀಷ್ಮನ ಗೆಲ್ಲಿಕೆ ಆಗ್ತಿದ್ದರೆ ಯಾವ ಪ್ರಸ್ನೆನೂ ಬಾಕಿತ್ಲೆ. ಭೀಷ್ಮ ಗೆದ್ದದ್ ನನ್ನ ಮಾತ್ರ ಅಲ್ಲ. ಅಂಬೆನನೂ. ಆರ್ಯಾವರ್ತದ ಎಲ್ಲಾ ರಾಜ, ಮಹಾರಾಜರ್‌ಗಳ ಎದ್ರ್ ಭೀಷ್ಮ ಗೆದ್ದತ್. ಸಾಲ್ವ ಭೂಪತಿ ಅಂಬೆನ ಒಪ್ಪಿಕೊಂಬೊದ್ ಹೇಂಗೆ?

ಸಾಲ್ವ ಭೂಪತಿ ದನಿ ತಗ್ಗಿಸಿ ಹೇಳ್ದೆ, "ರಾಜಕುಮಾರಿ, ನಾ ಯಾರ ಮೇಲೆನೂ

ತೊಪ್ಪುನ ಹೊರ್ರುಸ್ಲೆ. ಈ ಪ್ರಕರಣಲಿ ಸೇರ್ದವು ಎಲ್ಲಾ ಅವರವ್ರ ನಡೋಳ್ಕೆಗೆ ಅವರ್ದೇ ಆದ ಸಮರ್ತನೆ ಇದ್ದದೆ. ಇಡೀ ಪ್ರಕರಣ ಒಂದು ನಾಟಕ ಇದ್ದ ಹಾಂಗೆ. ನಾವೆಲ್ಲಾ ಸೂತ್ರದ ಬೊಂಬೆಗ. ನಂಗೆ ಈಗ ನೆಂಪಾದೆ. ನಮ್ಮ ಸುರುನ ನೋಡಟ ನೆನ್ಸಿಕಂಡ್ರೆ ನಿಂಗೆ ಅರ್ತ ಆದು. ಹಾಂಗೆ ಸರೋವರಲಿ ನೋಡ್ದ ಹೆಣ್ಣ್ ಗಂಡ್ ಈ ಲೋಕಲಿ ನಾವು ಮಾತ್ರ ಆಗಿರ್ವೋ. ನಮ್ಮ ಎಲ್ಲಾ ಕಸ್ಟಕ್ಕೆ ಅದೇ ಕಾರ್ಣ ಆದೆ. ಹಾಂಗೆ ನಾವು ನೋಡಿಕಾಕನ ನಮ್ಮ ಇಬ್ರೊರೊಳಗೆ ಪ್ರೀತಿ ಹುಟ್ಟದೆ ಇರ್ತಿದ್ದರೆ, ನೀ ಹಸ್ತಿನಾವತಿನ ಅಂತಃಪುರಲಿ ಇರ್ತಿದ್ದೆ. ನಿನ್ನ ಗೆದ್ದಂವ ಭೀಷ್ಮ. ಧರ್ಮ ಪ್ರಕಾರ ನೀ ಹಸ್ತಿನಾವತಿಗೆ ಸೇರ್ದವ್ಳು. ಗೆದ್ದಂವ ನಿನ್ನ ಯಾರಿಗೆ ಬೇಕಾದರ್ ಕೊಡಕ್. ಅದರ ದೇಸದ ಜನ ಅಧರ್ಮಾಂತ ತಿಳ್ಯೋದುಲ್ಲೆ. ಪ್ರೇಮನೇ ದೊಡ್ಡದ್‌ಂತ ಲೋಕ ಇನ್ನೂ ಒಪ್ಪಿಕಂಡತ್ಲೆ."

ಅಂಬೆನ ಮೋರೆ ಕಪ್ಪಾಕಂಡ್ ಬಾತ್. ಪಂಡಿತ ದೇವಿಚರಣದಾಸ ಆಗಂದ ಚಡಪಡ್ಸ್‌ತಿತ್ತ್. ಸಾಲ್ವ ಭೂಪತಿಗೂ ಈ ಪ್ರಕರಣನ ಬೇಗ ಮುಗ್ಸೋಕೂಂತ ಆತ್. ಅಂವ ಮಾತ್ನ ಮುಂದರ್ಸಿತ್. "ನಿನ್ನ ಮೊನ್ಸ್‌ನ ತಿಳ್ದ್, ಗೌರವಂದ ಭೀಷ್ಮ ನಿನ್ನ ಇಲ್ಲಿಗೆ ಕಳ್ಸಿಕೊಟ್ಟೋಳೊ. ಆ ಮಟ್ಟಿಗೆ ಅವ್ಕೆ ಪ್ರೇಮದ ಬೆಲೆ ತಿಳ್ದುಟು. ದೇಸದ ಬೇರೆ ರಾಜರ್‌ಗ ಹೀಂಗೆ ಮಾಡ್ತಿತ್ಲೆ. ದಯಾಮಾಡಿ ನೀ ನನ್ನ ಮಾತ್ನ ಅಪಾರ್ತ ಮಾಡ್ಬಡ. ನನ್ನ ಪ್ರಕಾರ ನೀ ಈಗ ಸೌಭದೇಸಕ್ಕೆ ಹಸ್ತಿನಾವತಿ ನೀಡ್ದ ಭಿಕ್ಷೆ. ಈ ಸಿಂಹಾಸನಲಿ ನೀನೂ ಕುದ್ದ್ ಕಂಡಿರ್ತಿದ್ದರೆ ನಿಂಗುನೂ ಹಾಂಗೆ ಕಾಂಬತಿತ್ತ್. ನಿನ್ನ ಮೇಲೆನ ಪ್ರೀತಿಂದ ನಾ ನನ್ನ ಸ್ವಾಭಿಮಾನನ ಬದಿಗಿಸುಂವೆ ಆದರೆ ನನ್ನ ಪ್ರಜೆಗಳ ಕಣ್ಣ್‌ಲಿ ನಾ ಏನಾಂವೆ? ಇದರ ನೀ ಏಚನೆ ಮಾಡ್ದ. ಭೀಷ್ಮ ಉದಾರ ದಾನ ಮಾಡ್ದ್ ಹೆಣ್ಣ್‌ನ ಸೌಭದೇಸದ ಪಟ್ಟದ ರಾಣಿ ಮಾಡ್ದರ ನನ್ನ ಪ್ರಜೆಗ ಒಪ್ಪಿಕಿಲ್ಲೆ. ಇಡೀ ಸಭೆಲಿ ಯಾರಾದರೊಬ್ಬ ಮಾತಾಡ್ವೆನೋ ನೋಡು? ಸೊಂತ ಸಕ್ತಿಂದ ಹೆಣ್ಣ್‌ನ ಗೆಲ್ಲಿಕಾಗದಂವನ ಗಂಡ್‌ಂತ ಯಾರ್ ತಿಳ್ದವೆ? ರಾಜಕುಮಾರಿ, ಇನ್ನ್ ಚರ್ಚೆ ಬೇಡ. ನಿನ್ನೊಟ್ಟಿಗೆ ಮಾತಾಡ್ರೆ ಹಳೆ ಗಾಯಕ್ಕೆ ಬರೆ ಎಳ್ದಾಂಗಾದೆ. ದಯಮಾಡಿ ಹೊರ್ಬ್‌ದ್ ಹೋಗ್. ಎಲ್ಲಿಯಾದರ್ ಸುಕಲಿ ಬಾಳ್."

ಸಾಲ್ವ-ಅಂಬೆನ ಮಾತ್‌ನ ನೊಡುಲಿ ತಾನ್ ಕಳ್ದ್ ಹೋನೇಂತ ಪುರೋಯ್ತು ದೇವಿಚರಣದಾಸಂಗೆ ಗೊತ್ತಾತ್. ಸಾಲ್ವ ಭೂಪತಿನ ಮಾತ್‌ನ ಕೇಳ್ದ ಮೇಲೆ ಇನ್ನ್ ಇಂವ ಅಂಬೆನ ಒಪ್ಪಿಕಂಬಕಿಲ್ಲೇಂತ ತಿಳ್ದತ್. ಈಗ ಅಂವ ನೊಡುಲಿ ಬಾಯಿ ಹಾಕಿದೆ. "ಅಂಬೇ, ನಿನ್ನಸೌಭದೇಸಕ್ಕೆ ಕರ್ಕೊಂಡೋಗಿ ಬುಡಿಕೆ ಆಚಾರ್ಯ ಭೀಷ್ಮರ್ ನಂಗೆ ಅಪ್ಪಣೆ ಮಾಡ್ಯೋಳೊ. ಅದರ ನಾ ಮಾಡ್ಯಳೆ. ನಿನ್ನ ಸಾಲ್ವ ಭೂಪತಿನ ಕೈಗೆ ಕೊಡ್ದು ಮಾತ್ರ ನನ್ನ ಕೆಲ್ಸ. ಇನ್ನ್ ನಾ ಇಲ್ಲಿರ್ದರ್ಲಿ ಅರ್ತ ಇಲ್ಲೆ. ನಾ ಇನ್ನ್ ಹಸ್ತಿನಾವತಿಗೆ ಹೋಕು. ನನ್ನಂತಾ ಪಂಡಿತರ ಬರಿಕೈಲಿ ಕಳ್ಸುದು ಶಾಸ್ತ್ರ ಒಪ್ಪಿಕಿಲ್ಲೆ."

ಪುರೋಯ್ತು ದೇವಿಚರಣದಾಸ ಅಕೆರಿಗೆ ಹೇಳ್ದ ಮಾತ್ ತನಿಗೆ ತಾಂಗಿಕೆ ಹೇಳಿರೋಕೂಂತ ಸಾಲ್ವ ಭೂಪತಿಗಾತ್. ಅಲ್ಲದೇ ಈ ಅವಸ್ತೆಲಿ ಅಂಬೆಗೆ, ಅಂವಂಗೆ ಎಂತದರ ಕೊಡಿಕೆ ಆದೆ? ಪಂಡಿತ ದೇವೀಚರಣದಾಸನ ಸಾಲ್ವ ಭೂಪತಿ ಸಮ್ಮಾನ

ಮಾಡ್ದೆ. "ಸೋಮಿಾ ಚತುರ್ವೇದಿಗಳೇ, ಅಂಬೆಂದ ನೀವು ಈಗ ಎಂತದರನೂ ಪಡ್ಕಂಬಕೆ ಆದ್ಲೇಂತ ನಾ ನೆನ್ಸಿನೆ. ಹಸ್ತಿನಾವತಿಗೆ ತಿರ್ಗಹೋದ ಮೇಲೆ ಭೀಷ್ಮಾಚಾರ‍್ಯರ್ ನೀವ್ಗೆ ಏನಾದರ್ ಕೊಡದೆ ಇದ್ದವೆನೋ? ನಿಮ್ಮಂತಾ ದೊಡ್ಡ ವಿದ್ವಾಂಸರ್ ಸೌಭಕ್ಕೆ ಕಾಲ್ ಇಸುದು ಇದೇ ಸುರು. ವಿದ್ವಾಂಸರ ಬರಿಕೈಲಿ ಕಳ್ಸುದು ಅಧರ್ಮ ಆದೆ. ಎಲ್ಲಿ ನಮ್ಮ ಖಜಾನೆನ ಅಧ್ಯಕ್ಷರ್? ಈ ಚತುರ್ವೇದಿಗಳಿಗೆ ಐದ್ ನೂರ್ ಚಿನ್ನದ ನಾಣ್ಯಗಳ ಕೊಟ್ಟ್, ಪಟ್ಟೆ ಸಾಲ್ ಹೊದಿಸಿ ಗೌರವಂದ ಕಳ್ಸಿ ಕೊಡಿನಿ"

ಪುರೋಯ್ತು ದೇವಿಚರಣದಾಸ ಅದರ ತಕಂಡ್ "ಇಷ್ಟಾರ್ಥ ಸಿದ್ಧಿರಸ್ತು, ಲೋಕಾ ಸಮಸ್ತ ಸುಖಿನೋಭವಂತು"–ಎಚಿದ್‌ದ್ ಹರ್ಸಿಹೊರ್ಟತ್. ಆಗ ಸಾಲ್ವಭೂಪತಿ ಹೇಳ್ತ್. "ಚತುರ್ವೇದಿಗಳೇ, ಅಂಬೆ ಮತ್ತೆ ನಿಮ್ಮನ ಗಡಿ ಮುಟ್ಟ ನಮ್ಮ ರಥ ಕರ್ಕಂಡೋದೆ. ಅಲ್ಲಿ ಹೇಂಗೂ ನಿಮ್ಮ ರಥ ಉಟ್ಟಲೇ? ಹಸ್ತಿನಾವತಿಂದ ಬಂದದ್ ಹಸ್ತಿನಾವತಿಗೇ ಹಿಂದೆ ಹೋಗಲಿ."

ಈ ಮಾತ್‌ನ ಕೇಳಿ ಪುರೋಯ್ತು ದೇವಿಚರಣದಾಸ ಅಯ್ಯನ ಮಂಡೆ ನಾ ಈಗೇನ್ ಮಾಡಲಿ? ಭೀಷ್ಮರ್ ಅಂಬೆನ ಸಾಲ್ವಭೂಪತಿಗೆ ಒಪ್ಪಿಸಿಕೆ ನನ್ನೊಟ್ಟಿಗೆ ಕಳ್ಸಿದ್. ಈಗ ಇಂವ ಹೀಂಗೆ ಹೇಳ್ದೆ. ನಾ ಇದರ ತಿರ್ಗ ಭೀಷ್ಮನಕ್ಕಲೆ ಹೇಂಗೆ ಕರ್‌ಕೊಂಡೋದು? ಇಂವ ನನ್ನ ಇಕ್ಕಟ್ಟ್‌ಲಿ ಸಿಕ್ಕಿಸಿತಲೇಂತ ಏಚನೆ ಮಾಡಿ ಸಮ್ಮಾನದ ಸೊರಲಿ ಸಾಲ್ವ ಭೂಪತಿಗೆ ಹೇಳ್ದೆ. "ರಾಜಾ ನಾ ನಾಕ್ ವೇದನ ಅರ್ಥ್‌ದ್ ಕುಡ್ದಂವ. ಶಾಸ್ತ್ರಗಳ ತಿಳ್ಕಂಡಂವ. ಭೀಷ್ಮ ಗೆದ್ದ ಅಂಬೆನ ಸಾಲ್ವ ಒಪ್ಪುಸಿಕಂಬೊದು ಅಧರ್ಮ ಆದರೆ ನಾ ಇದರ ಇಲ್ಲಿಗೆ ಮುಟ್ಟ ಕರ್ಕಂಡ್ ಬಾತಿತ್ಲೆ. ಇದ್ ಯಾವ ತೊಪ್ಪುನನೂ ಮಾಡ್ತ್‌ಲ್ಲೆ. ಸುಕನ ಭೋಗನ ಒಪ್ಪುವವಳ್ ಆಗ್ತಿದ್ದರೆ ಮೊನ್ಸ್‌ಗೆ ಹಿಡ್ಸಿದಂವನ ಮೊದ್ವೆ ಆಕೇಂತ ಇಲ್ಲಿಗೆ ಬಾತಿತ್ಲೆ. ಇಂದ್ರಂದ ಕೆಟ್ಟ್ ಹೋದ ಅಹಲ್ಯೆನ ಗೌತಮರ್ ಸ್ವೀಕಾರ ಮಾಡ್ಡೊ. ಅಹಲ್ಯೆ ದೊಡ್ಡ ಪತಿವ್ರತೆ ಎಂತ ಲೋಕ ಅದರ ಕೊಂಡಾಡ್ದೆ. ಗುರು ಬ್ರಹಸ್ಪತಿ ಆಚಾರ‍್ಯರ ಹೆಣ್ಣ್ ತಾರೆ ಚಂದ್ರನ ಪ್ರೀತಿ ಮಾಡ್ತಿಲ್ಲೆನೋ? ಅದರ ಲೋಕ ತೊಪ್ಪೊಂತ ಹೇಳ್ತ್‌ಲ್ಲೆ. ಅಂಬೆ ನಿನ್ನನ ಬುಟ್ಟ್ ಮೊನ್ಸ್‌ಲಿ ಬೇರೋಪ್ಕೆ ಸ್ತಾನ ಕೊಟ್ಟತ್ಲೆ. ರಾಜಾ, ನೀ ತೊಪ್ಪು ಮಾಡಿಯ. ಒಬ್ಬ ಹಿರಿ ಮೊಂಯಿಂಸ ಆಗಿ ನಾ ಹೇಳ್ದೆ. ಈ ಅಂಬೆನ ಕೈ ಬುಡ್ಬಡ. ಅದ್ ತೊಪ್ಪಾದೆ. ರಾಜ ಮಾಡುವ ತೊಪ್ಪು ಮುಂದೆಗೆ ಇಡೀ ಪ್ರಜೆಗಳಿಗೆ ಕಂಟಕ ಆದೆ."

ಸಾಲ್ವ ಭೂಪತಿ ತಲೆ ಕೊಡ್ಕಿ ಹೇಳ್ದೆ. "ಚತುರ್ವೇದಿಗಳೇ, ನಾ ಗೌತಮ ಮತ್ತೆ ಬ್ರಹ್ಮಸ್ಪತಿ ಆಚಾರ‍್ಯರಸ್ಟ್ ದೊಡ್ಡಂವ ಅಲ್ಲ. ಹೇಂಗೆ ಏಚನೆ ಮಾಡ್ರುನೂ ಇದ್ ನಂಗೆ ಹಸ್ತಿನಾವತಿನ ಭಿಕ್ಷೆನ ಹಾಂಗೆ ಕಂಡದೆ. ಒಂದ್ ಹೆಣ್ಣ್‌ಗಾಗಿ ನಾ ನನ್ನ ಸ್ವಾಭಿಮಾನನ ಬಲಿಕೊಡಿಕಿಲ್ಲೆ."

ಅಂಬೆಗೆ ಈಗ ತಾನ್ ಸೋತ್ ಹೋದೇಂತ ಗೊತ್ತಾತ್. ಕಡೆ ಗಳ್ಗೆಲಿ ಮಾಡುವ ಪ್ರಯತ್ನಾಂತ ಅದ್ ಹೇಳ್ದೆ. "ಸಾಲ್ವಭೂಪತೀ, ಸೌಭದೇಸ ಹಸ್ತಿನಾವತಿನ ಭೀಕ್ಷೇಂತ

ಏಕೆ ತಿಳ್ಯೋಕು? ಪ್ರೀತಿಗಾಗಿ ಅಂಬೆ ಹಸ್ತಿನಾವತಿನ ಬುಟ್ಟು ಬಂದುಟೂಂತ ಏಕೆ ತಿಳ್ಯಕಾಗದ್. ಪ್ರೀತಿನ ಎದ್ರ್ ಯಾವ್ದೂ ನಿಲ್ಲುದ್ಲೇಂತ ಹೇಳಿಕೆ ಇದ್ ನಿಂಗೆ ಒಳ್ಳೆ ಅವಕಾಸ. ನೀ ರಾಜ ಆದ್, ಕಾಗ್ದ ಇಲ್ಲದೆ ಕಾಶಿಗೆ ಬಂದದ್ ರೂಡಿಲಿ ಇರ್ವ ಧರ್ಮನ ಧಿಕ್ಕರಿಸಿದಾಂಗೆ ಅಲ್ಲನೋ? ನಿನ್ನ ಪ್ರಜೆಗ ಏನ್ ಹೇಳ್ವೇಂತ ಅಪವಾದ ಹೊರ್ರುವ ಬಯಂದ ನೀ ನಿನ್ನ ಮೊನ್ಸ್‌ಗೆ ಇರೋದ ಆಗಿ ನಡ್ಕಂಡಿಯ. ಅದ್ ಅಧರ್ಮ ಅಲ್ಲನೋ? ನಾಕ್ ದಿನ ಜನ ಮಾತಾಡಿಕೊಂಬೊ. ಮತ್ತೆ ಅವು ಅದರ ಮರ್ತವೆ. ಬದಲಾವಣೆನ ಅವು ಒಪ್ಪಿಕಂಡೇ ಒಪ್ಪಿಕಂಡವೆ. ಅಂಬೆನ ಬಗ್ಗೆ ನಾವು ಮಾತಾಡ್ದ್ ತೊಪ್ಪೂಂತ ಜನ ತಿಳ್ಕಂಬ ಹಾಂಗೆ ನಾ ನಡ್ದ್ ತೋರ್ಸಿನೆ. ನೀ ನನ್ನ ಕೈ ಬುಟ್ಟರೆ ನಾ ದಿಕ್ಕ್ ದೆಸೆ ಇಲ್ಲದಂವ ಆನೆ."

ಸಾಲ್ವನ ಮೊನ್ಸ್ ಕರ್‍ಗಿತ್. ಹಂಞ ಹೊತ್ತ್ ಅಂವ ಏಚನೆ ಮಾಡ್ದೆ. ತಲೆ ಎತ್ತಿ ಸಭೆನ ಒಮ್ಮೆ ನೋಡ್ದೆ. ಕಣ್‌ಗೆ ಕಾಂಬ ಎಲ್ಲಾ ಮೋರೆಗಳ ಅಂವ ನೋಡ್ದೆ. ಕಡೆಗೆ ಅಂವ ಗಟ್ಟಿ ಮೊನ್ಸ್‌ಂದ ಹೇಳ್ದೊ "ಭೀಷ್ಮರ್‌ಂದ ಸೋಲುವ ಮುಂದೆ ಪ್ರೇಮನೇ ದೊಡ್ಡದ್‌ಂತ ತಿಳ್ಕಂಡಿದ್ದೆ. ಇದರ ಸಾಧಿಸಿ ತೋರ್ರುವ ಅವಕಾಸನಂಗೆ ಇದ್ದದ್ ನಿಜ. ಈಗನಾ ಅದರ ಕಳ್ಕಂಡಳೆ. ನಾ ಈಗ ನಿನ್ನ ಒಪ್ಪಿಕಂಡರೆ ಅದ್ ನನ್ನ ಹೇಡಿತನ ಆದೆ. ನನ್ನ ಮೇಲೆ ನಿಂಗೆ ನಿಜಲಿ ಪ್ರೀತಿ ಇದ್ದರೆ ದಯಮಾಡಿ ಇಲ್ಲಿಂದ ಹೊರ್ಟ್‌ದ್ ಹೋಗ್."

*****

# ಹೋಳು – ೦೮

# ಇರ್ಳ್‌ನ ಕಾಳಗಲಿ ಉರ್ಳಿತ್ ಮೊಣ್ಣ್‌ಗೆ

ದುರ್ಯೋಧನ, ದುಶ್ಯಾಸನರ್ ಬಿಡಾರಂದ ಹೊರ್ಟ್ ಹೋಗಿ ಎಸ್ಟೋ ಹೊತ್ತಾಗಿತ್. ಅಂಬೆನ ನೆಂಪು ಕಾಡ್‌ಕಂಡಿರಿಕಾಗನ ಎಸ್ಟ್ ಪ್ರಯತ್ನ ಮಾಡ್ರೂ ಅಂವಂಗೆ ನಿದ್ದೆ ಬಾತ್ಲೆ. ಸಣ್ಣ ಹೊಣ್ಕಟನೂ ಅಂವಂಗೆ ತುಂಬಾ ಬೇನೆ ಕೊಡ್‌ದರ್‌ಂದ ಒಂದ್ ಪುಡೆಂದ ಇನ್ನೊಂದ್ ಪುಡೆಗೆ ಹೊಣ್ಕಿಕೆ ಆಗ್ತಿತ್ಲೆ. ಎದೆಲಿ ಆಳಲಿ ಹೆಟ್ಟಿದ ಬಾಣಂದಾಗಿ ಕಂಕಣಿ ಮೊಲ್ಗಿ ನಿದ್ದೆ ಮಾಡಿಕೆ ಆಗ್ತಿತ್ಲೆ. ಹೆಣ ಬಿದ್ದಾಂಗೆ ಮೊಲ್ಗಿ ಮೊಲ್ಗಿ ಅಂವನ ಬೆನ್ನ್ ಉರ್ಯಕೆ ಸುರಾತ್.

ಸರೀರಕ್ಕೂ, ಮೊನ್ಸ್‌ಗೂ ಪೆಟ್ಟಾಗಿರಿಕಾಕನ ಸ್ವಸ್ತಲಿ ಮೊಲ್ಗಿಕೆ ಸಾದ್ಯನೇ ಆದ್ಲೆ. ಇಲ್ಲಿ ಅಂಬೆ ನೆಂಪಾಗಿ ಕಾಡ್‌ದೆ. ಅಲ್ಲಿ ಕುರುಕ್ಷೇತ್ರಲಿ ಇರ್ಳ್ ಕಾಳಗ ನಡ್ದದೆ. ಅದ್ ಧರ್ಮಕ್ಕೆ ಇರೋದವಾದ ಕಾಳಗ. ಅಂವನ ಇಚ್ಚೆಗೆ ಇರೋದ ಆಗಿತ್. ಆದರುನೂ ನಡ್ದದೆ. ಇರ್ಳ್‌ನ ಗೊಂದಲಲಿ ನಿರಪರಾದಿಗ ಸತ್ತವೆ. ದೊಂದಿ ಬೊಳ್ಪುಲಿ ನಡ್ಯವ ಕಾಳಗ ಅದ್. ವೈರಿಗ ಯಾರ್, ನಮ್ಮೊವು ಯಾರ್‌ಂತ ಅರೆ ಬೊಳ್ಪುಲಿ ಸರ್ಯಾಗಿ ಗುರ್ತಿಸಿಕೆ ಆಗದೆ ಯಾರ್ ಯಾರ್ನ ಕೊಂದ್‌ದ್ ಹಾಕ್ವನೋ? ಬೊಬ್ಬೆ, ಮರ್ದಟ, ಕಿರ್ಚಟ, ನರ್ಳಟ ಎಲ್ಲಾ ಕೇಳಿ ಬಂದದೆ. ಇರ್ಳ್ ಕಾಳಗ ಸುರುಮಾಡಿ ಆಗುಟು. ಯಾರ್‌ಂದ ಯಾಗ ಅದ್ ನಿತ್ತದೆನೋ?

ನಡಿರ್ಳ್ ಕಳ್ದಿರೊಕು. ಯುದ್ಧರಂಗಂದ ಕೇಳಿ ಬಾತಿದ್ದ ಬೊಬ್ಬೆ ಇದ್ದಕ್ಕಿದಾಂಗೆ ನಿತ್ ಹೋತ್. ಯಾರ್ ಸತ್ತನೋ? ಪಾಂಡವರ್ಲಿ ಯಾರ್‌ನಾದರ್ ಕೊಲ್ಲಿಕೆ ದುರ್ಯೋಧನಂಗೆ ಆತೋ? ಕಾಳಗ ನಿತ್ತೇ ಹೋದೆನೋ? ಈ ಹೊತ್ತ್‌ಲಿ ಏನಾತ್‌ಂತ ತಿಳ್ಸಿಕೆ ಯಾರ್ ಬಂದವೆ? ಬೊಳ್ಪಾಕನ ಮುಟ್ಟ ಕಾಯೋಕಾದು.

ಮನೆ ಸುತ್ತೋಳೂ ಯಾರೋ ಓಡಾಡ್ದ ಸದ್ದ್ ಕೇಳ್ಸಿತ್. ಅದರೊಟ್ಟಿಗೆ ಯಾರೊ ಪಿಸಿಪಿಸಿ ಮಾತಾಡ್ದಾಂಗೆ ಕೇಳ್ದೆ. ಯಾರೋ ಕಾವಲ್‌ಗಾರನೊಟ್ಟಿಗೆ ಮಾತಾಡ್ವೆ, ಯಾರೋ ಅಂಜಿದಂಗಾತ್. ಹಂಞ ಹೊತ್ತ್‌ಲಿ ಯಾರೋ ಒಳಗೆ ಬಂದೊ.

"ಅಜ್ಜಪ್ಪಾ ನೀವ್ಗೆ ನಿದ್ದೆಮಾಡಿಕಾಕಿಲ್ಲೇಂತ ಬಂದೊಳೆ"

ಭೀಷ್ಮಂಗೆ ದನಿನ ಗುರ್ತ ಸಿಕ್ಕಿತ್. "ಕರ್ಣ ಅಲ್ಲನೋ? ಬಾ ಕುದ್ದ್‌ಕಾ. ಅಲ್ಲಿ ನೀವು ಧರ್ಮಕ್ಕೆ ಇರೋದದ ಕಾಳಗ ಕೊಡಿಕಾಕನ ನಂಗೆ ಇಲ್ಲಿ ಹೇಂಗೆ ನಿದ್ದೆ ಮಾಡಿಕೆ ಆದ್? ಹೇಳ್ ಕುಂಞಿ. ಎಂತ ಸುದ್ದಿ ತಂದಳ?

ಕರ್ಣ ಕಾಲ್‌ನ ಬುಡಲಿ ಕುದ್ದತ್. "ಇರ್ಳ್ ನಡ್ಯವ ಕಾಳಗಕ್ಕೆ ನನ್ನ ಒಪ್ಪಿಗೆ ಇಲ್ಲೆ

ಅಜ್ಜಪ್ಪ. ಆದರೆ ದುರ್ಯೋಧನನ ಮಾತ್ನ ಕೇಳದೆ ಇರಿಕೆ ಆತ್ಲೆ. ಅಧರ್ಮ ಯುದ್ಧಕ್ಕೆ ನೀವು ಒಪ್ಪಿಕಿಲ್ಲೇಂತ ನಂಗೆ ಗೊತ್ತಿತ್ತ್. ಅದ್ಕಾಗಿನೇ ನಾ ದುರ್ಯೋಧನ, ದುಶ್ಯಾಸನನೊಟ್ಟಿಗೆ ನಿಮ್ಮ ಹಕ್ಕಲೆ ಬಾತಿಲ್ಲೆ. ಈಗ ಯುದ್ಧ ನಿತ್ತುಟು. ನನ್ನ ಮೊನ್ಸ್‌ಲಿ ಕೊದ್ಯತಿದ್ದದರ ನಿಮ್ಮ ಹಕ್ಕಲೆ ಹೇಳದಿರಿಕೆ ಆದ್ಲೆ. ಅದರ ಹಾಂಗೆನೇ ಇಸಿಕಂಡರೆ ಇರ್‍ಳ್ ಇಡೀ ನಾ ನಿದ್ದೆ ಮಾಡಿಕಿಲ್ಲೆ. ಅದ್ಕಾಗಿ ನಿಮ್ಮಲ್ಲಿಗೆ ಬಂದ್ ಬುಟ್ಟೆ. ನಾಳೆ ಹಗ್ಲ್ ಇನ್ನೊಂದ್ ದೊಡ್ಡ ಕಾಳಗ ಕಾದ್‌ಟ್ಟೊಂತ ನಂಗೆ ಕಂಡದೆ. ನಿದ್ದೆ ಕೆಟ್ಟ್‌ದ್ ನಾ ಎಂತಾ ಕಾಳಗ ಕೊಡುಂವೆ? ಅದಕ್ಕಂತಳೇ ನಾ ಈಗ ಬಂದೆ. ದುರ್ಯೋಧನನೂ ಬಾವುದರ್‍ಲಿ ಇತ್ತ್. ನಾನೇ ಬೇಡಾಂತೇಳ್ದೆ. ನಿಮ್ಮ ಒಟ್ಟ್‌ಗೆ ಎಲ್ಲಾ ಹೇಳಿಕಂಡ್ ನಾ ಮೊನ್ಸುನ ಹಗ್‌ರ ಮಾಡೋಕೂಂತಳೇ ಬಂದೆ."

ಹೀಂಗೆ ತಮ್ಮ ಮೊನ್ಸ್‌ನ ಮಾತ್‌ನ ಹೇಳಿಕಂಬಕೆ ಬಾವುದರ್‌ಲಿ ಕರ್ಣ ಒಬ್ಬನೇ ಅಲ್ಲ. ಜೂವನಲಿ ಪ್ರತಿಯೊಬ್ಬನೂ ಸಾ ತಮ್ಮ ಮೊನ್ಸ್‌ನ ಗುಟ್ಟುನ ಬಿಚ್ಚಿ ಇಸಿ ಮಾರ್ಗದರ್ಸನ ಮಾಡುವ ಬುದ್ಧಿವಂತರ ಹುಡ್ಕಾಟಲಿ ಇದ್ದವೆ. ತಮ್ಮ ಜೂವನದ ಉದ್ದಕ್ಕೂ ಭೀಷ್ಮರ್ ಇನ್ನೊಬ್ಬಂಗೆ ನೀತಿನ ಹೇಳುವಂವ ಆಗಿ ಕೆಲ್ಸನ ಮಾಡ್ಡೋವು. ಅವ್ಕೆ ಮಾತ್ರ ತಮ್ಮ ಮೊನ್ಸ್‌ನ ಒಳಗೆ ನಡ್ಯತಿದ್ದದರ ಹೇಳಿಕಂಬಕೆ ಯಾರುನೂ ಸಿಕ್ಕಿತ್ಲೆ. ಈಗ ಕರ್ಣ ತನ್ನ ಮೊನ್ಸ್‌ಲಿ ಇದ್ದದರ ಹೇಳಿಕಂಬಕೆ ಬಂದುಟು.

ಮೆದ್ ಮಾತ್‌ಲಿ ಭೀಷ್ಮರ್ ಹೇಳ್ದೊ. "ಕರ್ಣಾ, ಯುದ್ಧಲಿ ನಡ್ದದರ ಅದರ್‌ಂದಾದ ಫಲಿತಾಂಶನ ತಿಳ್ಕಂಬ ಮೊನ್ಸ್ ನಂಗಿಲ್ಲೆ, ಕುಂಞೀ. ನೀ ಈಗ ದುರ್ಯೋಧನನ ಜತೆಲಿ ಬಾರದಿರಿಕಾಕನನೇ ನಂಗೆ ಗೊತ್ತಿತ್ ನಿಂಗೆ ಪಾಂಡವರ ಕೊಲ್ಲಿಕೆ ಮೊನ್ಸ್ ಇಲ್ಲೇಂತ. ತಮ್ಮ ಶಿಷ್ಯರ ಕೊಲ್ಲಿಕೆ ದ್ರೋಣಾಚಾರ್ಯರಿಗೆ ಹೇಂಗೆ ಮೊನ್ಸ್ ಬಾದು? ನೀವಿಬ್ಬೊರು ಮೊನ್ಸ್ ಇಲ್ಲದ ಮೊನ್ಸ್‌ಲಿ ಕಾಳಗ ಕೊಟ್ಟರೆ ಯುದ್ಧಲಿ ಜಯ ಹೇಂಗೆ ಸಿಕ್ಕುದು? ಯುದ್ಧಾಂತೇಳ್ರೆ ಯಾರಾದರೊಬ್ಬ ಸೋಲೊಕಲೆ? ಕುರುಸೇನೆ ಸೋತರೆ ನಂಗೆ ಬೇನೆ ಆದೆ. ಪಾಂಡೋವು ಸೋತರುನೂ ನಂಗೆ ಸಂಕಟ ಮರ್ಕ ಆದೆ. ಸಿಂಹಾಸನದ ರಕ್ಷಣೆ ಮಾಡುಂವಂವ ಆಗಿ ನಾ ಕೌರವರ ಒಟ್ಟಿಗೆ ಒಳೆ. ಸಿಂಹಾಸನಲಿ ಪಾಂಡೋವ್ಕೆ ಪಾಲ್ ಸಿಕ್ಕುದು ಧರ್ಮಾಂತ ನನ್ನ ಆತ್ಮ ಸಾಕ್ಷಿ ಹೇಳ್ದೆ. ಅಜ್ಜಪ್ಪಾಂತ ನನ್ನ ಎಲ್ಲೋವು ಗೌರವಂದ ನೋಡ್‌ವೆ. ನನ್ನ ಮೊನ್ಸ್‌ನ ಅರ್ತ ಮಾಡಿಕಂಬೋವು ಯಾರುನೂ ಇಲ್ಲೆ."

ಕರ್ಣ ತಲೆದೂಂಗಿತ್. "ನನ್ನದ್ ನಿಮ್ಮದರ್‌ಂದಳೂ ಇಕ್ಕಟ್ಟ್ ಸ್ತಿತಿ ಅಜ್ಜಪ್ಪಾ. ರಾಜಿ ಪಂಚಾತ್ಕೆಗೇಂತ ಬಂದ ಕೃಷ್ಣ ಗುಟ್ಟ್‌ಲಿ ನಾ ಹುಟ್ಟಿದ ಕತೆನ ತಿಳ್ಸಿಕಾಕನನೇ ಯುದ್ಧದ ಹಣೆಬರ ತಿಳ್ದ್ ಹೋತ್. ನೀವು ಮತ್ತೆ ಗುರು ದ್ರೋಣರ್ ಪಾಂಡವರ ಮೇಲೆ ಪ್ರೀತಿ ಇಸಿದೊವು. ಪಾಂಡವರ ಕೊಲ್ಲಿಕೆ ನಿಮ್ಮ ಇಬ್ಬೋರ್‌ಂದ ಯಾವ ಸಾಯನೂ ಸಿಕ್ಕಿಕೆಲ್ಲೇಂತ ನಂಗೆ ಯಾಗೊಳೋ ತಿಳ್ದೋತ್. ಕೃಷ್ಣಂದಾಗಿ ನಾನೂ ನಿಮ್ಮ ಪಾಲ್‌ಗೆ ಸೇರ್ದೆ. ಕುಂತಿನ ಹೊಟ್ಟೆಲಿ ಹುಟ್ಟುವ ಬದ್ಲ್ ಈ ಲೋಕ ನಂಬುವ ಹಾಂಗೆ ನಾ ನಿಜಲಿ ರಾದೆಯ ಮಂಜನೇ ಆಕಾಗಿತ್ತ್. ಆಗ ಯುದ್ಧದ ಹಣೆ ಬರ ಬೇರೆನೇ ಆಗ್ತಿತ್ತ್."

ಕರ್ಣ ಹಂಞ ಹೊತ್ತ್ ಮಾತ್‌ನ ನಿಲ್ಸಿತ್. ಮತ್ತೆ ಸುರುಮಾಡ್ತ್. "ಅಜ್ಜಪ್ಪಾ, ನಿಮ್ಮ

ಹಾಂಗೆ ನಾ ಪರಶುರಾಮರ ಶಿಷ್ಯ. ದ್ರೋಣರ್‌ನೂ ಪರಶುರಾಮರ ಶಿಷ್ಯರ್. ದ್ರೋಣಾಚಾರ್ಯರ್ ಅರ್ಜುನಂಗೆ ಎಲ್ಲ ವಿದ್ಯೆನನೂ ಹೇಳಿಕೊಟ್ಟೊ. ಪರಶುರಾಮರ್ ನಂಗೆ ಎಲ್ಲಾ ಕಲ್ಸಿತಿಲ್ಲೆ. ಶಿಷ್ಯ ಆದಂವ ಗುರುಗೆ ಉತ್ತೇಜನ ಕೊಟ್ಟರೆ, ಗುರು ಅವಂಗೆ ಎಲ್ಲನೂ ಕಲ್ಸಿದೆ. ನಾ ಕೆಳ ಜಾತಿಯಂವಾಂತ ಆಗ ನಾ ನರ್‌ಶಿತಿದ್ದೆ. ಗುರುಗಳೊಟ್ಟಿಗೆ ಎಲ್ಲೋವೂ ಇರುವ ಹಾಂಗೆ ಇರಿಕೆ ಆಗ ನಂಗಾತ್ಲೆ. ಶೂದ್ರರಿಗೆ, ಕಾಡ್ ಮೊಂಯಿಂಸರಿಗೆ ಹೆಣ್ಮಕ್ಕಳಿಗೆ ಧನುರ್ವಿದ್ಯೆ ಹೇಳಿಕೊಡಿಕೆ ಆಗದ್‌ಂತ ಆಗ ಎಲ್ಲೋವು ಹೇಳ್ತಿದ್ದೊ. ಪರಶುರಾಮರ ಆಗ ನಾ ನಿಜಲಿ ಅರ್ತ ಮಾಡಿಕಂಡತ್ಲೆ. ಅವು ಜಾತಿ ಪದ್ಧತಿನ ದ್ವೇಷ ಮಾಡೋವೂಂತ ಆಗ ನಂಗೆ ಗೊತ್ತಿತ್ಲೆ. ನಾ ತಲೆನ ಬೋಳ್ಸಿಕಂಡ್, ಹಿಂದೆ ಒಂದು ಜುಟ್ಟು ಇಸಿ ಜನಿವಾರ ಹಾಕಿಕಂಡ್, ನಾ ಒಬ್ಬ ತಬ್ಬೆಲಿ ಹಾರಂವಾಂತ ಅವರ ನೊಂಬುಸಿ ಬಿಲ್ಲ್ ವಿದ್ಯೆನ ಅವರ್‌ಂದ ಕಲ್ಯತಿದ್ದೆ. ನನ್ನ ಮೈಕಟ್ಟ್, ನಡೆ, ನುಡಿ, ಬಿಲ್ಲ್ ವಿದ್ಯೆನ ಬೇಗ ಬೇಗ ಕಲ್ಯೋದರ ನೋಡಿದ ಪರಶುರಾಮರಿಗೆ ನನ್ನ ಹುಟ್ಟ್‌ನ ಬಗೆ ಸಂಸಯ ಬಾಕೆ ಸುರಾತ್. ಅಕೆರಿಗೆ ಅವು ನನ್ನ ಪ್ರಸ್ನೆ ಮೇಲೆ ಪ್ರಸ್ನೆ ಹಾಕಿ ಕೆದ್ಕಿ ಕೆದ್ಕಿ ಕೇಳ್ದೊ. ಹಸ್ತಿನಾವತಿನ ಸೂತ ಆದ ಅಧಿರಥನ ಸಾಂಕ್ ಮಂಜ ನಾ ಎಂತ ಹೇಳ್ದೆ. ನನ್ನ ನಿಜವಾದ ಅಪ್ಪ, ಅವ್ವ ಯಾರ್‌ಂತ ನಂಗೆ ಗೊತ್ತಿಲ್ಲೇಂತೇಳ್ದೆ. ಸುರುಲಿ ನಾ ಸುಳ್ಳು ಹೇಳ್ದರ ನೆಂದ್ ಅವು ಸಿಟ್ಟ್‌ಗೆದ್ದ್ ಆಶ್ರಮನ ಬುಟ್ಟ್ ಹೋಕೆ ಹೇಳ್ದೊ. ನಾ ಅವರ ಕಾಲ್‌ಗೆ ಬಿದ್ದ್, ನನ್ನ ಸಾಕಿದೊವು ಸೂದ್ರರ್‌ಂತೇಳ್ವ ಕಾರ್ಣಕ್ಕೆ ನಂಗೆ ಬಿಲ್ಲ್ ವಿದ್ಯೆನ ಕಲ್ಸದೆ ಇರ್ಬೋಡೀಂತ ಬೇಡಿಕಂಡೆ. ಅವು ಕಡೆಗೆ ಸಮ್ಮಾನಲಿ ಶಸ್ತ್ರ ವಿದ್ಯೆ ಹೇಳಿಕೊಟ್ಟೊ. ಅಕೆರಿಗೆ ನಿನ್ನ ವಿದ್ಯೆ ಎಲ್ಲಾ ಕಲ್ತಾತ್‌ಂತ ಹೇಳಿ ನನ್ನ ಆಶ್ರಮಂದ ಕಳ್ಸಿಕೊಟ್ಟೊ. ನಂಗೆ ಅವರ್‌ಂದ ಎಲ್ಲನನೂ ಕಲ್ಯವ ಭಾಗ್ಯ ಇತ್ಲೆ."

ಭೀಷ್ಮರಿಗೆ ಪರಶುರಾಮರ ಗುಣ ದೋಸ ತಿಳ್ದಿತ್ತ್. ಜಾತಿ ಪದ್ಧತಿನ ಪುರೋಯ್ತರ್‌ಗ ಅವರ ಬೇಳೆ ಬೇಯಕೇಂತ ಮಾಡ್ವ ನಾಟಕಾಂತ, ತಾನು ಸಣ್ಣದಿರಿಕನ ಗುರುಗ ಹೇಳಿಕೊಡ್ತಿದ್ದದ್ ಭೀಷ್ಮರಿಗೆ ನೆಂಪಾತ್. ಕ್ಷತ್ರಿಯರ ಹಂಕಾರನ ಅವು ಒಪ್ಪುತಿತ್ಲೆ. ಕ್ಷತ್ರಿಯೋವ್ಕೆ ಅವು ಶಾಸ್ತ್ರ ವಿದ್ಯೆನ, ಬಿಲ್ವಿದ್ಯೆನ ಹೇಳಿ ಕೊಡ್ತಿತ್ಲೇಂತ ಅವು ಹೇಳ್ತಿದ್ದೊ. ಆದರೆ ಸಂತನು ಚಕ್ರವರ್ತಿಗಳ ಒಳ್ಳೆ ಗುಣಕ್ಕೆ ಸೋತ್ ಹೋಗಿ ಸಣ್ಣ ಹೈದ ದೇವವ್ರತನ ಶಿಷ್ಯನನ್ನಾಗಿ ಮಾಂಡಿಕಂಡೊ. ಜಾತಿಪದ್ಧತಿ ಅಳ್ದ್ ಹೋತ್ಲರೆ ಆರ್ಯಾವರ್ತ ಮತ್ತೆ ದಕ್ಷಿಣಾ ಪಥನ ಒಂದ್ ಗೂಡ್ಸಿ ಭರತ ಖಂಡನ ಮಾಡಿಕೆ ಆಕಿಲ್ಲೇಂತ ಅವು ಹೇಳ್ತಿದ್ದೊ. ಈಗ ಅವು ಎಲ್ಲಿರ್‌ವೋ?

ಒಂದು ಉದ್ದದ ಉಸ್ರ್‌ನ ಬುಟ್ಟ್‌ದ್ ಭೀಷ್ಮರ್ ಹೇಳ್ದೊ. "ಕುಂಞೀ, ನಿನ್ನವಿದ್ಯೆ ಅರ್ಜುನಂದ ಕಮ್ಮಿಂತ ನೀ ಏಕೆ ತಿಳ್ದಿಯ? ಎದ್ರೆದ್ರ್ ಹೊರಾಡ್ರೆ ಅರ್ಜುನನ ಸೋಲ್ಸುವ ಸಾಮರ್ತ್ಯ ನಿಂಗೆ ಉಟ್ಟೂಂತ ನಂಗೆ ಗೊತ್ತುಟು. ನಿನ್ನ ನಿಜವಾದ ಸಾಮರ್ತ್ಯ ಲೋಕಕ್ಕೆ ಇಸ್ಟರ ಮುಟ್ಟ ತಿಳ್‌ತ್ಲೆ. ಅಂದ್ ದ್ರೌಪದಿನ ಸೊಂಯಂವರ ಮಂಟಮೆಲಿ, ದುರ್ಯೋಧನಂಗಾಗಿ ಮತ್ಸ್ಯ ಯಂತ್ರನ ಮುರ್ಯಕೆ ನೀ ಎದ್ರಿಕನ ಸೂತನ ಮಂಜನ

ನಾ ಮೊದ್ವೆ ಆಕಿಲ್ಲೇಂತ ಆ ದ್ರೌಪದಿ ಹೇಳ್ತ್ ಗಡ ಅಲ್ಲನೋ? ಹಿಂದೆ ಉತ್ತರ ಗೋಗ್ರಹಣ ಸಂದರ್ಭಲಿ ಜಾಣ ಅರ್ಜುನ ಕೂಟ ಸನ್ಮೋಹಿನೀ ವಿದ್ಯೆಂದ ಅಂವನ ಕೆಲ್ಸನ ತೀರ್ಸಿಕಂಡತ್. ನಿನ್ನ ನಿಜಲಿರುವ ತಾಕತ್ತ್ ಏನ್‌ಂತ ಲೋಕಕ್ಕೆ ತಿಳಿವ ಸಮಯ ಈಗ ಬಂದುಟು."

ಕರ್ಣ ಉಸ್ರು ಬುಟ್ಟತ್. "ಕುರುಕ್ಷೇತ್ರಲಿನಂಗೆ ಅಂತಾ ಒಂದ್ ಕಾಲ ಬಾದೂಂತ ನಾ ತಿಳ್ಕಂಡಿದ್ದೆ ಅಜ್ಜಪ್ಪಾ. ಆದರೆ ನನ್ನ ಹುಟ್ಟ್‌ನ ಗುಟ್ಟುನ ಕೃಷ್ಣ ತಿಳ್ಸಿದ ಮೇಲೆ ಅದುನೂ ತೊಪ್ಪಿ ಹೋತ್."

ಭೀಷ್ಮರ್ ತಕ್ಷಣ ವಿಷಯ ಬದ್ಲಾಯ್ಸಿದೊ. "ಕರ್ಣ ಈ ಹೊತ್ತಲ್ಲದ ಹೊತ್ತ್‌ಲಿ ನೀನನ್ನಲ್ಲಿಗೆ ಬಂದ್ ನಿನ್ನ ಎದೆಲಿ ಹುದ್ಗಿದ ಮಾತ್‌ನ ಹೇಳಿ ನಿನ್ನ ಎದೆನ ಹಗ್ರಗೊಳ್ಸಿಯಳ. ಸರಿ ಕುಂಞೀ ಹೇಳ್. ಇಂದ್‌ನ ಇರ್‌ಳ್ ಯುದ್ಧ ನಿತ್ತದ್ ಹೇಂಗೆ?"

ಕರ್ಣ ನಡ್ದದರ ಹೇಳ್ದೆ. "ಅದರನಾ ಆಗಳೇಹೇಳಕಾಗಿತ್ತ್ ಅಜ್ಜಪ್ಪಾ. ಮಾತ್ ಎಲ್ಲಿಂದ ಎಲ್ಲಿಗೋಹೋತ್. ಪಾಂಡೋವ್ಕೆ ತಿಳಿಯದಾಂಗೆ ಇರ್‌ಳ್ ಅವರ ಪಾಳ್ಯಕೆ ಹೊಕ್ಕ್ ಒಬ್ಬ ಪಾಂಡವನ ಆದರೂ ಕೊಲ್ಲೊಕೂಂತೆ ದುರ್ಯೋಧನ ಏಚನೆ ಮಾಡಿತ್ತ್. ಆದರೆ ಅಜ್ಜಪ್ಪಾ, ನಾವು ಗುಟ್ಟಾಗಿ ಮಾಡ್ದ ಸಂಚ್ ಪಾಂಡೋವ್ರ ಗೂಢಾಚಾರರ್ಗೆ ಹೇಂಗೋ ತಿಳ್ದೋಗಿತ್ತ್. ಪಾಂಡೋವು ಕುರುಕ್ಷೇತ್ರಲಿ ದೊಂದಿ ಹೊತ್ತಿಸಿಕಂಡ್ ಅದರ ಬೊಳ್ಪುಲಿ ಯುದ್ಧಕ್ಕೆ ತಯಾರಾಗಿ ನಮ್ಮ ಕಾದ್‌ಕಂಡಿದ್ದೊ. ನಾವು ಅವರ ಮೇಲೆ ಮುಗಿಬಿದ್ದೊ. ದೊಡ್ಡ ಕಾಳಗ ನಡ್ದ್‌ಹೋತ್. ಇರ್‌ಳ್‌ನ ಯುದ್ಧಲಿ ಪಳ್ಗಿದ ಘಟೋತ್ಕಚ ನಮ್ಮ ಮೇಲೆ ಕಾಳಗ ಕೊಟ್ಟ್ ನಮ್ಮ ಸೇನೆಗೆ ತುಂಬಾ ನಸ್ಟನ ಮಾಡ್ತ್."

ಮಹಾವೀರ ಘಟೋತ್ಕಚ ಯುದ್ಧ ರಂಗಲಿ ಎಸ್ಟೋ ಸರ್ತಿ ತನಿಗೆ ಎದ್ರಾಗಿ ಯುದ್ಧ ಮಾಡ್ದ್ ಭೀಷ್ಮರಿಗೆ ನೆಂಪಾತ್. ಅಂವ ಭೀಮನ ಹೆಣ್ಣ್ ಹಿಡಿಂಬೆನ ಮಂಙ. ದ್ರೌಪದಿ ಸೊಂಯಂವರ ನಡ್ಯಕೆ ಮುಂದೆ ವಾರಣಾವತಲಿ ದುರ್ಯೋಧನ ಅರ್ಕ್‌ನ ಅರಮನೆನ ಮಾಡಿ, ಧೃತರಾಷ್ಟ್ರನ ಕಡೆಂದ ಪಾಂಡವರ ಒಪ್ಪುಸಿ ಅಲ್ಲಿಗೆ ಕಳ್ಸುದರ್ಲಿ ಗೆದ್ದತ್. ದುರ್ಯೋಧನನ ಕೆಟ್ಟ ಬುದ್ಧಿನ ಸುಳಿವು ಸಿಕ್ಕಿದ ಪಾಂಡೋವು ಅರ್‌ಕ್‌ನ ಮನೆಗೆ ಅವೇ ಕಿಚ್ಚಿ ಕೊಟ್ಟ್‌ದ್ ಕಾಡ್‌ಲಿ ಅಡಿಂಗಿಕಂಡಿದ್ದೊ. ದುರ್ಯೋಧನ ಪಾಂಡೋವು, ಕುಂತಿನೊಟ್ಟಿಗೆ ಅರ್‌ಕ್‌ನ ಮನೆಲಿ ಬೆಂದ್ ಹೋದೋಂತ ಕುಸಿಪಟ್ಟಿತ್ತ್. ಕಾಡ್‌ಲಿ ಪಾಂಡೋವು ಕಂಡ ಹಿಡಿಂಬೆ ಭೀಮಸೇನನ ನೋಡಿ ಮೋಹಗೊಂಡಿತ್ತ್. ಅದರ ಅಣ್ಣ ಹಿಡಿಂಬ ಭೀಮನೊಟ್ಟಿಗೆ ಮಲ್ಲಯುದ್ಧ ಮಾಡಿ ಸತ್ತತ್. ತಬ್ಬೆಲಿ ಆದ ಹಿಡಿಂಬೆನ ಕುಂತಿ ಹೇಳ್ದ ಹಾಂಗೆ ಭೀಮ ಮೊದ್ವೆ ಆತ್.

ದಿಕ್ಕ್ ದೆಸೆ ಇಲ್ಲದ ಪಾಂಡೋವ್ಕೆ ಹಿಡಿಂಬೆಂದ ನೆಲೆ ಸಿಕ್ಕಿತ್. ದ್ರೌಪದಿ ಸೊಂಯಂವರ ಆದ ಮೇಲೆ ಯುಧಿಷ್ಠಿರಂದ ಭೀಷ್ಮರ್ಗೆ ಈ ಇಸಯ ತಿಳ್ತ್. ಪಾಂಡೋವು ಇಂದ್ರಪ್ರಸ್ಥಲಿ ಇರಿಕಾಕನ ಹಿಡಿಂಬೆ ಅಲ್ಲಿಗೆ ಬಾತಿಲ್ಲೆ. ಅದ್ಕೆ ಕಾಡ್‌ನ ಬುಟ್ಟ್‌ದ್ ಎಲ್ಲಿಗೆನೂ ಹೋಕೆ ಇಸ್ಟ ಇತ್ಲೆ. ಅದರ ನೆಂಪಾಕನ ಎಲ್ಲಾ ಭೀಮನೇ ಕಾಡ್‌ಗೆ ಹೋಗಿ ಬುಡ್ತಿತ್ತ್.

ಘಟೋತ್ಕಚಂಗೆ ಅಪ್ಪನೇ ಗುರು. ಅಪ್ಪಂದ ಯುದ್ಧ ವಿದ್ಯೆನ ಅವ್ವಂದ ಬೇಟೆ ಆಡ್ದರ ಕಲ್ತತ್. ಅಂಗಸಾಧನೆ ಮಾಡಿ ಜಗಜಟ್ಟಿಂತ ಕರ್ಸಿಕಂಡತ್. ಅಪ್ಪನನೇ ಹೆಗ್ಲ್ ಮೇಲೆ ಕುದ್ರಿಸಿಕಂಡ್ ಎಲ್ಲಿಂದ ಎಲ್ಲಿಗೆ ಬೇಕರೂ ಹೋಗುವಸ್ಟ್ ಸಕ್ತಿವೊಂತ ಆತ್. ಸಣ್ಣ ಪ್ರಾಯಲೇ ಅಂವನ ನೋಡಿದ್ ಭೀಷ್ಮರ್ ಸಂತೋಸಪಟ್ಟಿದ್ದೊ. ಬೇರೆ ಬೇರೆ ಕುಲದ ಅಪ್ಪ-ಅವ್ವಂದಾಗಿ ಗಟ್ಟಿ ಮುಟ್ಟಾದ ಸುಂದರ ಪುರ್ಸ ಅಂವ ಆಗಿತ್ತ್. ಅಂವನ ಇಸಯ ಎಲ್ಲಾ ತಿಳ್ದ ಭೀಷ್ಮರ್ ಅಂವನ ಮೇಲೆ ತುಂಬಾ ನಂಬಿಕೆ ಇಸಿದ್ದೊ. ಯುದ್ಧ ಸುರಾಕೆ ಮುಂದೆ ಒಂದಲ್ಲ ಒಂದ್ ದಿನ ಅಭಿಮನ್ಯು ಕುರುಸಾಮ್ರಾಟ್ ಆದೆ, ಆಗ ಅಂವಂಗೆ ಆಧಾರಕಂಬ ಆಗಿ ಘಟೋತ್ಕಚ ನಿತ್ತದೆ. ಆರ್ಯಾವರ್ತ ದಕ್ಷಿಣಾಪಥ ಎರ್ಡರ ಸೇರ್ಸಿ ಇಡೀ ಭರತ ಖಂಡನ ಸ್ಥಾಪನೆ ಮಾಡ್ವ ಪರಶುರಾಮರ ಕನ್ಸ್‌ನ ಇವಿಬ್ರೊರು ಮಾಡಿ ತೋರ್ಸುವೆ ಎಂತ ನೆನ್ಸಿಕಂಡಿದ್ದೊ. ಅಭಿಮನ್ಯುನ ನಿನ್ನೆ ಆ ದುಷ್ಟರ್ ಮೋಸಂದ ಕೊಂದೊ. ಮಹಾವೀರ ಘಟೋತ್ಕಚನ ಏನ್ ಮಾಡಿ ಬುಟ್ಟೊಳೊನೋ?.

ಕರ್ಣ ಮುಂದರ್ಸಿತ್, "ಭೀಮಾರ್ಜುನರ್ ತುಂಬಾ ಬೊಚ್ಚಿದ್ದೊ. ದುರ್ಯೋಧನಂಗೆ ಗೆಲುವಾದೇಂತ ಘಟೋತ್ಕಚಂಗೆ ಗೊತ್ತಾತ್. ಅಂವ ತನ್ನ ಕಾಡ್‌ಮೊಂಯಿಂಸರ ಪಡೆನ ಹುರ್‌ದುಂಬಿಸಿ, ನಮ್ಮ ಮೇಲೆ ಕಾಳಗಕ್ಕೆ ಬಾತ್. ಅವು ಇರ್‍ಳ್‌ನ ಕಾಳಗಲಿ ಬಾರೀ ಗಟ್ಟಿಗರ್. ಅವ್ಕೆ ಹೋಕೆ ಬಾಕೆ ಬೊಳ್ಪು ಬೇಕಾಗಿತ್ಲೆ. ನಮ್ಮ ಸೇನೆಲಿ ಗಲಾಟೆ ಸುರಾತ್. ದೀಪನ ಮುತ್ತುವ ಹಾಂತೆಗಳಾಂಗೆ ನಮ್ಮ ಕಾಲಾಳ್‌ಗ, ಯುದ್ಧಲಿ ಪಳ್ಗಿದೊವು ರಣರಂಗಲಿ ಬಿದ್ದ್ ಒದ್ದಾಟಲಿ ಹೊಣ್ಕಿದೊ. ಕಾಲ್‌ಗಳ ಎಡೆಲಿ ಸಿಕ್ಕಿ ಎಸ್ಟೋ ಜನಂಗ ಸತ್ತ್ ಹೋದೊ. ಪಾಂಡೋವರಲ್ಲಿ ಒಬ್ಬನಾದರ್ ಮುಗ್ಸೋಕೂಂತ ಹಟಲಿ ಕಾಳಗಕೊಟ್ಟ ನಮ್ಮ ಸೈನ್ಯ ಹಿಂದೆ ಸರ್‍ದೊ."

ಭೀಷ್ಮರ್ ಸಮ್ದಾನಲಿ ಉಸ್ರ್ ಬುಟ್ಟೊ. "ಒಳ್ಳದಾತ್, ಇರ್‍ಳ್‌ನಡ್ಯವ ಕಾಳಗ ಹಾಂಗಾದರೂ ನಿತ್ತ್ ಹೋತಲೇ?"

ಕರ್ಣ ನಿಟ್ಟುಸ್ರ್ ಬುಟ್ಟ್‌ದ್ ಹೇಳ್ತ್, "ನಿತ್ತ್ ಹೋಗ್ತಿದ್ದರೆ ಒಳ್ಳದಾಗ್ತಿತ್ತ್ ಅಜ್ಜಪ್ಪಾ. ದುರ್ಯೋಧನ ಸಿಟ್ಟ್‌ಲಿತ್ತ್. ಗುರು ದ್ರೋಣರ ಬಿರ್ಸ್‌ನ ಮಾತ್‌ಲಿ ಬೊಯ್ತ್. ಪಾಪ, ಅವಾದರ್ ಏನ್ ಮಾಡಿವೆ? ಪ್ರಾಯ ಹೋದ ದ್ರೋಣರಿಗೆ ಇರ್‍ಳ್ ಎಂತದೂ ಕಾಂಬತಿತ್ಲೆ. ಎಡ್ದ ಕೈ ಹೆಬ್ಬೆಟ್ಟ್‌ನ ನಿನ್ನೆ ಅಭಿಮನ್ಯು ಕತ್ರಿಸಿ ಹಾಕುಟಲೇ? ಗಾಯಕ್ಕೆ ಮೊದ್ದ್ ಪೂಜಿಕೂ ಅವ್ಕೆ ಪುರ್ಸೋತಿತ್ಲೆ. ಅದ್ ತುಂಬಾ ಬೇನೆ ಕೊಡ್ತಿತ್ತ್. ಅವು ಬುಟ್ಟ ಬಾಣಗ ಗುರಿತೊಪ್ಪಿದ್ ಎತ್ತೆತಳೋ ಬಿದ್ದ್ ಹಾಳಾಗ್ತಿತ್ತ್. ನಾವು ಹಿಂದೆ ಸರ್‍ದೊ. ಘಟೋತ್ಕಚ ಹುಂಕಾರ ಹಾಕಂಡ್ ನಮ್ಮ ಅಟ್ಟಿಸಿಕಂಡ್ ಬಾತಿತ್ತ್. ಹೆದ್ರಿಕೆಂದ ಗಡಗಡ ನಡ್ಗ್‌ತಿದ್ದ ದುರ್ಯೋಧನ ಹೇಂಗಾದರ್ ಮಾಡಿ ಅಂವನ ಮುಗ್ಸಿಕೆ ಆಜ್ಞೆ ಮಾಡ್ತ್. ಆ ನಿಮ್ಸಲಿ ನಂಗೆ ಅಂವ ನನ್ನ ತಮ್ಮ ಭೀಮನ ಮಂಜಾತೇಳ್ವ ಮೋಹ ಆವರ್ಸಿಕಂಡಿತ್ತ್. ಆದರೆ ಅದ್ ಘಟೋತ್ಕಚಂಗೆ ಹೇಂಗೆ ಗೊತ್ತಾದೆ? ವ್ಯಾಮೋಹಕ್ಕೆ ಒಳಗಾದ ನಾನೇ ಅಂವಂದ ಸಾಯುವಾಂಗೆ ಆದೆ. ಬೇರೆ ದಾರಿನೇ ಕಂಡತ್ಲೆ. ಪರಶುರಾಮರ್‌ಂದ ಕಲ್ತದರ ಎಲ್ಲಾ

ನೆಂಪು ಮಾಡಿಕಂಡ್ ಒಂದರ ಹಿಂದೆ ಒಂದು ಬಾಣನ ಬುಟ್ಟೆ. ಘಟೋತ್ಕಚ ತನ್ನ ಪಡೆನೊಟ್ಟಿಗೆ ನೆಲಕ್ಕೆ ಬೀತ್. ಇಲ್ಲಿಗೆ ಸಾಕ್ಂತ ನಾ ಕುರುಸೇನೆಗೆ ಅಪ್ಪಣೆ ಮಾಡ್ದೆ. ಕಾಳಗ ನಿತ್ತತ್."

ಕರ್ಣನ ದನಿಲಿ ಹೇಳಿರೆ ಆಗದಸ್ಟ್ ಬೇಜಾರ ಇರುದರ ಭೀಷ್ಮರ್ ಗುರ್ತಿಸಿದೊ. ಅವುನೂ ಬೇಜಾರಲಿ ಮುಣ್ಂಗಿದೊ. ನಿನ್ನೆ ಅರ್ಜುನನ ಮಂಜ ಸತ್ತತ್. ಇಂದ್ ಭೀಮನ ಮಂಜನ ಕೊಂದೊ. ನಾಳೆ ಯಾರೋ? ಅಭಿಮನ್ಯು ಸತ್ತದಕ್ಕೆ ಅರ್ಜುನ ಜಯದ್ರಥನ ಬಲಿ ತಕಂಡತ್. ಈಗ ಘಟೋತ್ಕಚನ ಸಾವುಗೆ ಭೀಮ ಯಾರ್ನ ಬಲಿ ತಕಂಡ್‌ದೆನೋ? ಈ ಮಹಾಯುದ್ಧ ದೊಡ್ಡವರ್ಂದ ಮುಂದೆ ಸಣ್ಣ ಪ್ರಾಯದವರ್‌ನನೇ ಬಲಿ ತಕ್ಕಂಡದೆ. ಹಂದಾಡಿಕಂಡಿರ್ವ ಕುರು ಸಾಮ್ರಾಜ್ಯದ ಅಡಿಗಲ್ಲ್‌ನ ಗಟ್ಟಿಗೊಳ್ಳೋವು ಒಬ್ಬೊಬ್ಬನೇ ನೆಂಪಾಗಿ ಹೋದವೆ. ಎದೆಗೆ ಹೆಟ್ಟಿದ ಈ ಬಾಣ ಬಿದ್ದ್ ಹೋಗಿ ಒಮ್ಮೆ ನನ್ನ ಜೂವ ಹೋದರೆ ಸಾಕಾಗಿತ್ತ್.

ಭೀಷ್ಮರ್ ಸುಮ್ಮಂಗಿದ್ದದರ ಅರ್ತ ಮಾಡಿಕಂಡ ಕರ್ಣ ಎದ್ದ್ ನಿತ್ತತ್. "ಅಜ್ಜಪ್ಪಾ, ನಾಳೆ ಏನಾದೆನೋಂತ ನಂಗೆ ಹೆದ್ರಿಕೆ ಆದೆ. ಅದ್ ನಾ ಸತ್ತ್‌ಹೋನೇಂತ ಹೇಳ್ವ ಹೆದ್ರಿಕೆ ಅಲ್ಲ. ನಾಬೊದ್ಕಿದ್ದ್‌ದ್ನೂ ದುರ್ಯೋಧನಂಗೆ ಸಾಯಮಾಡಿಕೆ ನನ್ನಂದ ಆತ್ಲೇಲೇಂತೇಳ್ವ ಏಚನೆ. ನಮ್ಮ ದಿನಗ ಮುಗ್ದ್ ಹೋತ್ ಅಜ್ಜಪ್ಪಾ. ಇಲ್ಲೇ ಎಲ್ಲಿನೋ ಯಮ ಕಾದ್ ಕೊಂಡಿರ್ದೂಂತ ಅನ್ಬವ ಆದೆ. ಆದರೆ ನನ್ನಂದ ಮುಂದೆನೇ ಯಾವ ಪಾಪ ಮಾಡದ ಈ ಕೂಸುಗ ಬಲಿ ಆದರೆ ನಂಗೆ ಸೈಸಿಕೆ ಆಲ್ಲೆ."

ಭೀಷ್ಮರಿಗೆ ಏನ್ ಮಾತ್ನ ಹೇಳಿ ಕರ್ಣನ ಸಮ್ದಾನ ಮಾಡಕೂಂತ ಆ ಕ್ಷಣಲಿ ಗೊತ್ತಾತ್ಲೆ. ಗೂಢಾಚರ ಅಭಿಮನ್ಯು ಸತ್ತದರ ವಿವರವಾಗಿ ಭೀಷ್ಮರಿಗೆ ವರದಿ ಒಪ್ಪಿಸಿಟ್ಟ್. ನಿನ್ನೆ ಅಭಿಮನ್ಯುನ ಬಿಲ್ಲ್ ಮುರ್ಯದೆ ಹೋತಿದ್ದರೆ ದುಶ್ಶಾಸನನ ಮಂಜಂದ ಅಂವನ ಕೊಲ್ಲಿಕೆ ಆತಿತ್ಲೆ. ಹಿಂದೆಂದ ಬಾಣ ಬುಟ್ಟ್‌ದ್ ಅಭಿಮನ್ಯುನ ಬಿಲ್ಲ್‌ನ ಮುರ್ದ ಕರ್ಣ ಅಂವನ ಸಾವುಗೆ ಕಾರ್ಣ ಆಗಿತ್ತ್. ದುರ್ಯೋಧನನ ಆಜ್ಞೆನ ಕರ್ಣ ದಿಕ್ಕಾರ ಮಾಡ್ವ ಹಾಂಗಿಲ್ಲೆ. ಇಂದ್ ಘಟೋತ್ಕಜನ ಎದ್ರೆದ್ರ್ ಕಾಳಗಲಿ ಕರ್ಣ ಕೊಂದುಟು ಅದಕ್ಕೆ ಸಾ ದುರ್ಯೋಧನನ ಆಜ್ಞೆನೇ ಕಾರ್ಣ. ತನ್ನ ಇಸ್ಟಕ್ಕೆ ಇರೋದ ಆಗಿ ತಮ್ಮಂದರ ಮಕ್ಕಳ ಮರಣಕ್ಕೆ ಕಾರ್ಣ ಆಗಿ ಈಗ ಅಂವ ಮೊನ್ಸ್‌ಲೇ ಮೊರ್ಗಿದೆ. ಇದರೆಲ್ಲಾ ನನ್ನೊಟ್ಟಿಗೆ ಹೇಳಿಕಂಡ್ ಮೊನ್ಸ್‌ನ ಹಗ್ರ ಮಾಡಿಕಂಡದೆ. ಅಭಿಮನ್ಯು, ಘಟೋತ್ಕಜರ ಸಾವುಂದಾಗಿ ಯುದ್ಧ ನಿಲ್ತಿದ್ದರೆ, ಇಂವನ ಪಾಪಕೃತ್ಯಕ್ಕೆ ಸಮರ್ತನೆ ಆದರೂ ಇರ್ತಿತ್ತ್. ಇನ್ನ್ ಇಂವಂಗೆ ಒಳ್ದದ್ ಒಂದೇ ದಾರಿ ಬೊದ್ಕಿರುವಸ್ಟ್ ದಿನ ಆಗಾಗ ಕಾಟಕೊಡುವ ಪಾಪ ಪ್ರಜ್ಞೆನ ನೆಂಪು ಮಾಡುದು.

ಭೀಷ್ಮರ್ ಸಮ್ದಾನ ಮಾಡುವ ಸೊರಲಿ ಹೇಳ್ದೊ. "ಕರ್ಣಾ, ರಾಜಕೀಯಲಿ ಮತ್ತೆ ಕಾಳಗಲಿ ಸಂಮಂದಗಳ ಬಗ್ಗೆ ಏಚನೆ ಮಾಡಿಕೆ ಆಗದ್. ನಾಳೆ ಯುದ್ಧ ಇನ್ನೂ ಬಿರ್ಸ್‌ಲಿ ನಡ್ದದೆ. ಸುಂಮಂಗೆ ಚಿಂತೆ ಮಾಡಿ ಧೈರ್ಯ ಕಳ್ಕಂಬಡ. ಹೋಗಿ ದಣ್ಕೆ ತೀರ್ಸಿಕ".

ಕರ್ಣ ಹಾಂಗೇ ಬೊಗ್ಗಿದ್ ನಮಸ್ಕಾರ ಮಾಡಿ ಬಿಡಾರಂದ ಹೊರಗೆ ಹೋತ್. ಭೀಷ್ಮರ ನಿದ್ದೆ ಪೂರಾ ಹಾರಿಹೋತ್. ಆ ಮಾತ್‌ಗ ನೆಂಪುಗೆ ಬಾಕೆ ಸುರಾತ್........ "ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೀವ ಆಗಿ ನಿನ್ನ ಕೊಂದನೆ..."–

*****

## ಹೋಳು - ೦೯

# ಎಲ್ಲಿ ಸಿಕ್ಕುದು ಈ ಸುಕ?

ಅಂಬೆಗೆ ದಿಕ್ಕ್ ಕಾಣದಾಂಗಾತ್. ಇನ್ನ್ ಹೋವುದಾದರ್ ಎಲ್ಲಿಗೇಂತ ಕಾಂಬತಿತ್ಲೆ. ಕಾಶಿಂದ ಹಸ್ತಿನಾವತಿನ ರಥನ ಹತ್ತಿ ಬಂದ ತಾನ್ ಮೊದ್ವೆ ಆಗದ ಗೂಡೆ ಆಗಿ ಕಾಶಿಗೆ ಹೋಕೆ ಬೊತ್ತ್. ಹಸ್ತಿನಾವತಿಗೆ ತಿರ್ಗ ಹೋಗಿ ಭೀಷ್ಮರ ಎದ್ರ್ ನಿತ್ತ್ ಚರ್ಚೆ ಮಾಡ್ದರ್ಲಿ ಅರ್ತ ಇಲ್ಲೆ. ಉಪಯೋಗನೂ ಇಲ್ಲೆ. ಎಲ್ಲಾ ರೀತಿಲಿ ಏಚನೆ ಮಾಡುವ ಭೀಷ್ಮರ್ ಅದರ ಸೊಂತ ಬೇಕ್ ಬೇಡ್‌ದ್‌ಕ್ಕೆ ಒಂದಿಸ್ಟ್‌ನೂ ಬೆಲೆ ಕೊಡಿಕಿಲ್ಲೇಂತ ಅದ್ಕೆ ಯಾಗೋಳೋ ತಿಳ್ದುಟು. ಇನ್ನ್ ಈ ಸಾಲ್ವ ಭೂಪತಿ ಸ್ವಾಭಿಮಾನಲಿ ಯಾರಿಗುನೂ ಕಮ್ಮಿ ಇಲ್ಲದಂವ, ಕಡೆಗುನೂ ಗಟ್ಟಿ ಮೊನ್ಸ್‌ಲಿ ಹಸ್ತಿನಾವತಿನ ಭಿಕ್ಷೆ ತನಿಗೆ ಬೇಡಾಂತ ಹೇಳ್ತಲೇ? ಆದರೆ ಅದ್ ಎಲ್ಲಾ ರೀತಿಂದ ನೋಡ್ರೂ ಅಂವ ತಕಂಡ ಬಾಳ ದೊಡ್ಡ ನಿರ್ದಾರಾಂತ ಅದ್ಕೆ ಮೊನ್ಸ್‌ಗೆ ಆತ್.

ಬುಟ್ಟುಕೊಡುವ ಆ ನಿಮ್ಸಲಿನೂ ಸಾಲ್ವ ಭೂಪತಿನ ಕಣ್ಣ್‌ಲಿ ಅದರ ಬೇರೆ ದಾರಿ ಇಲ್ಲದೆ ಬುಟ್ಟುಕೊಡಕಲೇಂತ ಹೇಳ್ವ ಬೇನೆ ಇತ್ತ್. ಅದ್ ಅದರ ಸರಿಯಾಗಿ ಗಮನಿಸಿತ್ತ್. ಅಂವಂಗೆ ಅಂಬೆ ಬೇಕಾಗಿತ್ತ್. ಆದರೆ ಹಸ್ತಿನಾವತಿಂದ ಕಳ್ಸಿಕೊಟ್ಟ ಅಂಬೆನ ಅಂವ ಪಡ್ಕಂಬ ಹಾಂಗೆ ಇತ್ಲೆ. ಸೊಂಯಂವರ ಮಂಟಮೆಂದ ಹಸ್ತಿನಾವತಿನ ರಥ ಹತ್ತಿಕೆ ಮುಂದೆ ಇದೊಂದು ಸಣ್ಣ ಇಸಯ ತನಿಗೆ ತಿಳ್ಯದೆ ಹೋದಕ್ಕೆ ಅದ್ ಬೇಜಾರ ಪಟ್ಟತ್. ಸೊಂಯಂವರ ಮಂಟಮೆಲಿ ತನ್ನ ಅಪ್ಪಂಗೆ ಮತ್ತೆ ಸಾಲ್ವ ಭೂಪತಿಗೆ ಏನೇನ್ ಸಾ ತೊಂದರೆ ಆಕೆ ಬೊತ್ತ್‌ಂತ ಮತ್ತೆ ಭೀಷ್ಮರ್ ಅವಾಗಿನೇ ಸೌಭದೇಸಕ್ಕೆ ಕಳ್ಸಿಕೊಡೊಕೂಂತ ಅದರ ಏಚನೆ ಆಗಿತ್ತ್. ಭೀಷ್ಮರ್ ಬ್ರಹ್ಮಚಾರಿಗಾಂತ ಅದ್ ಕೇಳಿ ತಿಳ್ದಿತ್ತ್. ಪಂತಲಿ ಗೆದ್ದಂವನೇ ಮೊದ್ವೆ ಆಕೂಂತ ವಾದ ಮಾಡಿ ಅದ್ ಭೀಷ್ಮರ ಮಾತ್‌ಲಿ ಕಟ್ಟಿ ಹಾಕಿ, ಅವಾಗಿನೇ ಅದರ ಕಳ್ಸಿಕೊಡುವಾಂಗೆ ಮಾಡ್ದರ್ಲಿ ಅದ್ ಗೆದ್ದತ್. ಅದರ ಉಪಾಯ ಸಾಲ್ವ ಭೂಪತಿನ ಸ್ವಾಭಿಮಾನಂದಾಗಿ ಹಾಳಾತ್. ಸಾಲ್ವ ಭೂಪತಿಗೆ ಅದರಂತ ಹೆಣ್ಣ್ ಇನ್ನ್ ಸಿಕ್ಕಿಕಿಲ್ಲೆ. ಸಾಲ್ವನ ಬುಟ್ಟ್‌ದ್ ಬೇರೆ ಗಂಡ್‌ಗಳ ಗಂಡಾಂತ ಒಪ್ಪಿಕಂಬಕೆ ಅದ್ ತಯಾರಿತ್ಲೆ. ಇನ್ನೇನ್ ಮಾಡ್ದೂಂತ ಅದ್ ಚಿಂತೆ ಮಾಡ್ತ್.

ಸುರುಗೆ ಸೌಭದೇಸಂದ ಹೊರಗೆ ಹೋಕು. ಗಡಿ ಮುಟ್ಟ ಸಾಲ್ವ ಭೂಪತಿನ ರಥಲಿ ಹೋದರೆ ಅಂವನ ಹಂಗ್‌ಲಿ ಬಿದ್ದ ಹಾಂಗಾದೆ. ನಡ್ಕಂಡ್ ಹೋದರೆ ಕತ್ತಲಾಕೆ ಮುಂದೆ ಸೌಭದ ಗಡಿ ದಾಟಿಕೆ ಆಕಿಲ್ಲೆ. ಸಾಲ್ವ ಭೂಪತಿಂದ ಪಡ್ದ ದೊಡ್ಡ ಗಂಟ್‌ನೊಟ್ಟಿಗೆ ಪಂಡಿತ ದೇವೀಚರಣದಾಸ ಸಂತೋಸಲಿ ರಥಲಿ ಕುದ್ದುಟು. ಹಸ್ತಿನಾವತಿಗೆ ಮುಟ್ಟಿದ

ಮೇಲೆ ಭೀಷ್ಮಾಚಾರ್ಯರ್‌ಂದ ಉಡ್ಗೊರೆ ಪಡ್ದೇ ಪಡ್ದದೆ. ಆಗ ಸಾಲ್ವ ಭೂಪತಿಂದ ಪಡ್ದ ಗಂಟ್‌ನ ಬಗ್ಗೆ ಏನ್ ಸಾ ಹೇಳಿಕಿಲ್ಲೆ. ಹೇಳ್ರೆ ಭೀಷ್ಮರ್‌ಂದ ಸಿಕ್ಕುವ ಉಡ್ಗೊರೆ ಕಮ್ಮಿ ಆದೂಂತ ಅಂವ ಗ್ರೇಸಿದೆ. ಅಂವ ಕಂಡಿತಾ ನಡ್ಯಕಿಲ್ಲೆ. ನಡ್ಯಕೂ ಅಂವಂಗೆ ಈಗ ಈ ಗಂಟ್‌ನ ಹೊತ್ತ್‌ಕಂಡ್ ಆಕಿಲ್ಲೆ. ಗಡಿಗೆ ಮುಟ್ಟ ರಥಲೇ ಹೋಕಾದೆ.

ಹಸ್ತಿನಾವತಿನ ರಥಲಿ ಸೌಭದ ಗಡಿಮುಟ್ಟ ಬಾಕನ ಅದ್ಕೆ ಅದ್ ಹಂಗ್‌ಂತ ಆತ್ಲೆ. ಅದರ ಮೊನ್ಸ್‌ನ ಗೆದ್ದಂವನಕ್ಕಲೆ ಪಂತಲಿ ಗೆದ್ದಂವ ಕಳ್ಸಿಕೊಟ್ಟದ್‌ಂತ ನೆನ್ಸಿದೆ. ಅದರ ಸೌಭಕ್ಕೆ ಕಳ್ಸಿ ಕೊಡುವ ಹಕ್ಕ್ ಭೀಷ್ಮರ್‌ದ್ದ್‌ಂತ ಅದ್ ನೆನ್ಸಿಕಂಡಿತ್ತ್. ಈಗ ಸಾಲ್ವ ಭೂಪತಿಂದ ತಿರಸ್ಕಾರ ಪಡ್ದ ಮೇಲೆ ಅದ್ಕೆ ದಾರಿ ಕಾಣದಾತ್. ಸಾಲ್ವ ಭೂಪತಿಗೆ ಅದರ ಎಲ್ಲಿಗೆ ಬೇಕರೂ ಕಳ್ಸಿಕೊಡುವ ಹಕ್ಕ್ ಇಲ್ಲೇಂತ ಅದ್ಕೆ ಗೊತ್ತಾತ್. ಆದರುನೂ ಸಾಲ್ವ ಭೂಪತಿನ ರಥಲಿ ಗಡಿ ಮುಟ್ಟಿಕನ ಮುಟ್ಟ ಹೋಕಾದ ಅನಿವಾರ್ಯಂದ ಅದ್ ಕುಗ್ಗಿಹೋತ್.

ಪಂತಲಿ ಗೆದ್ದಂವನೇ ತನ್ನ ಧರ್ಮ ಪ್ರಕಾರ ಮೊದ್ವೆ ಆಕೂಂತ ಅದ್ ವಾದ ಮಾಡ್ತ್. ರಾಜಮಾತೆ ಸತ್ಯವತೀದೇವಿ ಅದರ ವಾದನ ಕಡೆಗೆ ಒಪ್ಪಿಕಂಡತ್. ಸತ್ಯವತೀ ದೇವಿನ ಕತೆ ಇಡೀ ದೇಸಕ್ಕೆ ತಿಳ್ದ ಇಸಯ ಆಗಿತ್ತ್. ಸಣ್ಣ ಪ್ರಾಯಲೇ ಜೂವನದ ಎಲ್ಲಾ ಕಸ್ಟ ಸುಕನ ಅದ್ ಕಂಡಿತ್ತ್. ಶಂತನ ಚಕ್ರವರ್ತಿಗಳ ಕೈ ಹಿಡ್ಯಕೆ ಮುಂದೆನೆ, ಪರಾಶರ ಮಹಾಮುನಿಗಳ್‌ಂದ ದ್ವೈಪಾಯನನ ಹೆತ್ತೋಳು. ಅವನಸ್ಟ್ ಮೇಧಾವಿ ಇಡೀ ಆರ್ಯಾವರ್ತಲಿ ಬೇರೊಬ್ಬ ಇಲ್ಲೇಂತ ಅಪ್ಪ ಹೇಳ್ದರ ನೆಂಪು ಅದ್ಕಾತ್. ಇದ್ ಬಿತ್ತ್‌ನ ಗುಣ. ಅದರ ಕುರುಸಾಮ್ರಾಜ್ಯ ರಾಜಮಾತೆ ಎಂತ ಒಪ್ಪಿಕೊಂಡುಟು. ಅಂತವಳ ಹೊಟ್ಟೆಲಿ ಹುಟ್ಟಿದ ವಿಚಿತ್ರವೀರ್ಯಂಗೆ ಸೊಂಯಂವರ ಮಂಟಮೆಗೆ ಬಂದ್‌ದ್ ಕಾಳಗ ಕೊಡುವ ಸಕ್ತಿ ಇತ್ಲೆ. ಆಚಾರ್ಯ ಭೀಷ್ಮ ಮತ್ತೆ ರಾಜಮಾತೆನೊಟ್ಟಿಗೆ ತಾನ್ ವಾದ ಮಾಡಿಕಾಕನ ವಿಚಿತ್ರವೀರ್ಯ ಕಣ್ಣ್ ಮಿಟ್ಕಿಸಿಕಂಡ್ ನೋಡ್ದರ ಅದ್ಕೆ ನೆಂಪಾತ್. ಒಂದೇ ಒಂದ್ ಮಾತ್ ಮಾತಾಡಿಕೆ ಅಂವಂದಾತ್ಲೆ. ಒಂದು ಹಂತಲಿ ಅಂವ ಎದ್ದ್ ಹೋಗುಟು. ಅಂವ ಕುರುಸಾಮ್ರಾಜ್ಯದ ಚಕ್ರವರ್ತಿ! ಭೀಷ್ಮರ ಹಾಂಗೆ ವಿಚಿತ್ರವೀರ್ಯನೂ ಸಂತನು ಚಕ್ರವರ್ತಿಗಳ ಸಂತಾನನೇ. ಬೀಜಂದ ಮೊಣ್ಣೇ ಸತ್ವ ಇದ್ದದರ್‌ಂದ ಹಿಂಗಾತೋ? ಅಥವಾ ಸತ್ಯವತೀದೇವಿಗೆ ಮುಂದೆನ ಗಂಡ ಪರಾಶರರ ಮೊರ್‍ಯಕೆ ಆಗದರ್‌ಂದ ಹೀಂಗಾತೋ? ಏನೇ ಆದರುನೂ ರಾಜಮಾತೆ ಪುಣ್ಯಾದಿಗಿತ್ತಿ. ವಿಚಿತ್ರವೀರ್ಯ ಹತ್ತಿ ಕುದ್ದ ಸಿಂಹಾಸನಕ್ಕೆ ಭೀಷ್ಮರ ರಕ್ಷಣೆ ಉಟ್ಟು. ಕಸ್ಟ ಬಾಕಾಕನ ದ್ವೈಪಾಯನ ಸಾಯಕ್ಕೆ ಬಂದೇ ಬಂದದೆ. ಇವಿಬ್ಬೊರು ಇರಿಕನ ಮುಟ್ಟ ಕುರು ಸಾಮ್ರಾಜ್ಯ ಹೊರಗೆನ ಸಕ್ತಿಗಳ್‌ಂದ ನಾಸ ಆಕಿಲ್ಲೆ. ಆದರೆ ದೊಡ್ಡ ಮರ ಒಂದ್ ತನ್ನ ಒಳಗೆ ಇರುವ ಹುಳುಗಳ್‌ಂದನೇ ಹಾಳಾಕೂ ಸಾಕ್!

ತಾನ್ ಸೀದ ಕಾಶಿಗೇ ಹೋದರೇನ್‌ಂತ ಅಂಬೆ ಏಚನೆ ಮಾಡ್ತೆ. ಅಲ್ಲಿ ನಾ ಬೇರೊಂದ್ ದಾರಿನ ಕಂಡ್‌ಕಣಕ್. ಕಾಶಿ ಇಡೀ ದೇಸದ ಶ್ರದ್ಧಾಕೇಂದ್ರ, ಗಂಗಾ ನದಿನ ದಡದ ಉದ್ದಕ್ಕೂ ಉರ್ಬುಳಿ, ಅರೆ ಉರ್ಬುಳಿ ಇಡೀ ಕಸಾಯ ಅರ್‍ವೆನ ಉಟ್ಟ್‌ಕೊಂಡ

ಯಾವ್ಯಾವುದೋ ಶ್ರದ್ಧೆನ ತಾಂತ್ರಿಕರ್, ಮಂತ್ರಗಾರರ್, ಸಾಧಕರ್, ಸಿದ್ಧರ್ ಮತ್ತೆ ಬೂದಿಬಡ್ಕ ಸನ್ನೇಸಿಗ ಒಳೊ. ಇವರ ನೊಡುಲಿ ಎಲ್ಲೋ ಒಂದ್ ಮೂಲೆಲಿ ನಾ ಯೋಗಿನಿನಾಂಗೆ ಇರಕ್. ಇಲ್ಲರೆ ಅರಮನೆಗೆ ಹೋಗಿ ಅಪ್ಪಂಗೆ ಎಲ್ಲಾ ಇಸಯನ ತಿಳ್ಸಿ, ಕಾಶಿನ ವಿದ್ಯಾಪೀಟಲಿ ಶಾಸ್ತ್ರ ವಿದ್ಯೆನ ಮುಂದರ್ಸಕ್. ಅಲ್ಲಿರ್ವ ಏಕವೇದಿ, ದ್ವಿವೇದಿ, ತ್ರಿವೇದಿ, ಚತುರ್ವೇದಿಗಳ ನೊಡುಲಿ ನಾ ಒಬ್ಬ! ದೊಡ್ಡ ವೇದ ಕಲ್ತವಳಾಗಿ ಜಾತಿಗಳ, ವರ್ಣಗಳ, ಹೆಣ್ಣ್-ಗಂಡ್‌ಗಳ ನೊಡುಲಿ ಯಾವುದೇ ಎತ್ಯಾಸನ ಮಾಡದ ಹೊಸ ಮತನ ಒಂದರ ಏಕೆ ಹುಟ್ಟು ಹಾಕಿಕೆ ಬೊತ್ತ್?

ಇಲ್ಲೆ, ಮತ್ತೆ ಕಾಶಿಗೆ ಹೋದು ಸರಿಯಾದ್ಲೆ. ಅಪ್ಪ ನನ್ನ ಮೊನ್ನಿತ್ಲರುನೂ ಕಳ್ಸಿಕೊಟ್ಟದ್ ಹಸ್ತಿನಾವತಿಗೆ. ಅಲ್ಲಿಂದ ನಾನಾಗಿನೇ ಸಾಲ್ವ ಭೂಪತಿನಲ್ಲಿಗೆ ಬಂದ್‌ದ್ ಅಂವಂದ ತಿರಸ್ಕಾರಕ್ಕೆ ಒಳಗಾದವ್ಳು. ಯಾವ ಮೋರೆ ಹೊತ್ತ್‌ಕಂಡ್ ಹೋಗಿ ಅಪ್ಪನೆದ್ರ್ ನಿತ್ತ್ ಇಲ್ಲಿ ನಡ್ದದರನೆಲ್ಲಾ ಹೇಳುದು? ನಾ ಹಸ್ತಿನಾವತಿನ ಸೊಸೆ ಆದು, ಇಲ್ಲರೆ ಸೌಭದೇಸದ ರಾಣಿ ಆದು ಅಪ್ಪಂಗೆ ಇಸ್ಟ ಇಲ್ಲೆ. ಸೊಂಯಂವರ ಮಂಟಮೆಲಿ ಸಾಲ್ವ ಭೂಪತಿ ಎಲ್ಲಾ ರಾಜರ್‌ನ ಗೆಲ್ಲಿಕಾಕನ ಅಪ್ಪ ಗೆಂಡ ಮೆಟ್ಟಿದಂವನಾಂಗೆ ಮಾಡ್ತಿತ್ತ್. ಭೀಷ್ಮಾಚಾರ್ಯರ್ ಬಂದ್ ನುಗ್ಗಿಕಾಕನ ಹೆದ್ರಿ ಹೋಗಿತ್ತ್. ಕರ್ಸಿಕಣದೆ ಬಂದೊವು ಅನಾವುತ ಮಾಡಿಕೆ ಕಾರ್ನ ಆದೊ. ಅಪ್ಪ ಸಕ್ತಿನನೇ ಪಂತಲಿ ಇಸಿದ್ ತೊಪ್ಪು. ಅದರ ಬದ್ಲ್ ನಾವು ನಮ್ಮ ಇಚ್ಚೆನಾಂಗೆ ಗಂಡ್‌ಗಳ ಮೊದ್ವೆ ಅದರ ಆಯ್ಕೆ ಮಾಡಿ ಸುಕಲಿ ಇರ್ತಿದ್ದೆ. ಅಂಬಿಕೆ, ಅಂಬಾಲಿಕೆಗ ತಮಿಗೆ ಇಸ್ಟ ಬಂದದರ ಕೈ ಹಿಡ್ಯತಿದ್ದೊ. ಆಗ ಭೀಷ್ಮರಿಗೆ ಸೊಂಯಂವರ ಮಂಟಮೆಗೆ ಬಾಕೆ ಆಗ್ತಿತ್ಲೆ. ವಿಚಿತ್ರವೀರ್ಯ ಬಾತಿದ್ದರೂ, ತಲೆ ಸರಿ ಇದ್ದೋವು ಯಾರ್‌ನೂ ಅಂವನ ಮೊದ್ವೆ ಆಕಿತ್ಲೆ.

ಅಪ್ಪನನೂ ತೊಪ್ಪು ಮಾಡ್ದಂವಾಂತ ಹೇಳಿಕೆ ಆದುಲ್ಲೆ. ಮೊದ್ವೆ ಕಾಗ್ದ ಕೊಡದೆ ಸೊಂಯಂವರ ಮಂಟಮೆಗೆ ಬಾವೋಂತ ಅಂವ ಗ್ರೇಸಿತಿಲ್ಲೆ. ಕಾಶೀ ರಾಜ್ಯನ ಆಳುವ ಸಾಮರ್ತ್ಯ ಇರ್ವ ಒಬ್ಬ ಉತ್ತರಾಧಿಕಾರಿನ ಅಂವ ಹುಡ್ಕಕಾಗಿತ್ತ್. ಅದಕ್ಕಂವ ಸೊಂಯಂವರ ಮಾರ್ಗನ ಆರ್ಸಿಕಂಡತ್. ಕುರುಸಾಮ್ರಾಜ್ಯನ ಸೌಭದೇಸನ ಬೇಕೆಂತಳೇ ಅಂವ ದೂರ ಇಸಿತ್. ತನ್ನ ಹೆಣ್ಣ್ ಮಕ್ಕಳಿಗೆ ಯಾರ್ ಗಂಡ ಆಕೆ ಬೊತ್ತ್‌ಂತ ಅಂವಂದೇ ನೆಲೆಲಿ ಏಚನೆ ಮಾಡಿ ಕೆಲ್ಸ ಮಾಡ್ತ್. ಕಾಶೀ ರಾಜ್ಯ ಕುರುಸಾಮ್ರಾಜ್ಯಕ್ಕೊ, ಸೌಭದೇಸಕ್ಕೋ ಸೇರಿ ತನ್ನ ನೆಲೆನ ಕಳ್ಕಂಬದ್ ಅಂವಂಗೆ ಇಸ್ಟ ಇತ್ಲೆ. ಕಾಗ್ದ ಕೊಟ್ಟಿತ್ಲರೂ ಸಾಲ್ವಭೂಪತಿ ಬಂದ್‌ಬುಟ್ಟತ್. ಬ್ರಹ್ಮಚಾರಿಯಾದ ಭೀಷ್ಮರ್ ಕೂಡಾ ತಮ್ಮಂಗಾಗಿ ಬಂದ್ ಬುಟ್ರೊ. ಅವು ಅದ್ಕೆ ಕೊಡುವ ಕಾರ್ನ ಏನೇ ಇರ್ಲಿ, ಇಬ್ರೊರೂ ಮಾಡ್ದ್ ತೊಪ್ಪು. ಇಬ್ರೊರ್ದ್‌ನೂ ಹಂಕಾರದ ಬುದ್ಧಿ. ಹೆಣ್ಣ್‌ನ ಹೇಂಗೆ ಬೇಕರೂ ನಡ್ಸಿಕಣಕೂಂತೇಳ್ವ ದುಷ್ಟತನ. ಅದ್ಕೆ ಅವು ಸ್ವಾಭಿಮಾನಾಂತೇಳ್ವ ಮೆತ್ತಂಗೆನ ಪದನ ಬಳ್ಸಿಕಂಡಳೊ. ಮುಂದೇನ್ ಮಾಡ್ದು? ಎಸ್ಟ್ ಏಚನೆ ಮಾಡ್ರು ಸಾ ದಾರಿನೇ ಕಾಂಬೋದಿಲ್ಲಲೆ?

ರಥನ ಹತ್ತಿ ಕುದ್ದ್‌ಕಂಡ್ ಇದ್ದ ಪುರೋಯ್ತ ದೇವೀಚರಣದಾಸ ಅಸ್ಸರ ಮಾಡ್ದೆ.

"ಅಂಬೇ ಇನ್ನ್‌ನೂ ಏಕೆ ಕಾಲ ಕಳ್ದಿಯಾ? ಸಾಲ್ವಭೂಪತಿಂದ ತಿರಸ್ಕಾರ ಪಡ್ದ ಮೇಲೆ ಇಲ್ಲಿ ನಿಲ್ಲುದು ಸರಿ ಅಲ್ಲ. ಭೀಷ್ಮಾಚಾರ್ಯರ್ ಅಪ್ಪಣೆ ಪ್ರಕಾರ ನಿನ್ನ ನಾ ಇಲ್ಲಿನೇ ಬುಟ್ಟ್‌ದ್ ಹಸ್ತಿನಾವತಿಗೆ ಹಿಂದೆ ಹೋಕಾಗಿತ್ತ್. ಆದರೆ ಈ ಸ್ಥಿತಿಲಿ ನಿನ್ನ ನಾ ಇಲ್ಲಿ ಬುಟ್ಟ್‌ದ್ ಹೋದು ಸರಿ ಅಲ್ಲ. ಸೌಭದ ಗಡಿ ದಾಟುದರ ಒಳಗೆ ಮುಂದೆನ ದಾರಿ ಕಾಂಬೊದು."

ಬೇರೆ ದಾರಿ ಕಾಣದೆ ಅದ್ ರಥನ ಹತ್ತಿತ್. ಮೊನ್ನ್ ಮುಂದೇನ್ ಮಾಡ್ದೂಂತ ಚಿಂತೆಲಿ ಬೀತ್. ರಥ ಮುಂದೆ ಹೋಕನ ಪುರೋಯ್ತು ದೇವಿಚರಣದಾಸ ಹೇಳ್ತ್. "ಅಂಬೇ, ಕ್ಷತ್ರಿಯರ್ ಕೊಟ್ಟಮಾತ್‌ನ ಒಳ್ಸಿಕಂಬೋವೂಂತ ಹೇಳ್ವೆ. ಆದರೆ ನೀ ಕೊಟ್ಟ ಮಾತ್‌ಗೆ ತೊಪ್ಪಿ ನಡ್ದಳ."

ಅಂಬೆ ಗಾಬೆರಿಲಿ ಕೇಳ್ತ್, "ನೀವು ಏನ್ ಹೇಳ್ರೆ ಪುರೋಯ್ತರೇ? ನಾ ಎಲ್ಲಿ ಕೊಟ್ಟಮಾತಿಗೆ ತೊಪ್ಪಿಯಳೆ? ನಿಮ್ಮಂತಾ ವಿದ್ವಾಂಸರ್ ಹೀಂಗೂನೂ ಸುಳ್ಳು ಆರೋಪ ಹೊರ್ಸುದು ಸರಿನೋ?"

ಪುರೋಯ್ತು ದೇವಿಚರಣದಾಸ ಹೇಳ್ತ್. "ನಾ ಮಾಡ್ದು ಸುಳ್ಳು ಆರೋಪ ಅಲ್ಲ. ಸಾಲ್ವ ಭೂಪತಿನ ಆಸ್ತಾನ ಸೇರ್ದ ಕೂಡ್ಲೇ ನನ್ನ ಹೆಣ್ಣ್ ಮಗಕ್ಕಳಿಗೆ ಚಿನ್ನದ ಬಳೆ ಮತ್ತೆ ಚಿನ್ನದ ಸರ ಕೊಟ್ಟನೇಂತ ನೀ ಮಾತ್ ಕೊಟ್ಟಳ. ಆ ಸಾಲ್ವ ಭೂಪತಿ ದಾನ ಮಾಡ್ದರ್ಲಿ ಎತ್ತಿದ ಕೈ. ಇಸ್ಟೆಲ್ಲಾ ಕೊಟ್ಟ್‌ದ್ ಕಳ್ಸಿಟು. ನಾ ನಿನ್ನ ಅಸ್ಟ್ ದೂರದ ಹಸ್ತಿನಾವತಿಂದ ಇಲ್ಲಿಗೆ ಮುಟ್ಟ ಕರ್ಕಂಡ್ ಬಂದಂವ. ಈಗ ನಿನ್ನ ಸಾಬೀತ್‌ಲಿ ಹಸ್ತಿನಾವತಿಗೆ ಕರ್ಕಂಡ್ ಹೋಕೆ ನಿಚ್ಚಯ ಮಾಡ್ಯಳೆ. ನೀ ಏನ್ ನನ್ನ ಮಗಳಾ? ಇಲ್ಲರೆ ಅತ್ತೆನಾ? ಇನ್ನ್ ಸಾ ನೀ ನಂಗೆ ಏನ್‌ನೂ ಕೊಟ್ಟತ್ಲೆ. ಕೊಟ್ಟ ಮಾತ್‌ನ ಒಳ್ಸಿಕಂಡತ್ಲೆ. ಹಂಞ ಉಪಕಾರ ಮಾಡ್ದ ನೆಂಪುನೂ ನಿಂಗೆ ಇಲ್ಲೆ."

ಮುದಿ ಪುರೋಯ್ತನ ಮಾತ್‌ನ ಕೇಳಿ ಅದ್ ಬೆರ್ಗಾಗ್ತ್. ಹೆಚ್ಚಿನೊವು ಹೇಳ್ವೆ ಅರ್ವತ್ತ್ ವೊರ್ಸ ದಾಟಿದೊಕ್ಕೆ ಜೂವನಲಿ ಏನ್ ಸಾ ಬೇಡಾಂತ ಕಂಡದೇಂತ. ಈ ಪುರೋಯ್ತಂಗೆ ಎಪ್ಪತ್ತ್ ದಾಟ್ರೂ ಇನ್ ಸಾ ಆಸೆ ಬುಟ್ಟತ್ಲೆ. ಜೂವನಕ್ಕೆ ಒಂದು ಸಾರ್ತಕ ಗುರಿ ಇಸಿಕಂಡ್ ಅದರ ಸಾಧಿಸಿಕೆ ಪ್ರಯತ್ನ ಮಾಡೋವು ಮಾತ್ರ ನರಮೊಂಯಿಂಸಾಂತ ಹೇಳ್ಸಿಕಂಡವೇಂತ ಅದ್ ಓದಿದ್ ತಿಳ್ಕಂಡಿತ್ತ್. ಇಂವನ ಜೂವನದ ಉದ್ದೇಶ ಒಂದೇ ಚಿನ್ನ ಸಂಪಾದ್ನೆ ಮಾಡ್ದು. ಇಂವನ ಬಾಯಿಂದ ತಾನ್ ಏಕೆ ಮಾತ್‌ಗೆ ತೊಪ್ಪಿದೋವ್ಳೂಂತ ಹೇಳ್ಸಿಕಣಕೂಂತ ನೆನ್ಸಿಕಂಡ್ ಅಂಬೆ ಹೇಳ್ತ್, "ಸ್ವಾಮಿ, ಪುರೋಯ್ತರೇ, ಸಾಲ್ವಭೂಪತಿ ನನ್ನ ಕರ್ಕಂಬತಿದ್ದರೆ ನನ್ನ ಮೈಮೇಲೆ ಇದ್ದ ಎಲ್ಲಾ ನಗಗಳ ಆಗಳೇ ನೀವ್ಗೆ ನಾ ಕೊಟ್ಟ್ ಬುಡ್ತಿದ್ದೆ. ಕೊಟ್ಟ ಮಾತ್‌ಗೆ ತೊಪ್ಪುವವ್ಳು ಅಲ್ಲ ಈ ಅಂಬೆ. ನನ್ನ ಮುಂದೆನ ಗತಿ ಏನ್‌ಂತ ಗೊತ್ತಾಗದೆ ಗೊಂದಲಲಿ ತಡ ಆತ್. ಒಮ್ಮೆ ಮಾತ್ ಕೊಟ್ಟ ಮೇಲೆ ನಾ ಹೇಳ್ದರ್‌ಂದಳೂ ಹೆಚ್ಚೇ ಕೊಟ್ಟನೆ. ತೊಪ್ಪು ತಿಳ್ಯಬಡಿ."

ಸೌಭದ ಗಡಿಲಿ ಹಸ್ತಿನಾವತಿನ ರಥ ಪುರೋಯ್ತಂಗಾಗಿ ಕಾಯತಿತ್ತ್. ಅಂಬೆ ತಿರ್ಗ ಬಂದದರ ನೋಡಿ ಸಾರಥಿಗೆ ಆದ ಅಚ್ಚರಿ ಅಂವನ ಮೋರೆಲಿ ಎದ್ದ್ ಕಾಂಬತಿತ್ತ್.

ರಥಂದ ಇಳ್ದ ಅಂಬೆ ಸೌಭದ ಸಾರಥಿನ ಹಕ್ಕಲೆ ಹೋಗಿ ಅದರ ಕೈಲಿದ್ದ ಎರ್ಡ್ ಬಳೆಗಳ ತೆಗ್ದ್ ಅಂವಂಗೆ ಕೊಟ್ಟ್ ಹೇಳ್ತ್, "ಇದ್ ಚಿನ್ನದ ಬಳೆಗ. ನಮ್ಮ ಗಡಿವರೆಗೆ ಕ್ಷೇಮಲಿ ಕರ್ಕಂಡ್ ಬಂದ್ ಸೇರ್ಸಿದಕ್ಕೆ ನಿನ್ನ ಹೆಣ್ಣ್‌ಗೆ ಇದ್ ಕಾಶೀ ರಾಜಕುಮಾರಿ ಅಂಬೆನ ಉಡ್ಗೊರೆ. ಇನ್ನೊಂದರ ಸಾಲ್ವ ಭೂಪತಿಗೆ ಕೊಟ್ಟ್ ಬುಡು. ಅಂವನ ರಥಲಿ ಇಲ್ಲಿಗೆ ಮುಟ್ಟ ಬಂದ ರುಣಕ್ಕೆ ಇದ್ ಪರ್‍ಯಾರ. ಅಂವ ಇದರ ಹಾಂಗೇಂತ ತಕಣದಿದ್ದರೆ ಇದರ ಹಾಕಂಬಕೆ ಹೇಳ್. ಅಂವನ ಸ್ವಬಾವಕ್ಕೆ ತಕ್ಕ ಉಡ್ಗೊರೆ ಇದ್."

ಸೌಭದ ಸಾರಥಿಗೆ ಅಂಬೆನ ಹಿಂದೆ ಮುಂದೆ ಏನ್ ಸಾ ಗೊತ್ತಿತ್ಲೆ. ಅದ್ ನಡ್ಕಂಡ ನಡೋಳ್ಕೆ ಅಂವಂಗೆ ತುಂಬಾ ಅಚ್ಚರಿ ಆತ್. ಅಂವ ಕೈಮುಗ್ದ್ ಹೇಳ್ತ್, "ಅಮ್ಮಾ, ನಂಗೆ ದನಿಗ ದಿನಕ್ಕೆ ಇಸ್ಟ್‌ಂತ ಸಂಬಳ ಕೊಟ್ಟವೆ. ಗುರ್ತು ಪರ್ಚಯ ಇಲ್ಲದ ನಿಮ್ಮಂದ ನಾ ಎಂತದರನೂ ತಕಂಬಲ್ಲೆ. ಬೇರೆಯವು ದುಡ್ಡುಗೆ ಕೈ ಚಾಚಿಕೆ ಬೊತ್ತ್‌ಂತ ಸೌಭದೇಸಲಿ ನಡ್ದ್‌ಕಂಡ್ ಬಂದ ಪದ್ಧತಿ. ಇನ್ನ್ ನಾ ನಿಮ್ಮ ಒಂದ್ ಬಳೆನ ಧನಿಗಳಿಗೆ ಕೊಟ್ಟ್‌ದ್ ನೀವು ಹೇಳ್ದರ ಅವರೊಟ್ಟಿಗೆ ಹೇಳಿಕೆ ಆದೆನೋ? ದಯತೋರ್ಸಿ ಇದರ ನೀವೇ ಇಸಿಕಣಿ."

ಅಂಬೆ ಏರ್ ದನಿಲಿ ಹೇಳ್ದೆ, "ನಾ ಹೇಳ್ದಾಂಗೆ ಕೇಳ್. ಸೌಭದೇಸದ್ ರೀತಿ ನೀತಿನನಿನ್ನ ದೊರೆ ನಂಗೆ ಸರ್‍ಯಾಗಿ ಪರ್ಚಯ ಮಾಡ್ಸಿಟು. ಅಂವನ ರುಣ ನಂಗೆ ಬೇಡ. ಅಂವ ಇದರ ಹಾಕಣಲಿ. ಇದ್ ಅಂವನ ಜೂವನ ಮೌಲ್ಯದ ಗುರ್ತಾಗಿರ್‍ಲಿ. ಅಂವ ತಕಣದಿದ್ದರೆ ಎರ್ಡ್‌ರ್ರೂ ನೀನೇ ಇಸಿಕ. ಸುಮ್ಮಂಗೆ ನನ್ನೊಟ್ಟಿಗೆ ವಾದ ಮಾಡ್ಬಡ."

ಮತ್ತೆ ಸೌಭದ ಸಾರಥಿ ಬಾಯ್ಬುಟ್ಟಿತ್ಲೆ. ಅಂವ ಎರ್ಡ್ ಚಿನ್ನದ ಬಳೆಗಳ ಮಾತಾಡದೆ ತಕಂಡ್‌ದ್ ರಥನ ಹಿಂದಕೆ ಓಡ್ಸಿತ್. ಅಂಬೆಗೆ ಮುಂದೆ ಏನ್ ಮಾಡೋಕೂಂತ ಗೊತ್ತಾತ್ಲೆ. ಅದ್ ಇನ್ನ್ ಸಾ ಹಸ್ತಿನಾವತಿನ ರಥನ ಹತ್ತದರ ನೋಡಿ, ಪುರೋಯ್ತು ಹೇಳ್ತ್, "ಅಂಬೇ, ಕತ್ತಲಾಕಂಡ್ ಬಾತ್. ಕತ್ತಲೆಲಿ ನಾವು ಪ್ರಯಾಣ ಮಾಡ್ವ ಹಾಂಗಿಲ್ಲೆ. ಹಕ್ಕಲೆ ಎಲ್ಲಾದರ್ ಚತ್ರ ಇರಿಕೂ ಸಾಕ್. ಅಲ್ಲಿ ನಿತ್ತ್, ನಾಳೆ ಹಸ್ತಿನಾವತಿಗೆ ಹೋದರಾತ್. ಭೀಷ್ಮಾಚಾರ್‍ಯರ್ ಏನ್‌ನ ಹೇಳುವೆನೋ ಹಾಂಗೆ ಮಾಡಕ್."

ಹಸ್ತಿನಾವತಿಯೊವೂಂತ ಹೇಳ್ವ ಕಾರ್ಣಕ್ಕೆ ಚತ್ರಲಿ ರಾಜೋಪಚಾರ ನಡ್ತ್. ರಥಕ್ಕೆ ಸುತ್ತ್ ಬಂದ್‌ದ್ ಪತಾಕೆಗೆ ಕೈ ಮುಗ್ಯತಿದ್ದ ಜನರ ಸಂಕೆಗೆ ಲೆಕ್ಕ ಇರ್ತಿತ್ಲೆ. ಪತಾಕೆಗೆ ಕೈನ ಮುಗ್ಯತಿದ್ದ ಪ್ರಜೆಗ ನಿಜಲಿನೂ ಸುಕಲಿ ಇರ್ತಿದ್ದನೋ ನಂಗೆ ಗೊತ್ಲೆ. ಜೀವನಲಿ ಧರ್ಮ ಮಾರ್ಗಲಿ ನಡ್ಕಂಬತಿದ್ದನೋ? ನಂಗೆ ಗೊತ್ಲೆ. ಪತಾಕೆನ ಅಂತೂ ಗೌರವಲಿ ಕಂಡವೆ. ಅಲ್ಲರೆ ಇದ್ ತೋರ್ಸಿಕಂಬ ಗೌರವನೋ? ನಂಗೆ ಗೊತ್ತಾದ್ಲೆ. ಕುರುಸಾಮ್ರಾಜ್ಯನ ಇವುಗ ಏಕೆ ಗೌರವಲಿ ನೋಡೊಕು? ಅದ್ ಇವರ ಸ್ವತಂತ್ರನ ಕಾಪಾಡುವೇಂತಲೋ? ಸಾಮ್ರಾಜ್ಯಗ ಪ್ರಜೆಗಳ ಸ್ವತಂತ್ರನ ಕಸ್‌ದ್‌ಕಂಡವೆ. ಆದರುನೂ ಇವು ದ್ವಜಕ್ಕೆ ಗೌರವ ಕೊಟ್ಟವೆ. ಏಕೇಂತ ನಂಗೆ ಗೊತ್ತಾದ್ಲೆ.

ಮೊರ್ದಿನ ಬೆಳ್ಗಾರಾಕನನೇ ಎದ್ದ್ ಅಂಬೆ ಪುರೋಯ್ತನೊಟ್ಟಿಗೆ ಪ್ರಯಾಣ ಮುಂದರ್ಸಿತ್. ಹಸ್ತಿನಾವತಿನ ದಾರಿಲಿ ದೂರಲಿ ಒಂದು ಸರೋವರ ಕಂಡತ್. ಸೌಭಕ್ಕೆ

ಬಾಕಾಕನ ಅದ್ ಅದರ ಗಮನಕ್ಕೆ ಬಾತ್ಲೆ. ಈಗ ಸರೋವರನ ನೋಡಿಕಾಕನ ಅದರ ಮೊನ್ಸಿಗೆ ಉಲ್ಲಸ ಆತ್. ಅದ್ಕೆ ಕಾಶಿನ ಉಪವನಲಿದ್ದ ಆ ಸರೋವರ ನೆಂಪಾಗಿ ಮೈ ಜುಂ ತೇಳ್ತ್. ಅದ್ ಮೈ ಚಳಿ ಬುಟ್ಟ್‌ದ್ ಈಸ್‌ತಿದ್ದದೇ ಆ ಸರೋವರಲಿ. ಗಂಡ್‌ನ ಹಕ್ಕಲೆ ಇರುವ ಸಂದರ್ಬನ ಒದಗಿಸಿದ್ ಆ ಸರೋವರನೇ. ಪ್ರೀತಿ ಎಂತ ಹೇಳ್ರೆ ಏನ್‌ಂತ ಪರ್ಚಯ ಮಾಡ್ಸಿದ್ ಆ ಸರೋವರನೇ. ಇಲ್ಲಿನೂ ಒಂದು ಸರೋವರ ಕಂಡದೆ. ಇಲ್ಲಿ ಎಲ್ಯಾದರ್ ಒಂದ್ ಮುನಿನ ಆಶ್ರಮ ಇರಿಕೂ ಸಾಕ್. ಹೋಗಿ ನೋಡೊಕು. ಹೆಣ್ಮಕ್ಕಳ ಮೊಂಯಿಂಸರಾಂಗೆ ಕಾಂಬ ಲೋಕ ಸೂತ್ರನ ಮಾಡೊಕೂಂತ ಅಂಬೆ ಅಂದ್‌ಕಂಡತ್.

ಅದ್ಕೆ ಇನ್ನೊಂದ್ ಏಚನೆ ಬಾತ್. ಒಂದ್ ವೇಳೆ ನಾ ಹಸ್ತಿನಾವತಿಗೆ ಹೋದರೆ ಏನಾದು? ಮತ್ತೆ ಭೀಷ್ಮರ್ ಎದ್ರ್ ನನ್ನ್ ಗೋಳ್ ಕತೆನ ಹೇಳಕಾದೆ. ಅದರ್‌ಂದ ಉಪ್ಯೋಗ ಇಲ್ಲೆ. ಹೆಚ್ಚ್‌ಂತೇಳ್ರೆ ಭೀಷ್ಮರ್ ನನ್ನನ ವಿಚಿತ್ರವೀರ್ಯನ ಕುತ್ತಿಗೆಗೆ ಕಟ್ಟುವೊ. ಯಾರ್ ಇಸಿದೊನೋ ಅಂವಂಗೆ ಆ ಹೆಸ್ರ್‌ನ. ನೋಟಕ್ಕಾಗಲೀ, ನಡೋಳ್ಕೆಲಿ ಆಗಲೀ ಪುರ್ಸತನ ಎಳ್ಳಸ್ಟ್ ಕಾಂಬಕೆ ಸಿಕ್ಕದಂವನ ಹೆಸ್ರ್ ವಿಚಿತ್ರವೀರ್ಯ! ಅಂವನ ಕಟ್ಟಿಕಂಡ್ ನನ್ನ ತಂಗೆಕ ಸುಕಲಿ ಇರಿಕಿಲ್ಲೆ. ಅಂವಂದ ಅವ್ಕೆ ಸರೀರದ ಸುಕ ಸಿಕ್ಕಿಕಿಲ್ಲೆ. ಸರೀರದ ಸುಕ ಸಿಕ್ಕದೊವು ಮೊನ್ಸ್‌ಲಿನೂ ಸುಕಲಿ ಇರಿಕಿಲ್ಲೆ. ಹಸ್ತಿನಾವತಿನ ರಾಣಿವಾಸಲಿ ಇರ್ದರ್‌ಂದ ತನ್ನ ತಾನ್ ಕೊಂದ್ ಕೊಂಬದೇ ಒಳ್ಳದ್.

ಸಮಯದ ಕೂಸಾಗಿ ಭೀಷ್ಮರ್ ಕಡ್ಡಾಯ ಬ್ರಹ್ಮಚಾರಿಗಾದೊ. ಅದರ ತೊಪ್ಪೂಂತ ಹೇಳಿಕಾದ್ಲೆ. ಆದರೆ ಅವು ವಿಚಿತ್ರವೀರ್ಯಂಗೆ ನನ್ನ ತಂಗೆಕಳ ರಾಣಿಗ ಆಗಿ ಮಾಡ್ದ್ ದೊಡ್ಡ ತೊಪ್ಪು. ನರ ಸತ್ತಂವಂಗೆ ಹೊಂತಗಾರ್ತಿ ಗೂಡೆಗಳ ಒಂದಿಸ್ಟ್ ಕರ್‌ಣೆ ಇಲ್ಲದೆ ಒಪ್ಪಿಸಿ ಬುಟ್ಟ ಭೀಷ್ಮರ್ ಧರ್ಮ ಇಲ್ಲದೊವು. ಪ್ರತಿಸ್ಟೆನ ಅಮಲ್ ತಲೆಗೆ ಹತ್ತಿ ಅವು ಏಚನೆ ಮಾಡ್ವ ಸಕ್ತಿನನೇ ಕಳ್ಕಂಡೊಳೊ. ಹಂಕಾರಿ ಭೀಷ್ಮರ್‌ಗೆ ಒಂದ್ ಪಾಟನ ಕಲ್ಸೊಕು. ನೋಡೊಮೊ ಅಂಬೆಗುನೂ ಒಂದು ಕಾಲ ಬಾದು.

"ಸಾರಥೀ, ರಥನನಿಲ್ಸ್" ಅಂಬೆನ ಆಜ್ಞೆಗೆ ರಥನಿತ್ತತ್: ಅಂಬೆ ರಥಂದ ಕೆಳಗಿಳ್ತ್. ಮೈಮೇಲೆಂದ ಆರ್ ಚಿನ್ನದ ಬಳೆಗಳ ಮತ್ತೆ ಮೂರ್ ಬಂಗಾರದ ಸರಗಳ ತೆಗ್ದ್‌ದ್ ಪುರೋಯ್ತ ದೇವಿಚರಣದಾಸಂಗೆ ಕೊಟ್ಟತ್. "ಪುರೋಯ್ತರೇ, ಇದ್ ನಿಮ್ಮ ಮೂರ್ಜನ ಗೂಡೆಗಳಿಗೆ. ಇದರ್‌ಂದ ಹೆಚ್ಚಿಗೆ ಕೊಡಿಕೆ ನನ್ನಹಕ್ಕಲೆ ಏನೂ ಇಲ್ಲೆ."

ಸಾರಥಿ ಅಂಬೆನನೇ ನೋಡ್ತಿತ್ತ್. ಅವರ ಕೈಲಿ ಇನ್ನೂ ಸಾ ಚಿನ್ನದ ಬಳೆಗ ಇದ್ದೊ. ಅದರ್ಲಿ ಮೂರ್ ಚಿನ್ನದ ಬಳೆಗಳ ತೆಗ್ದ್ ಸಾರಥಿಗೆ ಕೊಟ್ಟ್ ಹೇಳ್ತ್, "ಇದರ್ಲಿ ಎರ್ಡ್ ನಿಂಗೆ. ನಿನ್ನ ಕೆಲ್ಸನ ತಾಳ್ಮೆಲಿ ಮಾಡ್ದಕ್ಕೆ. ಮತ್ತೆ ಒಳ್ದ ಒಂದರ ಆ ಭೀಷ್ಮಾಚಾರ್ಯರಿಗೆ ಕೊಡು. ಗೆದ್ದ್ ತಂದ ಗೂಡೆಗಳ ಬೇರೆಯೊವ್ಕೆ ಕೊಟ್ಟ ಅಂವನ ಗಂಡಸ್ತನಕ್ಕೆ ಇದ್ ಅಂಬೆ ಕೊಟ್ಟ ಉಡ್ಗೊರೇಂತ ಅಂವಂಗೆ ಹೇಳಿ ಬುಡು."

ಸಾರಥಿಗೆ ಏನ್ ಹೇಳೊಕೂಂತ ಗೊತ್ತಾತ್ಲೆ. ಪುರೋಯ್ತಂಗೆ ತಡ್ಯಕಾತ್ಲೆ. ಅಂವ ದುಕ್ಕಲಿ ಹೇಳ್ತ್, "ಅಂಬೇ ಇದ್ ಕಾಡ್. ಇಲ್ಲಿ ಮೊಂಯಿಂಸರ ತಿಂಬ ಕಾಡ್ ಮುರ್ಗಗ

ಇರ್‍ವೊ. ನೀ ಚಿನ್ನದ ನಗಗಳ ಹಾಕಂಡಿರ್‍ವ ಪೊರ್‍ಲುನ ಗೂಡೆ. ಇಲ್ಲಿ ಜನಂಗ ವಾಸ ಮಾಡಿಕಂಡಿರ್‍ವೊ. ನಿಂಗೆ ಇದ್ ಗುರ್‍ತ ಪರ್‍ಚಯ ಇಲ್ಲದ ಜಾಗೆ. ಇಲ್ಲಿ ನಿನ್ನ ಒಂಟಿ ಆಗಿ ಬುಟ್ಟುದ್ ಹೋಕೆ ನನ್ನ ಮೊನ್ಸ್ ಒಪ್ಪುದ್ಲೆ. ದಯಮಾಡಿ ಹಸ್ತಿನಾವತಿಗೆ ಬಾ. ಅಲ್ಲಿ ನೀ ಮುಂದೆ ಏನ್ ಮಾಡೊಕೂಂತ ಏಚನೆ ಮಾಡಕ್."

ಆಕಿಲ್ಲೇಂತ ಅಂಬೆ ತಲೆ ಹಂದಾಡ್ಸಿತ್. "ಪುರೋಯ್ತರೇ, ಕಾಡ್‌ಮುರ್ಗ‌ಗ ಕಾರ್‍ಣ ಇಲ್ಲದೆ ತೊಂದರೆ ಕೊಡಿಕೆ ಅವು ಏನ್ ಮೊಂಯಿಂಸರೋ? ಈ ಕಾಡ್‌ಲಿರುವ ರುಸಿ, ಮುನಿಗ ಮತ್ತೆ ಇಲ್ಲಿರ್‍ವ ಮೊಂಯಿಂಸರ್‌ಗ ನನ್ನ ಚಿನ್ನನ ಎಳ್ಕಂಬಕಿಲ್ಲೆ. ಇದರನೂ ನೀವ್ಗೆ ಕೊಟ್ಟ್ ಬುಡಕಾಗಿತ್. ಆದರೆ ನನ್ನಲ್ಲಿ ಒಂದೇ ಒಂದು ಸಂಕಲ್ಪ ಉಟ್ಟು. ಅದರ ಈಡೇರ್‍ಸಿಕೆ ಇದ್ ಬೇಕಾದು. ನೀವು ನನ್ನ ಬಗ್ಗೆ ಚಿಂತೆ ಮಾಡ್ಬೊಡಿ. ನೀವು ಇನ್ನ್ ಚಿಂತೆ ಬುಟ್ಟ್‌ದ್ ಹಸ್ತಿನಾವತಿಗೆ ಹೊರ್‍ಡಕ್."

ಪುರೋಯ್ತ ದೇವಿಚರಣದಾಸನ ಚಿಂತೆ ದೂರಾತ್ಲೆ. "ರಾಜಕುಮಾರೀ, ಕಾಡ್‌ಲಿ ಇರೋವುನೂ ಮೊಂಯಿಂಸರೇ. ನಿನ್ನ ನೋಡಿ ಮೊರ್‍ಯಾಗಿ ನಿಂಗೆ ಅವು ಅಪಾಯ ಮಾಡ್ವೋ. ಹೆಣ್ಣ್‌ಗೆ ರೂಪನೂ ಶತ್ರು ಆದು ಉಟ್ಟು. ಹಸ್ತಿನಾವತಿನ ಅರಮನೆಗೆ ಬಾಕೆ ನಿಂಗೆ ಇಸ್ಟ ಇತ್ಲರೆ, ಭೀಷ್ಮಂಗೆ ಹೇಳಿ ನಿನ್ನ ನಾ ಕಾಶೀಗೆ ಕಳ್ಸುವ ಏರ್ಪಾಡ್ ಮಾಡ್ನೆ. ದಯಮಾಡಿ ಬಾ."

ಅಂಬೆ ಗಟ್ಟಿ ದನಿಲಿ ಹೇಳ್ತ್. "ಪುರೋಯ್ತರೇ, ಸೊಂಯಂವರ ಮಂಟಮೆಂದ ಹಸ್ತಿನಾವತಿಗೆ ಬಾಕನನೇ ಕಾಶಿನ ರುಣ ತೀರ್‍ತಂತ ಹೇಳಿಕಂಡವ್ಳು ನಾ. ಸಾಲ್ವ ಭೂಪತಿ ನನ್ನ ಒಪ್ಪಿ ಕಣ್‌ತಿದ್ದರೂ, ಅಪ್ಪ ನನ್ನ ಒಪ್ಪಿಕಂಬಕಿತ್ಲೆ. ಈಗ ಸಾ ಒಪ್ಪಿಕಂಬಕಿಲ್ಲೆ. ಈ ಪರಿಸ್ತಿತಿಲಿ ಅಪ್ಪನ ಎದ್ರ್ ನಿಲ್ಲಿಕೆ ಕ್ಷತ್ರಿಯ ಹೆಣ್ಣಾಗಿ ನನ್ನ ಮೊನ್ಸ್ ಒಪ್ಪುದ್ಲೆ. ಇಲ್ಲಿ ನೀರ್‌ನ ಆಸ್ರಯ ಉಟ್ಟು. ಮುನಿಗಳೋ, ಜನಂಗಳೋ ಇದ್ದೇ ಇರುವೊ. ಇದ್ದರೆ ಕಾಡ್ ಮುರ್ಗ‌ಂದ ನಂಗೆ ಅಪಾಯ ಬಾಕಿಲ್ಲೆ. ಅಲ್ಲದೆ ಪುರೋಯ್ತರೇ ಮೊಂಯಿಂಸರ್‌ಂದ ಯಾಗೋಳೂ ಮುರ್ಗ‌ಗಳೇ ಮೇಲೆ."

ಪುರೋಯ್ತ ದೇವೀಚರಣದಾಸಂಗೆ ಈ ಮಾತ್‌ಗ ನಾಟಿದೊ. ಕೂಡ್ಲೇ ಅಂವ ಹೇಳ್ತ್, "ನನ್ನನ ನೀ ತೊಪ್ಪು ತಿಳ್ಕಂಬಡ ಅವ್ವಾ. ಎಸ್ಟ್ ಕಲ್ತರೆ ಏನ್? ದೊರೆಗ ಕೊಟ್ಟರೆ ನನ್ನಂತಂವಂಗೆ ಉಟ್ಟು. ಬರ್‍ದದರ ಎಲ್ಲಾ ಓದಿ ತಿಳ್ಕಂಬ ಒಳ್ಳೆತನ ದೇಸನ ಆಳುವ ದೊರೆಗೆ ಇರ್‍ದುಲ್ಲೆ. ನಮ್ಮಂತೋವು ಬರ್‍ದ ಕಾವ್ಯ, ನಾಟಕಗಳ ಬೇರೆ ವಿದ್ವಾಂಸರ್ ಹೊಟ್ಟೆಕಿಚ್ಚಿಂದ ಬಾಯಿಗೆ ಬಂದಾಂಗೆ ಟೀಕೆ ಮಾಡಿ ಅದರ ವಿಮರ್ಸೆ‌ಂತ ಹೇಳುವೆ. ಸೂದ್ರರಿಗೆ ಓದು, ಬರ ಬಾದುಲ್ಲೆ. ಓದು, ಬರ ಬಾವ ಹೆಚ್ಚಿನ ಜಾತಿಯೋವ್ಕೆ ಕಾವ್ಯ, ನಾಟಕಗ ಅರ್ತ ಆದ್ಲೆ. ಅವರ್‍ಲಿ ಸಾಹಿತ್ಯನ ಇಸ್ಟಪಡೋವು ಬಾಳಕಮ್ಮಿ ಜನ. ನಿಜ ಹೇಳೊಕರೆ ಲೋಕಲಿ ದುಡ್ಡು, ಚಿನ್ನ ಇದ್ದವ್ಕೆ ಎಲ್ಲೋವುನೂ ಮೊರ್‍ಯಾದೆ ಕೊಟ್ಟವೆ. ಪಂಡಿತರ ಬುದ್ಧಿಗೆ ಬೆಲೆ ಕೊಡೋವು ಯಾರ್‌ನೂ ಇಲ್ಲೆ."

ಬಾಳ ಬೇಜಾರದ ಸೊರಲಿ ಪುರೋಯ್ತ ಮುಂದರ್‍ಸಿದೆ. "ಆಗ ನೀ ಹೇಳ್ದ ಅಲ್ಲ?

ಮೊಂಯಿಂಸರ್‌ಂದ ಮುರ್ಗನ ಮೇಲೇಂತ. ಅದ್ ನಿಜ ಅವ್ವಾ. ಮೊಂಯಿಂಸರ್‌ಗೆ ಉಪಕಾರದ ನೆಂಪು ಇರ್ದುಲ್ಲೆ. ನಾ ಹೆಚ್ಚ್‌ನ ಬೇಜಾರ ಪಟ್ಟದ್ ನನ್ನ ಶಿಷ್ಯರ್‌ಂದನೇ. ಬಡವುಕೆ ನಾ ನನ್ನ ದುಡ್ಡುಲೇ ಹಂಞಿ ಕೊಟ್ಟ್‌ದ್ ಅವರ್‍ನ ಗುರುಕುಲಲಿ ಇಸಿ ಓದಿಸಿದ್ ಉಟ್ಟು. ನಾಟಕ, ಕಾವ್ಯಗಳ ಓದ್‌ದರ್‌ನ ಅವ್ಕೆ ಹೇಳಿಕೊಟ್ಟ್‌ದ್ ಮೇಲೆ ತಂದದ್‌ನೂ ಉಟ್ಟು. ಅವು ಎಲ್ಲೋವೂ ನೆಲೆನ ಕಂಡ್ರು ಅವ್ಕೆ ಈ ಬಡ ಗುರುನ ನೆಂಪಾತ್ಲೆ. ಅವು ದುಡ್ಡ್‌ನ ಮೇಲೆ ಕುದ್ದರುನೂ ಗುರುನ ರುಣನ ತೀರ್‍ಸೋಕೂಂತ ಆತ್ಲೆ. ಅವರ್‌ಂದ ನನ್ನ ಕಸ್ಟಗ ತೀರ್‍ದೇಂತ ನಾ ಏನ್ ಅವ್ಕೆ ಹೇಳಿಕೊಟ್ಟತ್ಲೆ. ಆದರೆ ಒಂದು ಮೊನ್ಸ್‌ಗೆ ಬೇನೆ ಆಗುವ ಸಂಗತಿನೋಡು. ನನ್ನ ಹೀಯಾಳ್ಸೋವೆಲ್ಲಾ ಒಂದ್ ಕಾಲಲಿ ನನ್ನ ಶಿಷ್ಯರ್ ಆಗಿದ್ದೋವು. ಪ್ರತಿಪಲ ಇಲ್ಲದೆ ದುಡ್ಯಬಡಾಂತ ನನ್ನ ಇಸ್ಟ್ ವೊರ್ಸದ ಅನ್ಬವಂದ ನಾ ಪಾಟನ ಕಲ್ತಳೆ."

ಪುರೋಯ್ತ ಸಮ್ಮಾನ ಮಾಡುವ ಸೊರಲಿ ಮುಂದರ್‍ಸಿದೆ, "ಊರ್ ಹೋತ್ ಕಾಡ್‌ಬಾತ್‌ಂತ ಹೇಳ್ವ ಈ ನನ್ನ ಮುದಿಪ್ರಾಯಲಿ ನಾ ನಿಂಗೊಂದು ಕೆಬಿಮಾತ್ನ ಹೇಳ್ನೆ ಕೇಳ್. ಬಂದದರ ಎದ್ರ್ ಹಾಕಂಡ್ ಗೆಲ್ಲಿಕೆ ಯಾರ್‌ಂದಳೂ ಆಕಿಲ್ಲೆ. ಉದಾರ್‍ಣೆಗೆ ನಿನ್ನನೇ ತಕ. ನಿನ್ನ ಹುಟ್ಟ್, ಅಂತಸ್ತ್, ಪೊರ್ಲು, ಹೊಂತಗಾರಿಕೆ, ಇದ್ಯೆ-ಇದ್ ಯಾವ್ದುನೂ ನಿಂಗೆ ಸಾಯಕ್ಕೆ ಬಾತ್ಲೆ. ಈಗ ನಿನ್ನಲ್ಲಿ ಇರ್‍ದು ಸೇಡ್ ತೀರ್‍ಸಿಕಂಬ ಮೊನ್ಸ್. ಸೇಡ್‌ನ ತೀರ್‍ಸಿಕಂಬ ಮೊನ್ಸ್‌ನೇ ಮನುಕುಲದ ಚರಿತ್ರೆಲಿ ನೆತ್ತರ್ ಹರ್‍ಸಿದ್. ಒಬ್ಬ ಹೆಣ್ಣ್ ಬಂದದ್ಕೆ ಎದ್ರ್ ಆಗಿ ಏನ್‌ನ ಮಾಡಿಕೆ ಆದೆ? ಏಚನೆ ಮಾಡಿ ನೋಡು. ಹಸ್ತಿನಾವತಿಗೆ ಬಂದ್ ವಿಚಿತ್ರವೀರ್‍ಯನ ಹೆಣ್ಣ್ ಆಗಿ ಇರ್. ಈಗ ಸಾ ಹಸ್ತಿನಾವತಿನ ಪಟ್ಟದರಾಣಿ ಆಗುವ ಅವ್ಕಾಸ ನಿಂಗೆ ಉಟ್ಟೇ ಉಟ್ಟು. ಭೀಷ್ಮಾಚಾರ್‍ಯರ್ ತಮ್ಮಂಗಾಗಿ ತೊಪ್ಪುನ ಮಾಡಿರ್‍ವೊ. ಆದರೆ ಅವು ದಯೆ ಇಲ್ಲದೊವು ಅಲ್ಲ. ನಿನ್ನ ಪ್ರೀತಿಗೆ ಮೊರ್‍ಯಾದೆ ಕೊಟ್ಟ್‌ದ್ ಅವು ನಿನ್ನ ಸಾಲ್ವ ಭೂಪತಿನ ಹಕ್ಕಲೆ ಕಳ್ಸಿ ಕೊಟ್ಟದೇ ಅದ್ಕೆ ಸಾಕ್ಷಿ. ಕಾಶಿಂದ ನಿನ್ನನ ಕರ್‍ಕಂಡ್ ಬಂದೋವು ಅವು. ನಿಂಗೆ ಒಂದು ಗಟ್ಟಿ ಬೊರ್ದ್‌ನ ಕಟ್ಟಿಕೊಡ್ದು ಅವರ ಧರ್ಮ. ಕೆಲ್ಸಕ್ಕೆ ಬಾರದ ಏಚನೆನ ಮೊನ್ಸ್‌ಂದ ತೆಗ್ದ್‌ದ್ ಹಾಕ್. ನನ್ನೊಟ್ಟಿಗೆ ಹಸ್ತಿನಾವತಿಗೆ ಬಾ."

ಹಸ್ತಿನಾವತಿನ ಪಟ್ಟದರಾಣಿ! ಮೊನ್ಸ್‌ಗೂ ಸರೀರಕ್ಕೂ ಯಾಗೋಳೂ ಸುಕ ಕೊಡಿಕೆ ಆಗದ ವಿಚಿತ್ರವೀರ್‍ಯನ ಕೈ ಹಿಡ್ದರೆ ಸಿಕ್ಕುವ ಪಟ್ಟ ಅದ್. ಲೋಕಲಿ ಗಂಡ್‌ನ ಅಂತಸ್ತ್ ಮತ್ತೆ ದುಡ್ಡ್‌ನ ನೋಡಿ ಮೊದ್ವೆ ಆದವೆ. ಅವ್ಕೆಲ್ಲಾ ನಿಜಲಿನೂ ಸುಕ ಸಿಕ್ಕಿದೆನೋ? ಬಾಳ್‌ಲಿ ಸುಕ, ಸಂತೋಸ ಸಿಕ್ಕೋಕರೆ ಗಂಡನ ಸರೀರಲಿ ರೋಗ ಇರಿಕೆ ಬೊತ್ತ್. ಅಂವ ಕಲೆ, ಸಾಹಿತ್ಯ ಸಂಗೀತಲಿ ಆಸಕ್ತಿ ಇದ್ದ ರಸಿಕ ಆಗಿರೋಕು. ಸುಕ ಕೊಡದ ದುಡ್ಡು, ಚಿನ್ನ, ಅಂತಸ್ತ್ – ಇದೆಲ್ಲಾ ಯಾರ್‍ಗೆ ಬೇಕ್?

ಪುರೋಯ್ತ ದೇವೀಚರಣದಾಸಂಗೆ ವಿಚಿತ್ರವೀರ್‍ಯನ ಸ್ತಿತಿ ಗೊತ್ತಿಲ್ಲದ ಕತೆ ಅಲ್ಲ. ನಂಗೆ ಬೇರೆ ದಾರಿನೇ ಇಲ್ಲೇಂತ ಇಂವ ಹೀಂಗೆ ಹೇಳ್ದ್. ವಿಚಿತ್ರವೀರ್‍ಯಂಗೆ ಅಂವನ ಸೊಂತ ಸಕ್ತಿಂದ ಹೆಣ್ಣ್‌ನ ಪಡ್ಯಕಾತ್ಲೆ. ತನ್ನ ಸೊಂತ ಸಾಮರ್ತ್ಯಂದ ಅಂವಂಗೆ ಹಸ್ತಿನಾವತಿನ

ಆಳುವ ಒಬ್ಬ ಕೂಸುನ ಕೊಡಿಕೆ ಆಕೇ ಇಲ್ಲೆ. ಕುರುವಂಸ ಇಲ್ಲಿಗೆ ನಿತ್ತ್ ಬುಟ್ಟದ್!

ನಿರ್ದಾರದ ದನಿಲಿ ಅಂಬೆ ಹೇಳ್ತ್, "ಪುರೋಯ್ತರೇ, ಹಸ್ತಿನಾವತಿನ ರಾಣಿ ವಾಸನಂಗೆನರ್ಕ ಆದುಬೇಡ. ನಿಮ್ಮೊಟ್ಟಿಗೆ ಹಸ್ತಿನಾವತಿಗೆ ಬಾವ ಮಾತೇ ಇಲ್ಲೆ. ನೀವು ಪ್ರತಿಪಲ ಬೇಕ್‌ಂತ ಹೇಳ್ದ್ ನಂಗೆ ತೊಪ್ಪೊಂತ ಹೇಳ್ದುಲ್ಲೆ. ನಿಮ್ಮ ಸ್ತಾನಲಿ ನಾ ಇರ್ತಿದ್ದರುನೂ ಹೀಂಗೇ ಮಾಡ್ತಿದ್ದೆನೋ ಏನೋ? ಅದ್ ದೊಡ್ಡ ಇಸಯನೇ ಅಲ್ಲ. ಆದರೆ ವಿಚಿತ್ರವೀರ್ಯಂದ ಕುರುವಂಸ ಬೆಳ್ಯಕೆ ಆದೇಂತ ನಿಮ್ಮಂತೋವು ಏಚನೆ ಮಾಡಿಕೆ ಆದ್ಲೇಂತ ನಾ ನೆನ್ಸಿನೆ. ಸಿಂಹಾಸನನ ರಕ್ಷಣೆ ಮಾಡ್ವ ಭೀಷ್ಮನ ಕಣ್ಣೆದ್ರ್‌ಗೆನೇ ಕುರುವಂಸ ನಿತ್ತದೇಂತ ವಿಚಿತ್ರವೀರ್ಯನ ನೋಡ್ದ ದಿನನೇ ನಂಗೆ ಗೊತ್ತಾಗುಟು. ನೀವೇನ್ ಹೇಳ್ರಿ?"

ಪುರೋಯ್ತ ದೇವೀಚರಣದಾಸ ಹೌದೂಂತ ತಲೆನ ಹಂದಾಡ್ಸಿತ್. "ನೀವ್ಗೆ ಮೂರ್ಜನ ಮಗಕ್ಕ ಒಳೊ. ಒಮ್ಮೆನಾದರ್ ಅವರ ಮೊನ್ಸ್‌ಲಿ ಏನುಟ್ಟೊಂತ ಅರ್ತ ಮಾಡಿಕಂಬ ಗೋಜಿಗೆ ನೀವು ಹೋಗಳ್‌ರಿನೋ? ಆರ್ಯಾವರ್ತದ ಹೆಣ್ಮಕ್ಕಳಿಗೆ ಸೊತಂತ್ರ ಮತ್ತೆ ಸಮಬಾಗ ಸಿಕ್ಕುದು ಯಾಗ? ದೊಡ್ಡ ವಿದ್ವಾಂಸರಾದ ನೀವು ನಿಮ್ಮ ಹೊಟ್ಟೆ ತುಂಬುಸುದರ ಮಾತ್ರ ಏಚನೆ ಮಾಡಿಕೆ ಆಗದ್. ಇದ್ಯೆ ಕಲ್ತೋವು, ಇಚಾರವೊಂತರಾಗಿ ಲೋಕಕ್ಕೆ ಬೊಳ್ಪು ಕೊಡೊಕು. ನೀವು ಕಲ್ತ ಇದ್ಯೆಗೆ ಲೋಕನ ತಿದ್ದುವ ಸಕ್ತಿ ಉಟ್ಟು. ಹೆಣ್ಮಕ್ಕಳ್‌ಗೆ ಸೊತಂತ್ರ ಮತ್ತೆ ಸಮಬಾಗದ ಹಕ್ಕ್‌ನ ಬೇಕೇಂತೇಳ್ವ ಹಂಞ ಹೊಸ ಸ್ಲೋಕಗಳ ಬರ್ದ್‌ದ್ ದಯಮಾಡಿ ಧರ್ಮಸಾಸ್ತ್ರಕ್ಕೆ ಸೇರ್ಸಿನಿ. ಇದ್ ನೀವು ನನ್ನಾಂಗಿರುವ ಅಸಾಯ ಹೆಣ್ಣ್‌ಗಳಿಗೆ ಮಾಡುವಂತಾ ದೊಡ್ಡ ಉಪಕಾರ. ದಯಮಾಡಿ ನಿಮ್ಮ ಪ್ರಯಾಣನ ಮುಂದರ್ಸಿನಿ. ಕ್ಷತ್ರಿಯ ಹೆಣ್ಣಾದ ನಾ ನನ್ನನ ರಕ್ಷಣೆ ಮಾಡಿಕಂಬೆ."

*****

# ಹೋಳು – 10

## ಸುಳ್ಳು ಹೇಳಿ ಕುತ್ತಿಗೆ ಕೊಯ್ತ್

ಹೆಜ್ಜೆನ ಸದ್ದ್ ಕೇಳಿ ಭೀಷ್ಮರ್ ಕಣ್ಣ್ ಬುಟ್ತೊ. ಕಳ್ದ ಇರ್‍ಳ್ ಸರ್‍ಯಾಗಿ ನಿದ್ದೆ ಇಲ್ಲದೆ ಇಂದ್ ಇಡೀ ದಿನ ಅವು ಆಗಾಗ ಮಂಪರ್‌ಲಿದ್ದೊ. ಹಗ್ಲ್ ನಿದ್ದೆ ಮಾಡ್ರೆ ಇರ್‍ಳ್‌ನ ಕಳ್ಯೋದ್ ಹೇಂಗೇಂತ ನೆನ್ಸಿಕಂಡ್ ಅವು ನಿದ್ದೆ ಮಾಡಿಕೆ ಹೊರ್‍ಟ್ಟ್ಲೆ. ಇಂದ್ ಯಾವ ಸುದ್ದಿನ ಕೇಳಕಾದೋಂತ ಅವು ತಳಮಳಗೊಂಡಿದ್ದೊ. ಅಂಬೆನ ನೆಂಪು ಜೂವನ ಹಿಂಡ್‌ತಿತ್ತ್. ಈಗ ಕಣ್ಣ್ ಬುಡಿಕಾಕನ ದುರ್ಯೋಧನ ಎದ್ರ್‌ಲಿ ನಿತ್ತುಟು. ಅಂವನ ಮೋರೆ ಬಾಡಿ ಹೋಗಿತ್ತ್.

ದುರ್ಯೋಧನನ ಮೋರೆನ ಓದಿಕೆ ಅವು ಪ್ರಯತ್ನಪಟ್ಟೊ. ಘಟೋತ್ಕಚ ಸತ್ತದರ ತಿಳ್ಸಿಕೆ ಇರ್‍ಳ್ ದುರ್ಯೋಧನ ಬಾತ್ಲೆ. ಕರ್ಣನ ಕಳ್ಸಿ ಕೊಟ್ಟಿತ್ತ್. ಬೀಷ್ಮರ್ ಏಚನೆ ಮಾಡಿಕೆ ಸುರು ಮಾಡ್ದೊ. ನಿನ್ನೆ ಇಂವಂಗೆ ನನ್ನ ಎದ್‌ರ್‍ಸುವ ಧೈರ್ಯ ಇತ್ಲೆ. ಇರ್‍ಳ್‌ನ ಕಾಳಗಕ್ಕೆ ನನ್ನ ಒಪ್ಪುಗೆ ಇತ್ಲೆ. ಇಂವ ಸಾ ತನ್ನ ಗುರಿನ ಸಾದಿಸ್‌ತಿತ್ಲೆ. ಪಾಂಡವರ್‍ಲಿ ಒಬ್ಬನ ಕೊಲ್ಲಿಕೆ ಹೋಗಿ ಬಾಳ ಕಾಲ ಬೊದ್ಕೋಕಾಗಿದ್ದ ಘಟೋತ್ಕಚನ ಕೊಲ್ಲಿಸಿತ್. ತಾನ್ ಮಾಡ್ದ ಪಾಪಾಂತ ಗೊತ್ತಾಗಿ ಅಂವ ಬಂದತೋ? ಬೇಡದ ಸುದ್ದಿನ ಏನಾದರ್ ತಂದುಟೋ?

ಎದೆ ಬಾಳ ಬೇನೆ ಕೊಡಿಕೆ ಸುರು ಮಾಡ್ತ್. ಎದೆಗೆ ಹೆಟ್ಟಿದ ಬಾಣದ ಕೊಡಿನ ಸುತ್ತೋಳೂ ರೇಸಿ ಆಗಿ ಬೇನೆ ಹೆಚ್ಚಾಗುಟು. ನನ್ನ ಗಾಯ ನನ್ನಲೇ ಅಸಯ್ಯ ಹುಟ್ಟಿಸಿದೆ. ಇನ್ನ್ ಬೊದ್ಕಿದ್ ಏನ್ ಸಾದಿಸಿಕೆ ಉಟ್ಟು? ಚಂದ್ರವೊಂಸದವರ್‍ಲಿ ಎಲ್ಲರ್‌ಂದನೂ ಹೆಚ್ಚ್ ಕಾಲ ಬೊದ್ಕಿದೆ. ಬ್ರಹ್ಮಚಾರಿ ಆದಕಾರ್‍ಣ ಇಸ್ಟ್ ದಿನ ಬೊದ್ಕಿದೆ. ಪ್ರಜೆಗ ಹೇಳುವ ಹಾಂಗೆ ನಾ ನೆನ್ಸಿಕನ ಸಾಂಯಂವ. ಸೈಸಿಕೆ ಆಗದ ಬೇನೆನ ಕೊಡ್ವ ಈ ಬಾಣನ ಕಿತ್ತ್ ತೆಗ್ದ್ ನಾ ನೆನ್ಸಿದಾಂಗೆ ಸತ್ತ್ ಬುಡಲಿನೋ?

ದುರ್ಯೋಧನಂಗೆ ಭೀಷ್ಮ ಸುಮ್ಮಂಗಿರುದರ ಕಂಡ್ ಆತಂಕ ಸುರಾತ್. ಗಾಬೆರಿನ ಸೊರಲಿ ಅಂವ ಕೇಳ್ತ್ "ಏನಾದೆ ಅಜ್ಜಪ್ಪಾ? ಏನಾದರ್‌ಬೇಕಿತ್ತೋ?"

ಹೇಳಿ ಬುಡಲಿನೋ? ನಂಗೆ ಬೇಕಿರ್‍ದು ಯುದ್ಧ ನಿಲ್ಲಲೀಂತ. ಅದಕ್ಕೆ ಇಂವ ಒಪ್ಪಿಕ್ಕಿಲ್ಲೆ. ನಂಗೆ ಬೇರೆ ಏನೂ ಬೇಡ. ಯುದ್ಧ ಬಿರ್‍ಸ್‌ಲಿ ನಡ್ದದೆ. ದ್ರೋಣಾಚಾರ್ಯರ್ ಸೇನಾಧಿಪತಿ ಆದ ಮೇಲೆ ಧರ್ಮಯುದ್ಧಾಂತೇಳ್ದು ಸುಳ್ಳಾತ್. ಕುರುಸಾಮ್ರಾಜ್ಯದ ಉತ್ತರಾಧಿಕಾರಿ ಆಕಾಗಿದ್ದ ಆ ಎಳ್ತ್ ಹೈದ ಅಭಿಮನ್ಯುನ ದೊಡ್ಡ ದೊಡ್ಡ ಅತಿರಥ, ಮಹಾರಥರ್ ಮೋಸಂದ ಕೊಂದೊ. ಅದ್ಕೆ ಸೇಡ್ ತೀರ್‍ಸಿಕೆ ಜಯದ್ರಥನ ಅರ್ಜುನ ಮೋಸಂದ ಕೊಂದತ್. ಧರ್ಮಕ್ಷೇತ್ರ ಆದ ಕುರು ಯುದ್ಧಲಿ ಮೋಸದ ಧರ್ಮಯುದ್ಧ

ನಡ್ದ್ ಹೋತ್. ಅದ್ಕೆ ಗುರು ದ್ರೋಣರ್ ಒಪ್ಪಿಗೆ ಕೊಟ್ಟೊ. ಇವರ ತಂತ್ರಕ್ಕೆ ಅಲ್ಲಿ ಪಾಂಡವರ ಪಾಳ್ಯಲಿ, ಕೃಷ್ಣ ಪ್ರತಿತಂತ್ರ ಹೊಡ್ದೆ ಯುದ್ಧಲಿ ತಂತ್ರಗಾರಿಕೆನೇ ಮೆರ್ದದೆ. ಈಗ ದುರ್ಯೋಧನ ಒಬ್ಬನೇ ಬಂದುಟು. ಯಾಕಿರ್ದು?

ಭೀಷ್ಮರ್ ಏಚನೆಲಿ ಮುಣ್‌ಂಗಿರಿಕಾಕನ ಅಲ್ಲಿಗೆ ಇನ್ನೊಬ್ಬ ಮೊಂಯಿಂಸ ಬಾತ್. ಅಂವ ಕರ್ಣ. ಅಂವ ನಿನ್ನೆ ಇರ್‍ಳ್ ಹೊತ್ತ್‌ಲಿ ಅವರೊಟ್ಟಿಗೆ ತುಂಬಾ ಹೊತ್ತ್ ಮಾತಾಡಿದ್ ಹೋಗುಟ್ಟು. ಅಂವನ ಮೊನ್ಸ್‌ಲಿ ಇದ್ದದರ್ನ ಎಲ್ಲಾ ಹೇಳಿಕಂಡ್ ಮೊನ್ಸ್‌ನ ಹಗ್ರ ಮಾಡಿಕಂಡತ್. ಭೀಷ್ಮರ್ ಬಾಕಿಲ್‌ನ ಕಡೆ ನೋಡ್ದೊ. ಅದರ ಅರ್ತ ಮಾಡಿಕಂಡ ದುರ್ಯೋಧನ ಹೇಳ್ತ್. "ಇನ್ನ್ ಯಾರುನೂ ಬಾದುಲ್ಲೆ ಅಜ್ಜಪ್ಪಾ. ಇಂವ ಸುರುಗೆ ಒಪ್ಪಿತೇ ಇಲ್ಲೆ. ಆ ಮೇಲೆ ಅದ್ ಹೇಂಗೋ ಒಪ್ಪಿತ್. ಕರ್ಣನ ಸೇನಾಧಿಪತಿ ಮಾಡಿಕೆ ನಿರ್ದಾರ ಮಾಡ್ಯಳೆ. ಇದಕ್ಕೆ ನಿಮ್ಮ ಒಪ್ಪಿಗೆ ಮತ್ತೆ ಆಶೀರ್ವಾದ ಬೇಕ್."

ಕೋಣೆ ಒಳಗೆ ಇದ್ದ ಅರೆಕತ್ತಲೆ ಬೊಳ್ಪ್‌ಲಿ ಅವರ ಇಬ್ಬೊರ ಮೋರೆಲಿ ಏನ್ ಕಂಡದೇಂತ ಗೊತ್ತಾತ್ಲೆ. ಕರ್ಣನ ಸೇನಾಧಿಪತಿನ ಆಗಿ ಮಾಡೊಕೊರೆ ದ್ರೋಣರ ಕೈ ಬೇನೆ ಜೋರಾಗಿರೊಕು. ಅಭಿಮನ್ಯುನ ಬಾಣಂದ ಹಾರಿ ಹೋದ ಹೆಬ್ಬೆರ್‍ಳ್‌ನ ಬುಡಲಿ ಹುಣ್ಣಾಗಿರೊಕು. ದ್ರೋಣಾಚಾರ್ಯರೂ ದುರ್ಯೋಧನನ ಪಾಲ್‌ಗೆ ಪ್ರಯೋಜನಕ್ಕೆ ಇಲ್ಲದಂಗಾತ್‌ಂತ ನೆನ್ಸಿ ಭೀಷ್ಮರ್ ಕೇಳ್ದೊ. "ಕುಂಞಿ, ದ್ರೋಣಾಚಾರ್ಯರ್‌ಗೆ ಯುದ್ಧರಂಗಂದ ಬುಡ್ಗಡೆ ಆಕಾದ ಕಾರ್ಣ ಏನ್ ಬಾತ್?"

"ಮೋಸ ಅಜ್ಜಪ್ಪಾ ಮೋಸ. ಯುಧಿಷ್ಠಿರ ಮೋಸಮಾಡಿ ಬುಟ್ಟತ್." ನೊಡ್ಗುವ ಸೊರಲಿ ದುರ್ಯೋಧನ ಹೇಳ್ದ್, "ಇಂದ್ ಬಾರಿ ದೊಡ್ಡ ಕಾಳಗ ನಡ್ತ್. ಗುರುಗಳ ಪರಾಕ್ರಮನ ನೋಡಿ ನಾವುನೂ ಬುಟ್ಬಬಾಯಿ ಬುಟ್ಟಾಂಗೇ ನೋಡ್ದೊ. ರಣಾಂಗಣಲಿ ಗದ್ದಳ ಮಾಡ್ದ ಗುರುಗ ಮತ್ಸ್ಯ ದೇಸದ ರಾಜ ವಿರಾಟನ ಮತ್ತೆ ಪಾಂಚಾಲದ ದ್ರುಪದನ ಕೊಂದೊ. ಅದೇ ಭರಲಿ ಯುದ್ಧ ನಡ್ಯತಿದ್ದರೆ ನಾವು ಗೆದ್ದ್ ಬುಡ್ತಿದ್ದೊ. ಆದರೆ ಅಜ್ಜಪ್ಪಾ, ಆ ಯುಧಿಷ್ಠಿರ ಮೋಸ ಮಾಡಿ ಬುಡ್ತ್."

ದುರ್ಯೋಧನನ ದನಿ ದುಕ್ಕಲಿ ತುಂಬಿದ್ ಮಾತ್‌ನ ಮುಂದರ್ಸಿಕೆ ಅಂವಂಗೆ ಕಸ್ಟ ಆತ್. ಮಂಚದ ಎದ್‌ರ್ ಇದ್ದ ಆಸನಲಿ ತಲೆ ಬೊಗ್ಗಿಸಿ ಕುದ್ದ್‌ಕಂಡತ್. ದ್ರೋಣರ್ ದ್ರುಪದನ ಕೊಂದೊಳೋಂತೇಳ್ರೆ ಹಳೆನ ಸೇಡ್‌ನ ಅವು ಮರ್ತ್ತಿಲ್ಲೇಂತ ಆತ್. ತನ್ನ ಶಿಷ್ಯರ್‌ಂದ ಅಂದ್ ಸೇಡ್ ತೀರ್ಸಿಕಾಗಿ ದ್ರುಪದನ ಗರ್ವಭಂಗ ಮಾಡ್ಸಿದ ದ್ರೋಣಾಚಾರ್ಯರ್ ಅಸ್ಪರ್‌ಂದ ಸುಮ್ಮಂಗಾಗದೆ ಇಂದ್ ದ್ರುಪದನ ಕೊಂದನೋ? ಅಲ್ಲರೆ ಪಾಂಡವರ್ರಿ ಯಾರ್ದೂ ಕೊಲ್ಲಕಾಗದೆ ಇರುವ ಹತಾಶೆಂದ ಇಂದ್ ಈ ಕೆಲ್ಸನ ಮಾಡ್ದನೋ?

ದುರ್ಯೋಧನ ಸುದಾರ್ಸಿಕಂಡ್ ಮಾತ್‌ನ ಮುಂದರ್ಸಿತ್. "ಒಂದ್ ಹಂತಲಿ ಪಾಂಡೋವು ಇದ್ದಕಿದ್ದ ಹಾಂಗೆ ಯುದ್ಧನ ನಿಲ್ಲಿಸಿದೊ. ಏಕೇಂತ ನಾವ್ಗೆ ಗೊತ್ತಾತ್ಲರೂ ನಾವುನೂ ಯುದ್ಧ ನಿಲ್ಲಿಸಿದೊ. ಶತ್ರು ಪಕ್ಷಂದ ಯುಧಿಷ್ಠಿರ ದೊಡ್ಡ ದನಿಲಿ "ಅಶ್ವತ್ಥಾಮ ಹತಃ" ಎಂತ ಹೇಳ್ತ್. ಅಸ್ಪೊತ್ತಿಗಾಕನ ಕೃಷ್ಣ ಅಂವನ ಪಾಂಚಜನ್ಯ ಸಂಕನ ಊದಿತ್.

ಇದರ್‌ಂದ ಎದೆ ಕಟ್ಟಿದಂಗಾಗಿ ಗುರುಗಳ ಕೈಲಿದ್ದ ಬಿಲ್ಲ್ ಜಾರಿ ಬೀತ್. ರಥಲಿ ಕುಸ್‌ದ್ ಬಿದ್ದ ಗುರುಗಳ ತಲೆನ ಧೃಷ್ಟಧ್ಯುಮ್ನ ಕತ್ರಿಸಿ ಹಾಕಿ ಗೆದ್ದೇಂತ ಬೊಬ್ಬೆ ಹಾಕಿತ್."

ಭೀಷ್ಮರ್‌ಗೆ ದ್ರುಪದನ ದತ್ತ ತಕಂಡ ಸಂಗತಿ ನೆಂಪಾತ್. ದ್ರೋಣರ ಶಿಷ್ಯರ್‌ಂದ ಗರ್ವ ಮುರ್ಕಂಡಿದ್ದ ದ್ರುಪದಂಗೆ ದ್ರೋಣಾಚಾರ್ಯರ ಹೇಂಗಾದರ್ ಮಾಡಿ ಕೊಲ್ಲುಸೋಕೂಂತೇಳ್ವ ಸೇಡ್ ಇತ್ತ್. ಅಂವನ ದುರ್ದೈವಕ್ಕೆ ಸುರುನ ಸಂತಾನ ಶಿಖಂಡಿ ಆಗಿ ಹೋತ್. ದ್ರೋಣಾಚಾರ್ಯರ್‌ನ ಕೊಲ್ಲೋಕುಂತೇಳಿನೇ ಅಂವ ಒಬ್ಬ ಹೈದನ ಮತ್ತೆ ಒಂದ್ ಗೂಡೆನ ಯಜ್ಞದ ಮೂಲಕ ದತ್ತ ಪಡ್ದಿತ್ತ್. ಆ ಹೈದನೇ ಧೃಷ್ಟಧ್ಯುಮ್ನ. ಅಂವನಲ್ಲಿ ಕಾಲ್ನ ಉಗ್ರ್‌ಂದ ತಲೆನ ಕೊಡಿಗೆ ಮುಟ್ಟ ದ್ರೋಣ ದ್ವೇಷನ ತುಂಬುಸಿರೋಕು. ಇಲ್ಲರೆ ಕೈಲಿ ಆಯ್ದ ಹಿಡ್ಯದ, ಮೊತಿತೊಪ್ಪಿ ರಥಲಿ ಬಿದ್ದ್‌ಕಂಡಿದ್ದ ಆಚಾರ್ಯನ ತಲೆನ ಕಡ್ಯಕೆ ಧೃಷ್ಟಧ್ಯುಮ್ನಂಗೆ ಸಾಧ್ಯ ಆಕಿತ್ಲೆ. ಸತ್ತ ಮೇಲೆನೂ ದ್ರುಪದ ಸೇಡ್‌ನ ತೀರ್ಸಿಕಂಡತ್.

ಹಂಞ ಹೊತ್ತ್ ಕಳ್ದ ಮೇಲೆ ದುರ್ಯೋಧನ ಮತ್ತೆ ಹೇಳಿಕೆ ಸುರುಮಾಡ್ತ್. "ನಾವು ದಿಕ್ಕ್ ತೋರದೆ ಏನ್ ಮಾಡ್ದೂಂತ ಏಚನೆ ಮಾಡಿ ಕಂಡಿರಿಕಾಕನ ಅಶ್ವತ್ಥಾಮನ ನೋಡ್ದೊ. ನಾವ್ಗೆ ಎಲ್ಲಿಲ್ಲದ ಕೋಪಬಂದ್ ಯುಧಿಷ್ಠಿರನ ಮೇಲೆ ಆಯ್ದ ತೆಗ್ದೊ. "ನೀ ಗುರುಗಳ ಎದ್ರ್ ಸುಳ್ಳು ಬೊಗ್ಳಿ ಅವು ಸಾಯಕೆ ಕಾರ್ಣ ಆದ ಪಾಪಿ." ಎಂತ ಬೊಯ್ದೊ ಅಂವನಲ್ಲಿ ಹಂಞ ಸಾ ತೊಪ್ಪು ಮಾಡ್ದ ದುಕ್ಕ ಇತ್ಲೆ. "ನಾ ಯಾಗೋಳೂ ಸುಳ್ಳು ಹೇಳ್ದಂವ ಅಲ್ಲ ನಮ್ಮ ಭೀಮಸೇನ ನಿಮ್ಮ ಪಕ್ಷಲಿ ಇದ್ದ ಅಶ್ವತ್ಥಾಮಾಂತೇಳ್ವ ಆನೆನ ಕೊಂದದಕ್ಕೆ "ಅಶ್ವತ್ಥಾಮ ಹತಃ ಕುಂಜರ" ಎಂತ ಹೇಳ್ದೆ. ಕೃಷ್ಣನ ಪಾಂಚಜನ್ಯ ಸಂಕದ ದನಿಂದಾಗಿ ಕುಂಜರ ಎಂಬ ಸಬ್ದ ನೀವುಗೆ ಕೇಳ್ಸದಿದ್ದರೆ ಅದ್ ನನ್ನ ತೊಪ್ಪಾದುಲ್ಲೆ." ಎಂತ ಹೇಳಿ ತೊಪ್ಪುಸಿಕಂಡತ್. ಅಂವನ ಕೆಪ್ಪೆಗೆ ಎರ್ಡ್ ಹೊಡ್ಯೋಕೂಂತ ನಾ ಮುಂದೆ ಹೋಕನ ಭೀಮಾರ್ಜುನರ್ ಅಂವನ ಸುತ್ತ ಕೋಟೆಕಟ್ಟಿ ಅಂವನ ರಕ್ಷಣೆ ಮಾಡ್ದೊ. ನೀವು ಆ ಸುಳ್ಳ ಯುಧಿಷ್ಠಿರನ ಬಾಯ್ತುಂಬಾ "ಧರ್ಮರಾಯಾ" ಎಂತ ಕರ್ದರೆ ಹೇಳಿ ಅಜ್ಜಪ್ಪಾ, ಯುಧಿಷ್ಠಿರ ಮಾಡ್ದ್ ಧರ್ಮನೋ?"

ಭೀಷ್ಮರ್ ಏಚನೆಗೆ ಒಳಗಾದೊ. ಧುರ್ಯೋಧನ ಧರ್ಮದ ಪ್ರಸ್ನೆ ಎತ್ತಿದೆ. ವಾರಣಾವತಲಿ ಅರ್ಗ್ಗನ ಮನೆ ಕಟ್ಟಿ ಪಾಂಡವರ ಬೂದಿ ಮಾಡಿಕೆ ಹೊರ್ಟಂವ ಇಂವ. ಕಪಟ ಜೂಜು, ದ್ರೌಪದಿನ ಸೀರೆನ ಎಳ್ದದ್, ಪಾಂಡೋವರ ಕಾಡಿಗೆ ಕಳ್ಸಿದ್ ಮತ್ತೆ ತಲೆ ಮರ್ಸಿಕಂಡ್ ಅವು ಇದ್ದದ್ ಧರ್ಮಾಂತ ಈಗಳು ಸಾ ಅಂವ ವಾದ ಮಾಡ್ದೆ. ಚಿನ್ನ ಕೊಟ್ಟ್‌ದ್, ಇದರ ಒಪ್ಪುವಾಂಗೆ ಶ್ಲೋಕಗಳ ಪುರೋಯ್ತರ್‌ಂದ ಬರ್ಸಿಕಂಡ್ ಇಸಿಕಂಡುಟ್ಟು. ಪಾಂಡವೋರ ಹುಟ್ಟ್‌ನ ಮೂಲನ ಕೆದ್ಕಿದ್ ಅವ್ಕೆ ಕುರುಸಾಮ್ರಾಜ್ಯಲಿ ಹಕ್ಕ್ ಇಲ್ಲೇಂತ ಹೇಳ್ವ ಇಂವ ಹೇಳಿಕಂಡ್ ಬಾವ ಧರ್ಮ ಯಾವ್ದು?

ಭೀಷ್ಮರ್‌ಗೆ ದ್ರೌಪದಿನ ಸೀರೆನ ಎಳ್ದ ಸಂಗತಿ ನೆಂಪಾತ್. ತುಂಬಿದ ಸಭೆಗೆ ದ್ರೌಪದಿನ ದುಶ್ಶಾಸನ ಎಳ್ಕ್ ತಾಕನ ಅದ್ ಧರ್ಮದ ಪ್ರಸ್ನೆ ಎತ್ತಿತ್ತ್. ಜೂಜ್‌ಲಿ ಸೋತ್ ದುರ್ಯೋಧನನ ಆಳ್ ಆಗಿ ತನ್ನ ಸೊತಂತ್ರನ ಕಳ್ಕಂಡ ಮೇಲೆ, ತನ್ನ ಹೆಣ್ಣ್‌ನ

ಪಂತಕ್ಕೆ ಇಸುವ ಸೊತಂತ್ರ ಧರ್ಮರಾಯಂಗೆ ಇಲ್ಲೇಂತ ಅದ್ ವಾದಿಸಿತ್. ತನ್ನ ಸೊತಂತ್ರನ ಕಳ್ಕೊಂಡೋವು ಬೇರೆಯೋವ್ರ ಮೇಲೆ ಹಕ್ಕ್‌ನ ಹೊಂದಿಕೆ ಆದೆನೋ? ಎಂತ ಪ್ರಸ್ನೆ ಮಾಡ್ತ್. ಅದರ ಪ್ರಸ್ನೆಗೆ ಒಬ್ಬ ವಿಕರ್ಣನ ಬುಟ್ಟ್‌ದ್ ಬೇರೆ ಯಾರುನೂ ಸಾ ಉತ್ತರ ಕೊಟ್ಟಿತ್ತ್ಲೆ. ವಿಕರ್ಣನ ಗದ್ರಿಸಿ ದುರ್ಯೋಧನ ಸುಮ್ಮಂಗಾಗಿಸಿತ್. ಅದರ್‌ಂದ ಮೇಲೆ ಯಾರ್‍ನು ಸಾ ಉಸ್ರೆತ್ತಿತ್ಲೆ. ಉರ್ಯೋಧನನ ಮೆಚ್ಚಿಸಿಕೇಂತ ಪುರೋಯ್ತ ಒಬ್ಬ "ಹೆಣ್ಣ್‌ಂಗೆಸೊತಂತ್ರ ಇಲ್ಲೆ" ಎಂತ ಗಟ್ಟಿ ದನಿಲಿಹೇಳ್ತ್. ದುಶ್ಯಾಸನ ದ್ರೌಪದಿನಸೀರೆನ ಎಳ್ದ್ ತುಂಬಿದ ಸಭೆಲಿ ಅದರ ಉರ್ಬುಳಿ ನಿಲ್ಲುಸೋಕೂಂತ ಇರಿಕಾಕನ ಎಲ್ಲಿತ್ತೋ ಅಂವ, ಆ ಕೃಷ್ಣ ಸಮಯಕ್ಕೆ ಸರಿಯಾಗಿ ಬಾತ್. ಜೂಜ್‌ಲಿ ಸೋತ್‌ದ್ ಬೇರೆಯೋವ್ರ ಆಳಾದ ಗಂಡಂಗೆ ತನ್ನ ಹೆಣ್ಣ್‌ನ ಪಂತಕ್ಕೆ ಒಡ್ಡುವ ಹಕ್ಕ್ ಇಲ್ಲೇಂತ ವಾದ ಮಾಡ್ತ್. ಶಕುನಿ ಅಂವನ ವಾದಕ್ಕೆ ಸಾಸ್ತ್ರ ಆದಾರನ ಕೇಳಿಕಾಕನ ಪಂಡಿತರ್ ತಲೆದೂಂಗುವ ಹಾಂಗೆ ಶ್ಲೋಕ ಒಂದರ ಹೇಳ್ತ್. ಅದ್ ಅಂವ ಆ ಕ್ಷಣಕ್ಕೆ ಕಟ್ಟಿದ ಶ್ಲೋಕ. ಅಸ್ಟರಮುಟ್ಟ ಯಾವ್ದು ಧರ್ಮ, ಯಾವ್ದು ಅಧರ್ಮ ಎಂತ ಗೊಂದಲಲಿ ಮುಣುಂಗಿ ಹೋಗಿದ್ದ ಭೀಮ ಕೋಪಂದ ಗದೆನ ಎತ್ತಿಕಂಡ್ ದುಶ್ಯಾಸನನ ಕೊಂದ್ ಹಾಕಿಕೆ ಮುಂದೆ ಹೋತ್. ಯುಧಿಷ್ಠಿರ ತಡ್ಯದಿರ್ತಿದ್ದರೆ, ಅಂದ್ ದುಶ್ಯಾಸನನ ಹೆಣ ಉರ್‍ಳ್ತಿತ್ತ್.

ಪಾಂಡೋವು ಕುರುಸಾಮ್ರಾಜ್ಯಲಿ ತಮ್ಮ ಹಕ್ಕ್‌ನ ಪಾಲ್‌ನ ಅಂದೇ ಪಡ್ಕಂಬತಿದ್ದರೆ ಈ ಯುದ್ಧ ನಡ್ಯಕಿತ್ಲೇಂತ ಭೀಷ್ಮರ್‌ಗೆ ಒಂದೆರ್‍ಡ್ ಸಲ ಆತಿತ್ತ್. ಜೂಜು ಆಡ್ದೇ ಮೋಸಾಂತೇಳಿಕನ ವನವಾಸ, ತಲೆಮರ್‍ಸಿಕಂಡಿರ್‍ದು ಇದರ ಮಾಡದಿರ್‍ದು ಅಧರ್ಮ ಆಗ್ತಿತ್ಲೆ. ದುರ್ಯೋಧನ ತಕ್ರಾರ್ ಮಾಡ್ತಿದ್ದರೆ ಅದ್ಕೆ ಪ್ರತಿಯಾಗಿ ತಂತ್ರ ಹೂಡಿಕೆ ಕೃಷ್ಣ ಇದ್ದೇ ಇರ್‍ತಿತ್ತ್. ಆದರೆ ಯುಧಿಷ್ಠಿರ ಅಂವನ ಮಾತ್ ಕೇಳಿಕಂಡ್ ಕಾಡ್‌ಲಿ ಇರಿಕೆ ಹೊರ್‍ಟೇ ಬುಟ್ಟತ್. ಒಟ್ಟಿಗೆ ತಮ್ಮಂದರ್‌ನೂ ಹೊರ್‍ಟೊ. ದ್ರೌಪದಿನೂ ಹೊರ್‍ಟತ್. ಹದಿಮೂರ್ ವೊರ್ಸ ಪಾಂಡವೋರೊಟ್ಟಿಗೆ ಇದ್ದ್‌ದ್ ಅವರಲ್ಲಿದ್ದ ಕೌರವರ ಮೇಲೆ ಇರುವ ಹಗೆತನ ಆರದಾಂಗೆ ನೋಡಿಕಂಡತ್. ಇಂದ್ ಯುಧಿಷ್ಠಿರ ಸುಳ್ಳು ಹೇಳ್ತಿದ್ದರೆ ಅದ್ಕೆ ಕೃಷ್ಣನ ತಂತ್ರ ಕಾರ್‍ಣ ಆಗಿರೋಕು. ತನ್ನ ಮಾತ್ ಗುರುಗಳ ಕೊಲ್ಲಿಕೆ ಕಾರ್‍ಣ ಆದೇಂತ ಸಂಸಯ ಅಂವನಲ್ಲಿ ಎಳ್ಳ್‌ನ ಏಳ್ ಪಾಲ್‌ನಸ್ಟ್‌ನೂ ಇರ್‍ತಿತಿದ್ದರೆ ಅಂವ ಕಂಡಿತಾ ಹಾಂಗೆ ಹೇಳ್ತಿತ್ಲೆ.

ಒಮ್ಮೆ ಉದ್ದದ ಉಸ್ರ್‌ನ ಎಳ್ದ್‌ಕಂಡ್ ಭೀಷ್ಮರ್ ಹೇಳ್ದೊ. "ಕುಂಞಿಮೋಸದ ಜೂಜುನ ಆಡ್ದಮೇಲೆ ತುಂಬಿದಸಭೆಗೆ ದ್ರೌಪದಿನ ಎಳ್ಕಂಡ್‌ಬಂದ್ ಅದರಸೀರೆನ ಎಳ್ಯಕೆ ದುಶ್ಯಾಸನಹೊರ್‍ಡಿಕನನಿನ್ನದ್ ಅಧರ್ಮಾಂತ ತಿಳ್ಕಂಡಿದ್ದರುನೂನಾ ಏನ್‌ಸಾಮಾಡದೆ ಇದ್ದೆ. ಅಂದ್‌ಂದ ಧರ್ಮ-ಅಧರ್ಮದ ತೀರ್ಪುನ ನೀಡುವ ಹಕ್ಕ್‌ನ ನಾ ಕಳ್ಕಂಡೆ ಒಂದ್ ಮಾತ್ ನಿಜ. ದ್ರುಪದನ ಮಕ್ಕ ಕುರುವಂಸ ಮುತ್ತಿಕೆ ಕಾರ್‍ಣ ಆದೆ. ಸಿಕಂಡಿಂದ ನಾ ಹೀಂಗಾದೆ. ದೃಷ್ಟದ್ಯುಮ್ನ ಗುರು ದ್ರೋಣಾಚಾರ್ಯರ ನಿಮ್ಮ ಕಣ್ಣೆದ್ರ್‌ಗೇನೇ ಕೊಂದ್‌ದ್ ಹಾಕಿತ್. ಇನ್ನ್ ಒಳ್ದದ್ ದ್ರೌಪದಿಗಾದ ಅಪಮಾನಕ್ಕೆ ಪ್ರತೀಕಾರ ಆಗಿ ಭೀಮ ಮಾಡ್ದ ಸಪತನ ನಡ್ಸುದು. ದ್ರೋಣರ್ ಸತ್ತೊಳೊ. ನಾ ಬೊದ್ಕಿದ್ದ್‌ದ್‌ನೂ ಸತ್ತಂತಾಗಳೆ. ಇನ್ನ್

ದ್ರೌಪದಿನ ಕಾರ್ಣಕ್ಕಾಗಿ ಭೀಮ ಸಪತಗ ಆಗದ ಹಾಂಗೆ ತಡ್ಯೋವು ಯಾರೊಳೊ ಮಂಜಾ?"

ದುರ್ಯೋಧನ ಮಾತಾಡ್ತ್ಲೆ. ಅಜ್ಜಪ್ಪ ಹೇಳ್ದು ಸತ್ಯಾಂತ ಅಂವ ಒಪ್ಪಿಕಂಡ ಹಾಂಗಿತ್ತ್. ಹಂಙ ಹೊತ್ತ್ ಸುಮ್ಮಂಗಿದ್ದ್ ಭೀಷ್ಮರೇ ಮಾತ್‌ನ ಮುಂದರ್ಸಿದೊ. "ಕರ್ಣನ ಹಕ್ಕಲೆ ನಂಗೆ ಪ್ರೀತಿ ಉಟ್ಟು, ಬೇಜಾರನೂ ಉಟ್ಟು, ಅಂವಬಾಳ ದೊಡ್ಡ ಸಕ್ತಿವೊಂತ. ಸೂದ್ರ ಆದ ಅಧಿರಥನ ಸಾಂಕ್ ಮಂಜ ಆಗಿದ್ದದಕ್ಕೆ ಜೂವಲಿರಿಕನ ಮುಟ್ಟಬೇನೆನ ತಿಂದಂವ. ಅಂವಂಗೆ ಬೇನೆ ಮಾಡೋಕೂಂತ ಈ ಮಾತ್‌ನ ನಾ ಹೇಳ್ತುಲ್ಲೆ. ನೀನೆ ಏಚನೆ ಮಾಡಿ ನೋಡ್. ಇಸ್ಟ್ ದಿನದ ಯುದ್ಧಲಿ ಪಾಂಡೋವರಲ್ಲಿ ಒಬ್ಬನನಾದರ್‌ನೂ ಕೊಲ್ಲಿಕೆ ಅಂವಂದ ಆತಿಲ್ಲೆ. ನನ್ನಂದ, ದ್ರೋಣಾಚಾರ್ಯರ್‌ಂದ ಆಗದರ ಕರ್ಣಂದ ಆದೂಂತ ನೀ ತಿಳ್ಯಬಡ. ಕುಂಞೀ, ಭೀಷ್ಮ ಮತ್ತೆ ದ್ರೋಣರ ಬಲಿದಾನಂದ ಯುದ್ಧ ನಿಲ್ಲಲಿ. ಕೃಷ್ಣ ಮತ್ತೆ ಯುಧಿಷ್ಠಿರ ಈ ಬಿಡದಿಗೆ ಬರ್‍ಲಿ. ಜೂಜಾಡಿಕೆ ಮುಂದೆ ಮಾಡ್ದ ಒಪ್ಪಂದದ ಪ್ರಕಾರ ನ್ಯಾಯಲಿ ಪಾಂಡೋವರಿಗೆ ಕೊಡಕಾದರ ಕೊಡು. ಈ ಅರ್ತ ಇಲ್ಲದ ಕಾಳಗ ಮುಗ್ದ್‌ದ್ ಧರ್ಮಕ್ಕೆ ಜಯ ಸಿಕ್ಕಿತ್‌ಂತ ಹೇಳ್ವ ಸಂತೋಸನ ಅಕೇರಿಗಾದರ್ ನಂಗೆ ಕೊಡ್."

ದುರ್ಯೋಧನ ಗಂಬೀರ ಆತ್. "ಅಜ್ಜಪ್ಪಾ ನೀವು ಎಲ್ಲಾ ತೊಪ್ಪ್‌ನನನ್ನ ಒಬ್ಬನ ತಲೆ ಮೇಲೆ ಹೊರ್‍ಸಿರೆ. ಪಾಂಡೋವು ಪಾಂಡು ರಾಜನ ಮಕ್ಕ ಅಲ್ಲ. ಅವುಕೆ ಕುರು ಸಾಮ್ರಾಜ್ಯಲಿ ಹಕ್ಕ್ ಇಲ್ಲೆ. ಕಾಡ್‌ಲೆಲ್ಲೋ ಸತ್ತ್ ಹೋಕಾಗಿದ್ದ ಪಾಂಡವರ ಈ ಮಟ್ಟಕ್ಕೆ ತಂದೋವು ನೀವು. ಕುರು ಸಾಮ್ರಾಜ್ಯ ಕೌರವರ್‍ದ್ ಅದ್ ಯಾಗೋಳೂ ಪಾಂಡವರ್‍ದ್ ಆಕೆ ಬೊತ್ತ್. ಅವರ್‍ದಾದರೆ ಅದ್ ಕುರುಸಾಮ್ರಾಜ್ಯದ ಸೋಲೂಂತ ಆದೆ. ಒಂದ್ ನಿಮ್ಗೆ ಪಾಂಡವರ ಹುಟ್ಟ್‌ನ ಪ್ರಶ್ನೆನ ಕರೆಗಿಸಿ ಬುಡೊಮೊ. ನಿಮ್ಮ ಈ ಅವಸ್ಥೆಗೆ ತಂದದ್‌ಕ್ಕೆ, ಗುರು ದ್ರೋಣಾಚಾರ್ಯರ ಕೊಂದದಕ್ಕೆ ನಾ ಸೇಡ್‌ನ ತೀರ್‍ಸೋಕೇ ತೀರ್‍ಸೋಕು. ಈ ಹಂತಲಿ ನಾ ರಾಜಿ ಪಂಚಾತಿಗೆ ಇಳ್ದರೆ ಅದ್ ಸೋಲ್‌ನ ಒಪ್ಪಿಕಂಡಾಂಗಾದೆ. ಜೂವಬಯಂದ ದುರ್ಯೋಧನ ಪಾಂಡೋವ್ಕೆ ತಲೆ ಬೊಗ್ಗಿಸೀತ್‌ಂತ ಲೋಕದ ಜನಂಗ ನೆಗಾಡುವೊ."

ಭೀಷ್ಮರ್ ಮತ್ತೆ ಏಚನೆಲಿ ಬಿದ್ದೊ. ಪಾಂಡೋವರ ಕೌರವರೊಟ್ಟಿಗೆ ತೂಗಿ ನೋಡ್ದೊ. ಪಾಂಡೋವು ಪಾಂಡುರಾಜನ ಮಕ್ಕ ಅಲ್ಲಾಂತ ಲೋಕಕ್ಕೆ ಗೊತ್ತಿದ್ದ ಇಸಯ. ಆದರೆ ಯಾರಾದರುನೂ ಕುಂತಿನ ಭಾಗ್ಯಕ್ಕೆ ಹೊಟ್ಟೆ ಕಿಚ್ಚ್ ಪಡೊಕು. ಯುದ್ಧಂದ ಯಾಗೋಳೂ ಓಡಿ ಹೋಗದ ಯುಧಿಷ್ಠಿರನ ಧರ್ಮನಿಷ್ಠೆಂದಾಗಿ ಅಂವಂಗೆ ಧರ್ಮರಾಯಾಂತ ಕರ್‍ದವೆ. ಭೀಮನ ಬಾರಿ ದೊಡ್ಡ ಗಾತ್ರದ ಸರೀರದ ಸಕ್ತಿ, ಗದೆ ಮತ್ತೆ ಮಲ್ಲಯುದ್ಧಲಿ ಇರುವ ಸಾಮರ್ತ್ಯ, ಇಡೀ ಆರ್ಯಾವರ್ತಲಿ ಯಾರಿಗುಟ್ಟು? ಅರ್ಜುನ ಬಾಳ ಪೊರ್‍ಲುನ ಹೈದ. ಹೋದ ಕಡೆಲಿ ಎಲ್ಲಾ ಅಂವನ ಗೂಡೆಗ ಮುತ್ತಿಕಂಡ್ ಮೊರ್‍ಬಾದವೆ. ಇಡೀ ದೇಸಲಿ ಅವನಸ್ಟ್ ಬಿಲ್ಲ್ ವಿದ್ಯೆಲಿ ನಿಪುಣರ್ ಯಾರ್‌ನೂ ಇಲ್ಲೆ. ಕುಂತಿ ತನಿಗೆ ಒಪ್ಪಿದವರ್‌ಂದ ಗಂಡನ ಅಪ್ಪಣೆ ಪಡ್ದ್ ಮಕ್ಕಳ ಪಡ್ಕಂಡತ್. ಈ ಭಾಗ್ಯ ಯಾವ ಹೆಣ್ಣ್‌ಗೆ ಸಿಕ್ಕುದು? ಪಾಂಡುರಾಜ ಉದಾರವಂತ. ಹೆಣ್ಣ್‌ನ ಬೇನೆನ ತಿಳ್ಕಂಡಂವ. ಅಂವ ಕುಂತಿಗೆ ನ್ಯಾಯ ಒದ್ಗಿಸಿತ್. ಲೋಕ ಹೊಗ್ಳುವ ಸೂರರ್ ಆರ್ಯಾವರ್ತಕ್ಕೆ

ಸಿಕ್ಕಿಕೆ ಎಡೆಮಾಡಿ ಕೊಟ್ಟಿತ್. ಪಾಂಡುಗೆ ಸೊಂತ ಸಕ್ತಿ ಇರ್ತಿದ್ದರೆ ಇಂತಾ ಸಂತಾನ ಹುಟ್ಟ್‌ತಿತ್ಲೆ. ಕುಂತಿ ಮಾಡ್ದ್ ಅಧರ್ಮ ಆದ್ಲೆ.

ನಾ, ದ್ರೋಣ ಮತ್ತೆ ಕರ್ಣ ಜಾತಿಕಟ್ಟ್ ಪಾಡ್‌ನ ಮಿಾರ್‍ದೋವು. ಜಾತಿಕಟ್ಟ್ ಪಾಡ್‌ನ ಬುಡಸಯಿತ ಕಿತ್ತ್ ಹಾಕೊಕೂಂತ ಹೇಳುವ ಪರಶುರಾಮರ್ ನಾವ್ಗೆ ಮೂರ್ಜನಕ್ಕೂ ಗುರುಗ! ಕುಂತಿನ ನಡೋಳ್ಕೆ ನಂಗೆ ಜಾತಿನ ನಾಶ ಮಾಡುವ ಪ್ರಯತ್ನಾಂತ ಅನ್ಸಿತ್. ಹೆಚ್ಚಿನ ಜನಂಗ ಕಾರ್‍ಣ ಇಲ್ಲದೆ ಹೇಂಗೋ ಜೀವನ ನಡ್ಸುವೆ. ಯಾವ ಸಾಧನೆನ ಮಾಡದೆ ಸಮಾಜ ನೆಂಪು ಮಾಡುವಂತಾ ಒಂದೇ ಒಂದು ಕೆಲ್ಸನ ಮಾಡದೆ, ಜೀವನಲಿ ಒಂದ್ ಹೆಜ್ಜೆನನೂ ಮುಂದೆ ಇಸದೆ ಸತ್ತ್ ಹೋದವೆ. ಅವು ಹುಟ್ಟಿಸಿದ ಮಕ್ಕಳೇ ಅವರ ಕೊಡುಗೆಗ! ಈ ಲೋಕಕ್ಕೆ ಮಕ್ಕಳೇ ನಮ್ಮ ಕೊಡುಗೆ ಎಂತ ಹೇಳ್ರೆ ಅವು ಹೆಸ್ರ್‌ವಾಸಿ ಸಂತಾನ ಆಕು. ಜಾತಿಕಟ್ಟ್ ಪಾಡ್‌ನ ಹೊರಗೆ ಹುಟ್ಟುವ ಶ್ರೇಷ್ಟತೆಗೆ ಗುರು ಪರಶುರಾಮರ್, ದ್ವೈಪಾಯನರ್, ನಾನ್, ದ್ರೋಣಾಚಾರ್‍ಯರ್, ಕರ್ಣ ಮತ್ತೆ ಪಾಂಡೋವು ಸಾಕ್ಷಿ. ಜಾತಿ ಕಟ್ಟ್‌ಪಾಡ್‌ನ ಒಳಗೆ ಹುಟ್ಟಿದ ದುರಂತಕ್ಕೆ ಕೌರವರೇ ಉದಾರ್‍ಣೆ. ತಮಿಗೆ ಇಸ್ಟ ಆದವರ ಮೊದುವೆ ಆಗುವ ಸೊತಂತ್ರ ಆರ್ಯಾವರ್ತದ ಕ್ಷತ್ರಿಯರ್‌ಗೆ ಉಟ್ಟು. ಹೆಣ್ಣ್‌ಗ ತಮಿಗೆ ಇಸ್ಟ ಬಂದವರ್‌ಂದ ಆರೋಗ್ಯವಂತ, ಬುದ್ಧಿವಂತ ಸಂತಾನನ ಪಡ್ಯೋದು ಅಧರ್ಮ ಆದ್ಲೆ. ಮೇಧಾವಿಗಳ್‌ಂದ ಮಕ್ಕಳ ಪಡ್ಯವ ಸೊತಂತ್ರ ಹೆಣ್ಣ್‌ಗಳಿಗಿರೊಕೂಂತ ಹೇಳುವ ಕೆಲವು ಶ್ಲೋಕಗ ನಾ ನೋಡ್ಯಳೆ. ಎಲ್ಲೀಂತ ಈಗ ನಂಗೆ ನೆಂಪಾದ್ಲೆ. ಜಾತಿಕಟ್ಟ್ ಪಾಡ್‌ನ ಮಿಾರ್‍ಸವ ಪ್ರಯತ್ನ ಅದ್. ಮನುಕುಲನ ಜಾತಿ, ಬಣ್ಣ, ಕುಲದ ಹಿರಿಮೆ, ಇಂತಾದರ ಭ್ರಮೆ ಹುಟ್ಟುಸುವ ಮಾತ್‌ಲಿ ಕಟ್ಟಿ ಹಾಕಿ ಅವರ ಸೊತಂತ್ರನ ಕಸ್ದ್‌ಕಂಬ ರಾಜರ ಮತ್ತೆ ಪುರೋಯ್ತರ ಹೇಂಗೆ ತಿದ್ದುದು?

ಭೀಷ್ಮರ್ ಸಾಂತ ಸೊರಲಿ ಹೇಳ್ದೊ. "ಕೂಸೂ, ಪಾಂಡೋವುಪಾಂಡುರಾಜನಮಕ್ಕ ಅಲ್ಲಾಂತನಿನ್ನವಾದ. ಆದರೆ ಕುಂತಿ ಮತ್ತೆಮಾದ್ರಿ ಎಂತಾಮಕ್ಕಳಹೆತ್ತೊಳೊ? ನೋಡು ಹುಟ್ಟ್‌ಂದ ದೊಡ್ಡದ್‌ಂತೇಳ್ವ ಬ್ರಮೆ. ಮತ್ತೆ ಮಾತ್‌ನ ತೊಪ್ಪುಸುವ ರೀತಿ ಇದ್. ನಿನ್ನ ಅಪ್ಪ ದೃತರಾಷ್ಟ್ರ ಹನ್ನೊಂದ್ ಜನ ರಾಣಿಗಳ್‌ಂದ ನೂರ ಒಂದು ಮಕ್ಕಳ ಪಡ್ತ್. ಇವರ್‌ಲಿ ಯುದ್ದನ ಗೆದ್ದ್ ಕೊಡುವ ಸಕ್ತಿ ಯಾರಿಗುಟ್ಟು ಹೇಳ್? ನೀ ಹುಟ್ಟುನ ಮೂಲನ ಹೇಳಿಕಂಡ್ ಹಸ್ತಿನಾವತಿನ ಪಟ್ಟನ ಪಡ್ಯೊಕೂಂತ ಗ್ರೇಸ್ಯಳ. ಅದರ ನೀ ಕನ್ಸ್‌ಲಿನೂ ನೆನ್ಸ್‌ಬಡ. ಕೌರವರ್, ಪಾಂಡವೊರ್ ಒಟ್ಟಿಗೆ ಸೇರಿರೆ ಕುರು ಸಾಮ್ರಾಜ್ಯನ, ಇಡೀ ಭರತಖಂಡನ ಆಡಳ್ತ ಮಾಡಕ್. ಇನ್ನೊಮ್ಮೆ ಸರಿಯಾಗಿ ಏಚನೆ ಮಾಡ್. ನೀ ಒಪ್ಪಿರೆ ಈಗ ಸಾ ಕಾಳಗನ ನಿಲ್ಸಕ್."

ಒಂದಿಸ್ಟ್ ಅಳ್ಕ್ ಇಲ್ಲದೆ ಗಟ್ಟಿ ಸೊರಲಿ ತನ್ನ ತೀರ್ಮಾನನ ದುರ್ಯೋಧನ ಹೇಳ್ದೆ. "ಅಜ್ಜಪ್ಪಾ, ನನ್ನಮಂಜನಮತ್ತೆ ತಮ್ಮಂದರ ಕೊಂದವರ,ನನ್ನ ತಂಗೆನಮುಂಡೆಮಾಡ್ದವರ, ಗುರುಗಳ ಕೊಂದವರ, ನಿಮ್ಮ ಈ ಸ್ತಿತಿಗೆ ತಂದವರಹಕ್ಕಲೆನಾ ಯಾಗಸಾಸಂದಾನಮಾಡಿಕಿಲ್ಲೆ. ನನ್ನಸರೀರಲಿ ಕಡೆನ ಉಸ್ರು ಇರಿಕನಮುಟ್ಟ, ಹಸ್ತಿನಾವತಿನ ಪಟ್ಟಲಿ ಪಾಂಡವರ ಕುದ್ರಿಕೆ

ಬುಡಿಕಿಲ್ಲೆ. ಕಾಳಗನ ನಿಲ್ಲುಸುವ ಮಾತೇ ಇಲ್ಲೆ."

ಭೀಷ್ಮರ್ ಸುಮ್ಮಂಗಾದೊ. ದುರ್ಯೋಧನ ಮತ್ತೆ ಕರ್ಣ ತಲೆ ಬೊಗ್ಗ್‌ಸಿ ಕೈ ಮುಗ್ದ್ ಹೊರಗೆ ಹೋದೊ. ಭೀಷ್ಮರ್ ನೆಂಪುಗೆ ಆ ಹಿಂದೆನ ಮಾತ್ ನೆಂಪಾತ್. – "ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ..."–

*****

## ಹೋಳು – 11

# ಗೂಡೆ ಮಿಂದತ್ ನಿಜದ ಪಿರಿತಿಲಿ

ಸರೋವರದ ಬಲ್ದಪುಡೆಲಿ ಒಂದು ಸಣ್ಣ ಗುಡ್ಡೆ. ಅದರ್ಲಿ ಅಲ್ಲಲ್ಲಿ ಸಣ್ಣ, ಸಣ್ಣ ಮುಳಿ ಹುಲ್ಲುನ ಮನೆಗಳ ಕಂಡ್‌ದ್ ಅಂಬೆಗೆ ಬಾಳ ನಿರಾಸೆ ಆತ್. ರುಸಿಗಳ ಆಸ್ರಮ ಇರ್ದೂಂತ ನೆನ್ಸಿಕಂಡ್ ಬಂದೊಪ್ಪಿಗೆ ಬಣ್ಣ ಬಣ್ಣದ ಅರ್ವೆ ಉಟ್ಟ್ ಕಂಡ್‌ಇದ್ದ ಜನಂಗ ಕಣ್ಣ್‌ಗೆ ಕಾಂಬಕೆ ಸಿಕ್ಕಿದೊ. ಅದ್ ಒಂದು ನಿಮ್ಸ ನಿತ್ತತ್. ಹಿಂದೆ ಹೋದೊ, ಇಲ್ಲರೆ ರುಸಿಗಳ ಆಸ್ರಮನ ಹುಡ್ಕಿಕಂಡ್ ಮುಂದೆ ಹೋದೋಂತ ಅದರ ಮೊನ್ಸ್ ಅತ್ತಿತ್ತ ಅಲ್ಲಾಡ್‌ತ್.

ಅಂಬೆ ಗೊಂದಲಲಿ ಸಿಕ್ಕಿಕಂಡ್ ಹಿಂದಕೆ ಹೋಗದೆ ಮುಂದಕೆ ಸಾ ಹೋಗದೆ ಕಲ್ಲ್‌ನಾಂಗೆ ಅಲ್ಲೇ ನಿತ್ತಿರಿಕನ ಗುಡ್ಡೆಂದ ಮಕ್ಕ, 'ಹೋ'–ಎಂತ ಬೊಬ್ಬೆ ಹೊಡ್ಕಂಡ್ ಬಂದ್ ಅವರ ಸುತ್ತೋಳೂ ನಿತ್ತೊ. ಅದರನೇ ಅಚ್ಚರಿಂದ ನೋಡ್ದೊ. ಮೊಸಿ ತುಂಡುನಾಂಗೆ ಕಪ್ಪು, ಕಪ್ಪುನ ಸರೀರದ ಮಕ್ಕ, ಬಾಯಿ ಬುಡಿಕನ ಪಳ್ಕಂತ ಹೊಳ್ಯವ ದೊಡ್ಡ ದೊಡ್ಡ ಅರ್ಸಿಣದ ಹಲ್ಲ್‌ಗ. ಮೂಂಕುಂದ ಇಳ್ಯತಿದ್ದ ನೆಗೆಡಿ. ಹಂಞ ಮಕ್ಕ ಅದರ ಸೊರೋಂತ ಮೂಂಕುಲಿ ಮೇಲೆ ಎಳ್ಕಂಬತಿದ್ದೊ. ಇನ್ನ್ ಹಂಞ ಮಕ್ಕ ನಾಲಗೆಂದ ಅದರ ನೆಕ್ಕಿಕಂಡ್ ಅತ್ತಇತ್ತ ಮಾಡ್ತಿದ್ದೊ. ಸಣ್ಣದಿರಿಕನ ಅದುನೂ ಹಾಂಗೇ ಮಾಡ್ತಿತ್ತ್. ಅದ್ ನೆಂಪಾಗಿ ಅಂಬೆಗೆ ಒಮ್ಮೆನೇ ನೆಗೆ ಬಾತ್. ಕಾಶಿ ದೇಸಂದ ಹೊರ್ಟ ಮೇಲೆ ಇಲ್ಲಿಗೆ ಮುಟ್ಟ ಒಂದೇ ಒಂದು ಸಲನೂ ಮೊನ್ಸ್ ಬಿಚ್ಚಿ ನೆಗಾಡಿಕೆ ಆಗದರ ಅದ್ಕೆ ನೆಂಪಾತ್. ನಾಗರಿಕತೆಯ ಸೋಂಕೇ ಇಲ್ಲದ ಆ ಕಾಡ್ ಮೊಂಯಿಂಸರ ಮಕ್ಕಳ ನೋಡಿ ಅಂಬೆಗೆ ಅದರ ಸಣ್ಣದಿರಿಕನ ಇದ್ದ ದಿನಗ ನೆಂಪಾದೊ. ಆಗ ಅದ್ಕೆ ಬಾಯ್ತುಂಬ ನೆಗಾಡೊಕೂಂತ ಆತ್.

ಒಂದ್ ಎರ್ಡ್ ಮಕ್ಕಳ ಮೂಂಕುನ ಹಿಂಡಿಕಂಡ್ ಅದ್ ನೆಗಾಡಿಕೆ ಸುರುಮಾಡ್ತ್. ಅದ್ ನೆಗಾಡಿಕನ ಮಕ್ಕ ಸಾ ನೆಗಾಡಿದೊ. ಕಾಶಿನ ಅರಮನೆಲಿ ಮೊನ್ಸ್ ಬಿಚ್ಚಿ ನೆಗಾಡಿಕೆ ಆಗ್ತಿತ್ಲೆ. ಹಸ್ತಿನಾವತಿಲಿ ಮತ್ತೆ ಸೌಭ ದೇಸಲಿ ನೆಗೆನೇ ಹೊರ್ಟ್ಹೋಗಿತ್ತ್. ಇಲ್ಲಿ ಹಾಂಗಲ್ಲ. ಎಸ್ಟ್ ಬೇಕರೂ ನೆಗಾಡಕ್. ನೆಗೆಗೆ ಇರುವ ಸಕ್ತಿನ ತಿಳ್ದ ಅಂಬೆಗೆ ನೆಗಾಡಿ ನೆಗಾಡಿ ಸಾಕಾತ್.

ಮಕ್ಕಳ ಗದ್ದಳ ಕೇಳಿ ದೊಡ್ಡೋವು ಹಂಞ ಜನ ಗುಡ್ಡೆಂದ ಕೆಳಗೆ ಇಳ್ದ್‌ದ್ ಬಂದೊ. ಅವು ಮಾತಾಡ್ತಿದ್ದ ಮಾತ್ ಅಂಬೆಗೆ ಅರ್ತನೇ ಆಗ್ತಿತ್ಲೆ. ಅವು ತನ್ನ ಎಲ್ಲಿಂದ ಬಂದದ್‌ಂತ ಕೇಳಿರ್ದೋಂತ ನೆನ್ಸಿಕಂಡ್ ಉತ್ತರದ ಕಡೆಗೆ ಕೈ ತೋರ್ಸಿ "ಕಾಶಿ, ಕಾಶಿ"–ಎಂತ ಎರ್ಡ್

ಸಲ ಹೇಳ್ತ್. ಅದರ ಸುತ್ತೋಳೂ ನಿತ್ತ ಹೆಣ್ಮಕ್ಕ, ಅದರ ಕೈ ಹಿಡ್ಕಂಡ್ ಗುಡ್ಡದ ಕಡೆಗೆ ಕರ್‍ಕೊಂಡೋದೊ. ಅಲ್ಲಿ ಇದ್ದದರ್ಲಿ ಒಂದು ದೊಡ್ಡ ಮನೆಗೆ ಅದರ ಕರ್‍ಕೊಂಡೋದೊ.

ಮನೆ ಒಳಗೆಂದ ಗಂಡ ಹೆಣ್ಣ್‌ನಾಂಗೆ ಕಾಂಬ ಇಬ್ರೊರು ಅಜ್ಜ, ಅಜ್ಜಿಕ ಹೊರಗೆ ಬಂದೊ. ಅವು ಹಂಞ ತಿಳುವಳ್ಕೆ ಇದ್ದವರಾಂಗೆ ಕಾಂಬತಿದ್ದೊ. ಆ ಅಜ್ಜ ಎಂತದ್ ಕೇಳ್ತ್‌ಂತ ಅದ್ಕೆ ಅರ್ತ ಆಗದೆ, ಮತ್ತೆ ಮತ್ತೆ 'ಕಾಶಿ' ಎಂತಹೇಳಿಕನ ಅಜ್ಜನ ಮೋರೆಲಿ ನೆಗೆ ಕಂಡತ್. ಅಂವಂಗೆ ಕಾಶಿ ಗೊತ್ತಿರೋಕು. ಅಂವ ಒಳ್ಳವರೊಟ್ಟಿಗೆ ಎಂತದರನೋ ಹೇಳ್ತ್. ಆ ಮಾತ್‌ಲಿ ಗಿರಿನಾಯಕ ಎಂತ ಹೇಳುವ ಹೆಸ್ರ್ ಅದರ ಮೊನ್ಸ್‌ಲಿ ಒಳ್ತ್. ಅದ್ ಅಲ್ಲಿ ಇರ್‍ದರನೇ ಮರ್‍ತ್ ಅವು ಎಲ್ಲಾ ಅವರವರೊಟ್ಟಿಗೆ ಮಾತಾಡಿಕೊಂಡೊ.

ಕಾಶಿಲಿ ಅದ್ ವೇಸ ಮರ್‍ಸಿಕಂಡ್ ನಗರ ಸುತ್ತ್‌ತಿತ್ತ್. ಉಪವನಲಿ ಸಂಚಾರ ಮಾಡ್ತಿತ್ತ್. ದೂರಂದಳೇ ಜನಂಗ ಇರುವ ಮನೆಗಳ ನೋಡಿದ್, ಅದು ಹೇಂಗಿರ್‍ದೂಂತ ಮೊನ್ಸ್‌ಲೇ ನೆನ್ಸಿಕಂಡ್ ಏಚನೆ ಮಾಡ್ತಿತ್ತ್. ಆ ಮನೆಗಳ ಒಳಗೆ ಹೋಗಿ ಅವೆಲ್ಲಾ ಹೇಂಗೆ ಇರುವೋಂತ ನೋಡೊಕೂಂತ ಅದ್ಕೆ ಒಮ್ಮೆನೂ ಆಸೆ ಆಗ್ತಿಲ್ಲೆ. ಇಂದ್ ಹಸ್ತಿನಾವತಿನ ತೇರ್‌ಂದ ಇಳ್ದ್, ಹಳ್ಳದ ದಂಡೆನ ಹಕ್ಕಲೆ ಎಲ್ಲದರ ಸಾ ನೋಡಿಕೆ ಅದ್ಕೆ ಆತ್. ಗುಡ್ಡಗಾಡ್ ಜನಕ್ಕೆ ಮುರ್ಗ, ಹಕ್ಕಿ ಪಕ್ಕಿಗಳ ಮೇಲೆ ಇರುವ ಪ್ರೀತಿನ ಅದ್ ತಿಳ್ಕಂಡತ್. ಅವು ಅದರ ಕರ್‍ಕಂಡ್ ಬಂದದ್ ಅವರ ಎಜಮಾನನ ಮನೆಗೆ ಆಗಿರೊಕೂಂತ ಅದ್ ನೆನ್ಸಿಕಂಡದೆ. ಅದ್ ಎಲ್ಲ ಅನ್ಕೂಲ ಇರುವ ಮನೆನಾಂಗೆ ಕಾಂಬತಿತ್ತ್. ಅಲ್ಲಿ ಕೋಳಿಗ, ಬಾತ್ ಕೋಳಿಗ, ನಾಯಿ–ಕೊತ್ತಿಗ ಯಾರ ಹೆದ್ರಿಕೆ ಇಲ್ಲದೆ ಮನೆ ಒಳಗೆ ಎಲ್ಲಿ ಬೇಕೋ ಅಲ್ಲಿ ಓಡಾಡಿಕಂಡಿದ್ದೊ. ಮನೆ ಒಳಗೆ ಏಡ್, ಕುರಿಗ, ಎತ್ತ್, ದನ ಕರ್‌ಗ, ಎಮ್ಮೆ – ಕೋಣಗಳ ಕಟ್ಟಿಹಾಕಿದ್ದೊ. ಆದರೂಸಾತ್‌ಮನೆ ಚೊಕ್ಕಟಲಿ ಇತ್ತ್.

ಅದ್ಕೆ ಕಾಶಿನ ನೆಂಪಾತ್. ಅಲ್ಲಿ ಗಿಜಿಗುಟ್ಟುವ ಯಾತ್ರಿಕರ್‌ಂದಾಗಿ ಎಲ್ಲಿ ನೋಡ್ರೂ ಕೊಳ್ಕ್, ಗಲೀಜ್. ಪವಿತ್ರ ಆದ ಗಂಗಾನದಿನ ದಂಡೆನ ಉದ್ದಾಕೂ ಮೊಂಯಿಂಸರ ಹೇಲ್‌ನ ನಾತ. ಅದ್ ಸುದ್ದಗಾಳಿನ ಕುಡ್ಯೊಕೂಂತ ಉಪವನಕ್ಕೆ ಹೋಗ್ತಿತ್ತ್. ಗಂಗಾನದಿಲಿ ಆಗಾಗ ಹೆಣಗ ಪಾಂಬಿಕಂಡ್ ಬಾವುದರ ಕಂಡ್‌ದ್ ಅದ್ ಅಲ್ಲಿಗೆ ಹೋವುದರ ನಿಲ್ಸಿತ್. ಉಪವನದ ಕೊಳಲಿ ಈಜಿಕೆ ಬಾತಿತ್ತ್. ಸುತ್ತಮುತ್ತ ಸುದ್ದ ಇಲ್ಲದಲ್ಲಿ ದೇವರು ಇರಿಕಿಲ್ಲೆ. ಇವು ಪುಣ್ಯಾತ್ಮರ್. ದಿನೋಳೂ ಸುದ್ದಗಾಳಿ ಮತ್ತೆ ನೀರ್ ಕುಡ್ದವೆ. ಇಲ್ಲಿ ಇರುವ ಹಳ್ಳದ ಸುತ್ತಮುತ್ತ ಎಲ್ಲಿನೂ ಗಲೀಜ್ ಕಂಡತ್ಲೆ. ನಾತನೂ ಬಾದುಲ್ಲೆ. ನೋಡ್ರೆ ಇವು ಯಾರ್ ಸಾ ಬರ ಕಲ್ತವರಾಂಗೆ ಕಾಂಬೊದುಲ್ಲೆ. ಇವು ದೇವ್ರುರ ಅರ್ತ ಮಾಡಿಕಂಡೊಳೊ. ಇವುಕೆ ಬೂಮಿ ತಾಯಿನೇ ದೇವುರು ಇವು ಪ್ರಕೃತಿನ ಪೂಜೆ ಮಾಡಿವೆ. ಪ್ರಕೃತಿಂದಳೇ ಪಾಟನ ಸಾ ಕಲ್ತವೆ. ಹಾಂಗೆ ಕಲ್ತೋವು ಪ್ರಕೃತಿನ ಪ್ರೀತಿಂದ ನೋಡಿಕಂಬಕೆ ಕಲ್ತೊಳೊ.

'ಗಿರಿ ನಾಯಕ, ಗಿರಿನಾಯಕ'–ಎಂತ ಅಲ್ಲಿದ್ದೋವು ಸಡ್ಗರಲಿ ಕರ್‍ಯೋದರ ಕೇಳಿ ಅಂಬೆ ಅತ್ತನೋಡ್ತ್. ಎತ್ತರದ ಹೊಂತಗಾರ ಹೈದ ಗಿರಿನಾಯಕ ಬಾತಿತ್ತ್. ಅಂಬೆನ ನೋಡಿ, ನೆಗಾಡಿಕಂಡ್, ಅದ್ಕೆ ಮೊರ್‍ಯಾದೆ ಕೊಟ್ಟ್ ಎರ್‍ಡ್ ಕೈ ಜೋಡ್ಸಿ ನಮಸ್ಕಾರ

ಮಾಡ್ದೆ. "ನಿಮ್ಮನೋಡಿ ನಂಗೆ ಅಚ್ಚರಿ ಆದೆ. ನೀವು ಎಲ್ಲೋ ದಾರಿ ತೊಪ್ಪಿ, ಈ ಬೆಟ್ಟಕ್ಕೆ ಬಂದ ಹಾಂಗೆ ಕಂಡದೆ. ಒಂಟಿ ಹೆಂಗ್ಸ್ ಈ ಕಾಡ್‌ಗೆ ಬಂದದಾದರ್ ಹೇಂಗೆ? ಹೋ. ನನ್ನ ಕ್ಷಮಿಸಿನಿ. ಮೊರ್ತೇಬುಟ್ಟೆ. ಮೋರೆ ನೋಡ್ರೆ ಹೊಟ್ಟೆಗೇನೂ ಬೀರ್ತ್ಲೇಂತ ಕಂಡದೆ. ಮನೆ ಒಳಗೆ ಏನುಟ್ಟೂಂತ ಗೊತ್ತಿಲ್ಲೆ. ಇದ್ದದರ ತಿಂದ್‌ದೇ ಮಾತಾಡಿನಿ."

ಅಂವ ಸಂಸ್ಕೃತ ಬಾಸೆಲಿ ಮಾತಾಡ್ತ್. ಶಾಸ್ತ್ರ ಕಲ್ತ ಅಂಬೆಗೆ ಅದ್ ಲಾಯ್ಕ್‌ಲಿ ಬಾತಿತ್. ಸಂಸ್ಕೃತ ಬಾಸೆನ ಕೆಳಜಾತಿನೊವು, ಹೆಣ್ಮಕ್ಕ ಕಲ್ಯಕಾಗದ್‌ಂತ ಸಾಸ್ತ್ರ ಹೇಳ್ದೆ. ಆರ್ಯರ ಮೂಲಬಾಸೆ ಅದ್‌ಂತ ಹೇಳ್ದರ ಕೇಳಿಟು. ಕಾಡ್‌ಮೊಂಯಿಂಸರ ದಕ್ಷಿಣ ದಿಕ್ಕ್‌ಗೆ ಓಡಿಸಿ, ಉತ್ತರ ಬಾಗನ ಆರ್ಯರ್ ಪಡ್ಕಂಡೊ. ಅದರ್‌ಂದ ಮೇಲೆ ಅವ್ಕೆ ಸಂಸ್ಕೃತನ ಒಳ್ಳಿಕಂಬಕಾತ್ಲೆ. ಹಂಗಾಗಿ ಅದರ ಮಹತ್ವ ಕಮ್ಮಿ ಆತ್. ಇದರೆಲ್ಲಾ ಅದ್ಕೆ ಸಾಸ್ತ್ರ ಕಲ್ಸ್‌ತಿದ್ದ ಪುರೋಯ್ತುರ್ ಹೇಳ್‌ತಿದ್ದೊ. ಇಡೀ ಆರ್ಯಾವರ್ತಲಿ ಒಂದೇ ಬಾಸೆ ಇರ್ತಿದ್ದರೆ ಬಳಕೆಗೆ ಸುಲಬ ಆಗ್ತಿತ್ತ್‌ಂತ ಆ ಪುರೋಯ್ತ ಆಗಾಗ ಹೇಳ್ತಿತ್. ಆದರೆ ಮೊಣ್ಣ್‌ನ ಸೊಗಸ್ ಸೇರಿಕನ ಆ ಬಾಸೆಗೆ ಜೂವ ಬಾದರ ಅದ್ ನೋಡ್ತಿತ್. ಬಾಸೆಂದ ಸಂಸ್ಕೃತಿಯ ಒಳಗೆ ಹೊಗಿಕೆ ಆದೇಂತ ಅದರ ಅನ್ಬವ ಆಗಿತ್. ಅರಮನೆನ ಕೆಲ್ಸದವರೊಟ್ಟಿಗೆ ಅದ್ ಅವರ ಬಾಸೆಲೇ ಮಾತಾಡ್ತಿತ್. ಆಗ ತಾನ್ ರಾಜಕುಮಾರಿ ಎಂತ ಹೇಳ್ದು ಅದ್ಕೆ ಮರ್ತೇ ಹೋಗ್ತಿತ್. ಇಲ್ಲಿ ಸಾ ಹಾಂಗೆನೇ ಆತ್. ಸಂಸ್ಕೃತಲಿ ಮಾತಾಡಿ ಗಿರಿನಾಯಕ ಒಮ್ಮೆಗೇ ಅದ್ಕೆ ಹಕ್ಕಲೆಯಂವ ಆತ್.

ಗಿರಿನಾಯಕ ಹೊಟ್ಟೆನ ನೆಂಪು ಮಾಡಿಕಾಕನ ಅದ್ಕೆ ಒಮ್ಮೆಲೇ ಹೊಟ್ಟೆ ಇಸುದು ಜೋರಾತ್. ಬೊಳ್ಪುಂದ ಅದರ ಹೊಟ್ಟೆಗೆ ಏನ್ ಸಾ ಬೀತಿಲ್ಲೆ. ನಿಜಲಿ ನೋಡ್ರೆ ಅದ್ಕೆ ಒಂದ್ ಹೊಟ್ಟೇಂತ ಉಟ್ಟೂಂತ ಗೇನನೇ ಇತ್ಲೆ. ಹಸ್ತಿನಾವತಿಲಿ ಭೀಷ್ಮರಿಗೆ ಅವರ ಪಣನೇ ದೊಡ್ಡದಾತ್. ಸೌಭದೇಸಲಿ ಸಾಲ್ವ ಭೂಪತಿಗೆ ಅವನ ಪ್ರತಿಸ್ಟೆನೇ ದೊಡ್ಡದಾತ್. ಆದರೆ ಈ ಗಿರಿನಾಯಕಂಗೆ ಬೇರೆಯವರ ಹೊಟ್ಟೆನ ಪ್ರಸ್ಣೆ ನೆಂಪಾತ್. ನಿಜಲಿ ನೋಡಿರೆ ಕಾಡ್ ಮೊಂಯಿಂಸರ್ ಯಾರ್?

ಒಳಗೆಂದ ಗಿರಿನಾಯಕನ ಅಯ್ಯೆ ಬೇಸಿದ ಕಾಡ್ ಗೆಣ್ಸ್‌ನ ಎಲೆಲಿ ಹಾಕಿ ತಂದಿಸಿತ್. ಒಟ್ಟಿಗೆ ಹಾಲ್‌ನನೂ ಸಾತ್ ತಂದತ್. ಅಂಬೆ ಅದರ ಹೇಂಗುಟ್ಟೂಂತ ನೋಡ್ತ್. ಅದ್ ನೆಗಾಡಿಕಂಡ್ ಕಾಡ್ ಗೆಣ್ಸ್‌ನ ತೋರ್ಸಿಕಂಡ್ ಏನೋ ಹೇಳ್ತ್. ಅದ್ ಹಲ್ಲ್‌ಗೆ ಎಂತದೋ ಕಪ್ಪು ಬಣ್ಣ ಹಾಕಂಡಿತ್. ಸೀರೆ ಉಟ್ಟ್‌ದ್ ಅದರ ಮೇಲೆನ ಕೊಡಿಗಳ ಎರ್ಡ್ ಹೆಗ್ಲ್‌ಗೆ ಗಂಟ್ ಹಾಕಿ ಸಿಕ್ಕಿಸಿಕಂಡಿತ್. ಮೇಲೆನ ಮುಡೆಗೆ ಏನ್ ಸಾ ಹಾಕಿಕಂಡಿತ್ಲೆ. ಅದರ ಕಪ್ಪು ಮೊಲೆಗಳ ಸೀರೆ ಪೂರಾ ಮುಚ್ಚಿತ್ಲೆ. ವೊರ್ಸ ಸುಮಾರ್ ಅರ್ವತ್ತ್‌ರ ಹಕ್ಕಲೆ ಇರ್ದು. ಮೊಲೆಗ ಜೋಲಿಕಂಡಿತ್ಲೆ. ಬೇರೆ ಬೇರೆ ಬಣ್ಣದ ಮಣಿಗಳ ಮತ್ತೆ ಕಾಯಿಗಳ ಮಾಲೆ ಹಾಕಂಡಿತ್. ಮೂಂಕುನ ಎರ್ಡ್ ಹೊಳ್ಳೆಗೆ ದೊಡ್ಡ ಉರುಂಟುನ ನಗ ಹಾಕಂಡಿತ್. ಚಿತ್ರ, ವಿಚಿತ್ರ ನಗಗಳ ಬಾರಕ್ಕೆ ಕೆಬಿ ಜೋಲಿಕಂಡಿತ್. ಇಂತದರೆಲ್ಲಾ ಕಾಶಿಲಿ ಕಾಂಬಕೆ ಸಿಕ್ಕದ ಅಂಬೆ ಅದರ ಏಸನ ನೋಡಿಕಂಡ್ ತನ್ನನೇ ಮರ್ತ್‌ಕಂಡಿರಿಕಾಕನ ಗಿರಿನಾಯಕ

ಹೇಳ್ತ್. "ನೀವು ಪಟ್ಣದೊವು ಈ ಕಾಡ್ ಗೆಣ್ಸ್‌ಮತ್ತೆ ಏಡ್‌ನ ಹಾಲ್ ನೀವುಗೆ ಸೇರ್ದನೋ ಇಲ್ಲೆನೋಂತ ಅವ್ವ ನಾಮೋಸು ಪಟ್ಟದೆ. ಇರ್‍ಳ್ ಬೇರೆ ಅಡ್ಗೆ ಮಾಡಿಕೊಟ್ಟದೆ ಗಡ."

ಅಂಬೆಗೆ ಅಚ್ಚರಿ ಆದೆ. ಅಯ್ಯೆನೇ ಅಡ್ಗೆ ಮಾಡ್ದೇಂತೇಳಿರೆ ಈ ಗಿರಿನಾಯಕಂಗೆ ಇನ್ನ್ ಸಾ ಮೊದ್ವೆ ಆತ್ಲೇಂತಾತ್. ಇಂವ ಇನ್ ಸಾ ಮೊದುವೆ ಆತ್ಲೇಂತಾದರೆ ಇಂವನ ಹಿಂದೆ ಎಂತಾ ಕತೆ ಎಲ್ಲ ಉಟ್ಟೋ ಏನೋ? ಅದ್ ಅದರ ಬೊದ್ಕ್‌ಲಿ ಒಮ್ಮೆನೂ ಏಡ್‌ನ ಹಾಲ್ ಕುಡ್ದ ಜನ ಅಲ್ಲ. ಕಾಶಿಲಿ ಮರಗೆಣ್ಸ್ ಮತ್ತೆ ಬೊಳ್ಳಿ ಗೆಣ್ಸ್‌ನ ದುಡ್ಡುಗೆ ಮಾರ್ತಿದ್ದೊ. ಬೊಳ್ಳಿ ಗೆಣ್ಸ್ ಹೊಟ್ಟೆಗೆ ಹಾಳ್ಂತ, ಮೊಂಯಿಂಗ ಹೂಂಸುವೇಂತ, ಮರಗೆಣ್ಸ್ ಬಾಳ ಒಳ್ಳದ್‌ಂತ ರಾಜ ವೈದ್ಯರ್ ಅದ್ಕೆ ಹೇಳ್‌ತಿದ್ದೊ. ಅದ್ಕೆ ಎರ್ಡ್ ಗೆಣ್ಸ್‌ಗಳ ರುಚಿ ನೋಡೊಕೂಂತ ಆಗಾಗ ಆಸೆ ಆಗ್ತಿತ್ತ್. ಆದರೆ ಅದರ ಅರಮನೆಗೆ ತಾಕೆ ಅಪ್ಪ ಒಪ್ಪುತಿತ್ಲೆ. ಅದ್ ತಿಂಬಕಿಲ್ಲದೊವು ತಿಂಬ ತಿನ್ಸ್‌ಂತ ಅದರ ತರ್ಸಿಕೊಡ್ತಿತ್ಲೆ. ತಿಂಬ ತಿನ್ಸ್ ದೊಡ್ಡಸ್ತಿಕೆನ ತೋರ್ಸ್ಲಿದೇಂತ ಅದ್ಕೆ ಗೊತ್ತಾದೇ ಅಂದ್.

ಗಿರಿನಾಯಕನ ಅಯ್ಯೆ ಕೊಟ್ಟ ಗೆಣ್ಸ್‌ನ ತಿಂದ್‌ಕಂಡ್ ಅಂಬೆ ಹೇಳ್ತ್. "ನನ್ನಜೂವನಲಿ ಇದ್ ಗೆಣ್ಸ್‌ನ ಸುರು ತಿಂಬೊದು. ನಂಗೆ ಇದ್ ತಿಂಬಕೆ ಬಾಳ ಕುಸಿ ಆದೆ. ನಾವು ಪಟ್ಣದೊವು ದೊಡ್ಡಸ್ತಿಕೆಲಿ ಎಸ್ಟೊ ಸಾಮಾನ್‌ನ ಉಪಯೋಗ ಮಾಡದೆ ಬುಟ್ಟವೆ. ನಿಮ್ಮ ಎಲ್ಲರ್ನ ನೋಡ್ದ ಮೇಲೆ ನಾವು ಜೂವನಲಿ ಕಳ್ಕಂಡದೇ ಹೆಚ್ಚ್ಂತ ನಂಗೆ ಕಂಡದೆ. ಪಟ್ಣಲಿ ನಮ್ಮುದ್ ನಾಟಕದ ಬೊದ್‌ಕ್. ಮೊನ್ಸ್ ಬಿಚ್ಚಿ ಮಾತಾಡ್‌ದ್ಲೆ, ಬಾಯ್ತುಂಬಾ ನೆಗಾಡ್ತುಲ್ಲೆ. ಸುದ್ದದ ಗಾಳಿ ನೀರ್ ಸಾ ಇಲ್ಲೆ. ಈ ಬೂಮಿ ತಾಯಿನ ಮಕ್ಕ ಆಗಿ ಇದ್ದದರ ಇದ್ದ ಹಾಂಗೇ ಅನ್ಬವಿಸಿಕಂಡ್ ಬೊದ್ಕುದೆ ನಿಜವಾದ ಬೊದ್‌ಕ್. ನೀವು ಬಾಗ್ಯವೊಂತರ್. ಆದರೆ ಈ ಮುರ್ಗಗ ಹಕ್ಕಿಗಳ ಎಲ್ಲಾ ಮನೆ ಒಳಗೇ ಇಸಿಕಂಡೊಳರಿ ಅಲ್ಲ? ನೀವುಗೆ ಅದರ ಹೇಲ್, ಉಚ್ಚೆ ಹೇಸಿಗೆ ಆದುಲ್ಲೆನೋ?"

ಗಿರಿನಾಯಕ ನೆಗಾಡ್ತ್. "ನೀವುಗೆ ಪಟ್ಣದೋವ್ಕೆ ಕಾಡ್ ಕುಸಿಕೊಟ್ಟದೆ. ಇಲ್ಲಿನ ಕಾಡ್‌ಮೊಂಯಿಂಸರ್ಲಿ ಪಟ್ಣವಾಸದ ಕನ್ಸ್‌ನ ಕಾಣೋವು ತುಂಬಾ ಜನ ಒಳೊ. ಇದ್ದದರಬುಟ್ಟ್ ಇಲ್ಲದರ ಕಡೆಗೆ ಹಂಬಲ್ಸುದು ಮೊಂಯಿಂಸರ ಹುಟ್ಟು ಗುಣ. ನೀವು ಹೇಳ್ದಹಾಂಗೆ ಇಲ್ಲಿನ ಗಾಳಿ, ನೀರ್ ಸುದ್ದ ಉಟ್ಟು. ಹಾಂಗೆನೇ ಮ್ಯೊಂಸನ ಎದೆನೂ ಸುದ್ದ ಉಟ್ಟು. ಮತ್ತೆ ಮುರ್ಗಗಳ, ಹಕ್ಕಿಗಳ ಒಟ್ಟಿಗೆ ಇಸಿಕೊಂಬೊದು ಏಕೇಂತ ನೀವುಗೆ ಗೊತ್ತುಟೋ? ಅದರೆಲ್ಲಾ ಹೊರಗೆ ಬುಡಿಕಾಕನ ಅದರ ಕಾಯಕೆ ಯಾರ್ನಾದರ್ ಜನ ಇಸಿಕಣಕಾದೆ. ಇಲ್ಲರೆ ಕೋಳಿಗ ಮತ್ತೆ ಬಾತ್ ಕೋಳಿಗ ಕಾಡ್ ಕೊತ್ತಿ ಇಲ್ಲರೆ ಕುದ್ಕನ ಪಾಲಾದೆ. ಕಿರ್ಬ, ಚಿರ್ತೆ, ಹುಲಿಗ ನಮ್ಮ ಏಡ್, ದನಕರ್‌ಗಳ ತಿಂದ್ ಬುಟ್ಟದೆ. ಮದ್ದ್ಯಾನ ಮುಟ್ಟ ಇದರ ಹೊರಗೆ ಕರ್ಕೊಂಡೋಗಿ ಮೇಸಿದ್ ಬಂದವೆ. ಹಿಂಬೊತ್ತಾಕನ ಮಾತ್ರ ಇದಕ್ಕೆ ಮನೆಲಿ ಕಟ್ಟಿ ಹಾಕುದು. ಮತ್ತೆ ಇದರ ಹೇಲ್, ಉಚ್ಚೆ ಹೇಸಿಗೆ ಆದುಲ್ಲೇನೋಂತ ಕೇಳ್ದರಿ. ನಿಜ ಹೇಳೊಕೂಂತೇಳ್ರೆ ಮ್ಯೊಂಸನ ಹೇಲ್, ಉಚ್ಚೆನಸ್ಟ್ ಹೇಸಿಗೆ ಮುರ್ಗ, ಹಕ್ಕಿಗಳ್ದಾದ್ಲೆ."

ಅಂಬೆಗೆ ತಡ್ಕಂಬಕಾಗದಸ್ಟ್ ನೆಗೆ ಬಂದದೆ. ಅದ್ಕೆ ಕಾಶಿನ ಸುತ್ತಮುತ್ತ ನೆಂಪಾತ್. ಜನಂಗ ಅವರ ಈಗನ ಸ್ತಿತಿಗೆ ಹಿಂದೆ ಮಾಡ್ದ ಪಾಪಕರ್ಮಂಗ ಕಾರಣಾಂತ ನೆನ್ಸಿಕಂಬೊಂತೊವು. ಹಿಂದೆನ ಜಲ್ಮದ ಪಾಪನ ಕಳ್ಯಕೆಂತಲೇ ಅವು ಎಲ್ಲೆಲ್ಲಿಂದಳೋ ಕಾಶಿಗೆ ಬಂದವೆ. ಅಲ್ಲಿ ಒಂದು ಇದ್ಯೆ ಕಲ್ಸುವ ಪೀಟ ಇರ್ದರ್‌ಂದ ಪಂಡಿತರ ಮತ್ತೆ ಕಲ್ಯವ ಮಕ್ಕಳ ಸಂಕೆನೂ ಹೆಚ್ಚ್ ಉಟ್ಟು. ಅವು ಎಲ್ಲೆಲ್ಲೋ ತಿಂದದರ ಉರ್ಶಿ, ಗಂಗೆಲಿ ಮುಣ್‌ಂಗಿದ್ ಪಾಪ ಕಳ್ದದೇಂತ ತಿಳ್ದವೆ. ನದಿ ದಂಡೆಲಿ ತಿರ್‌ಗಾಡಿಕನ ಈ ನಾತ ಮಾರ್ ದೂರಕ್ಕೆ ಮೂಂಕ್‌ಗೆ ಹೊಡ್ದ್‌ದೆ, ಹೊಟ್ಟೆ ತೊಳ್ಸಿದಾಂಗೆ ಆಗಿ ಕಕ್ಕಿಕೆ ಬಂದದೆ. ದನಕರ್‌ಗ ಉರ್ಶಿದರ ಯಾರ್‌ನೂ ಅಸಯ್ಯಂತ ಹೇಳ್ದುಲ್ಲೆ. ನೊಂಬಿಕೆನ ಮೇಲೆನೇ ಬೊದ್ಕೊವು ಅದರ ತೀರ್ತ, ಪುರ್ಸಾದಾಂತ ಕುಡ್ದವೆ. ನಾಯಿಗ ಹೇತದ್ ಸಾ ಮ್ಯೊಂಸರ ಹೇಲ್‌ನಸ್ಟ್ ನಾತ ಇಲ್ಲೆ. ಅದರೆಲ್ಲಾ ನೆನ್ಸಿಕಂಡ್ ಅಂಬೆ ಮತ್ತೊಂದ್ ಸಲ ನೆಗಾಡ್ತ್.

ಗಿರಿನಾಯಕ ಅದರೊಟ್ಟಿಗೆ ಅಂವನೂ ನೆಗಾಡಿಕಂಡ್ ಹೇಳ್ತ್, "ನಾ ಯಾರ್‌ಂತ ನೀವ್ಗೆ ಈಗ ಗೊತ್ತಾಗಿರೊಕು. ಈ ಗಿರಿನಗರದ ಎಜಮಾನನಾ. ನನ್ನ ಹೆಸ್‌ರ್ ಏಕಲವ್ಯಾಂತ. ಅದ್ ನನ್ನ ಅಜ್ಜಂದ ನಂಗೆ ಬಂದ ಹೆಸ್‌ರ್‌ಗಡ. ಅದರನೇ ನನ್ನ ಪಿಳ್ಳೆಗೆಸಾ ಇಸಕಡ. ನನ್ನ ನಿಜದ ಹೆಸ್‌ರ್‌ನಂಗೆ ಈಗ ಮರ್ತೇ ಹೋಗುಟು. ಎಲ್ಲೋವೂ ನನ್ನ ಗಿರಿನಾಯಕಾಂತ ಕರ್ದವೆ. ನನ್ನ ನಿಜದ ಹೆಸ್ರ್ ನೆಂಪಾಕಾದರೆ ನಿಮ್ಮಂತೋವು ಯಾರಾದರ್ ಬರೊಕು. ನಿಮ್ಮನ ನೋಡಿರೆ ದೊಡ್ಡವರ ಮನೆನ ಹೆಣ್ಮಗಳ್‌ಂತ ಕಂಡದೆ. ಇಲ್ಲಿಗೆ ಏಕೆ ನೀವು ಬಂದೆರಿ?"

ಆಗ ಅಂಬೆಗೆ ಎಲ್ಲಾ ಕತೆನ ಹೇಳದೆ ನಿಮ್ಳುತ್ತಿ ಇತ್ಲೆ. ಅಪ್ಪ ಸಕ್ತಿಲಿ ಗೆದ್ದವಂಗೆ ಮಕ್ಕಳ ಕೊಟ್ಟನೇಂತ ಸೊಂಯಂವರ ಏರ್ಪಾಡ್ ಮಾಡ್ದ್, ಸರೋವರಲಿ ಸಾಲ್ವ ಭೂಪತಿನ ನೋಡಿ ಅಂವನಲ್ಲಿ ಪ್ರೀತಿ ಆದ್, ಸೊಂಯಂವರ ಮಂಟಮೆಲಿ ಸಾಲ್ವ ಭೂಪತಿ ಏಲ್ಲರ್ನ ಸೋಲ್ಸಿಕನ ಬಿರ್ಗಾಳಿನಾಂಗೆ ಭೀಷ್ಮರ್ ನುಗ್ಗಿ ಬಂದದ್, ತಂಗೆಕಳೊಟ್ಟಿಗೆ ಭೀಷ್ಮರ ರಥನ ಹತ್ತಿ ಕುದ್ದ್ ಹಸ್ತಿನಾವತಿಗೆ ಹೋದ್, ಭೀಷ್ಮರ್ ಅವರ ಅಪ್ಪಂಗೆ ಬೇಕಾಗಿ ಸಾಯಕನ ಮುಟ್ಟ ಮೊದುವೆ ಆದ್ಲೆಂತ ಪ್ರಮಾಣಮಾಡ್ದ್, ಮತ್ತೆ ಸಾಲ್ವ ಭೂಪತಿ ತನ್ನ ದೊಡ್ಡಸ್ತಿಕೆನ ಒಳ್ಸಿಕಂಬಕೆ ಬೇಕಾಗಿ ಅದರ ಬುಟ್ಟದ್, ಕಡೆಗೆ ಯಾವ ದಾರಿನೂ ಕಾಣದೆ ಏಲ್ಲಾದರ್ ರುಸಿ, ಮುನಿಗಳ ಆಸ್ರಮಲಿ ಒಳ್ದ ಕಾಲನ ಕಳ್ಯಮೋಂತ ಏಚನೆಮಾಡಿ ಈ ಕಡೆಗೆ ಬಂದದ್.

ಗಿರಿನಾಯಕ ಎಲ್ಲ ಮಾತ್‌ನನೂ ಒಂದೇ ಮೊನ್ಸ್‌ಲಿ ಕೇಳಿ. ಒಮ್ಮೆ ಉಸ್ರು ಬುಟ್ಟ್ ಹೇಳ್ತ್. "ನಿಮ್ಮ ನೋಡಿಕಾಕನನೇ ನೀವು ಒಬ್ಬ ಅರ್ಸು ಮಗಳ್ ಇರೊಕೂಂತ ಗ್ರೇಸಿಕಂಡೆ. ನಾ ಏಚನೆ ಮಾಡ್ದ್ ಸರಿ ಆತ್. ಆದರೆ ನಿಮ್ಮ ಹಿಂದೆ ಇಸ್ಟ್ ಒಂದು ಕತೆ ಇರ್ದೂಂತನಾ ನೆನ್ಸಿಕಂಡತ್ಲೆ. ಭೀಷ್ಮ ಮತ್ತೆ ಸಾಲ್ವ ತಾನೇ ನೇದಬಲೆಲಿ ಸಿಕ್ಕಾಕಂಡ್ ಒದ್ದಾಡಿವೆ. ಈ ಸಣ್ಣ ಪ್ರಾಯಲಿ ನೀವುಗೆ ಹೀಂಗೆ ಆಕೆ ಬೊತ್ತಾಗಿತ್ತ್. ನಿಮ್ಮ ರೂಪ, ಯವ್ವೊನ, ದೈರ್ಯ ಹಾಳಾಕೆ ಬೊತ್ತ್. ನನ್ನಂದ ನೀವುಗೆ ಏನಾದರ್ ಸಾಯ ಆದೋ ಏನೋ?"

ಅಂಬೆಗೆ ನೆಗಾಡದೆ ಇರಿಕೆ ಆತ್ಲೆ. "ಗಿರಿನಾಯಕಾ, ನಿನ್ನ ಮಾತ್‌ಗೆ ನೆಗಾಡ್ದಕ್ಕೆ ನನ್ನ ಕ್ಷಮಿಸ್, ಆರ್ಯಾವರ್ತದ ದೊಡ್ಡದರ್ಲಿ ದೊಡ್ಡದಾದ ಸಾಮ್ರಾಜ್ಯನ ರಕ್ಷಣೆ ಮಾಡುವ ಭೀಷ್ಮರ್‌ಂದ ನನ್ನ ಸಮಸ್ಯೆಗೆ ಪರ್ಾ್ಯರ ಸಿಕ್ಕಿತ್ಲೆ. ತನ್ನ ಸೊಂತ ಸಕ್ತಿಲಿ ಸೌಭದೇಸನ ಕಟ್ಟಿದ ಕಾಡ್ ಮ್ಯೊಂಸರ ರಾಜ ಸಾಲ್ವ ಭೂಪತಿಗೆ ನನ್ನ ಸಮಸ್ಯೆನ ಪರ್ಾ್ಯರ ಮಾಡಿಕೆ ಆತ್ಲೆ. ಇನ್ನ್ ಈ ಗುಡ್ಡಗಾಡ್‌ನ ಹತ್ತೋ, ಇಪ್ಪತ್ತೋ ಕುಟುಂಬಗಳ ನಾಯಕ ನೀ. ನಿನ್ನಂದ ನನ್ನ ಸಮಸ್ಯೆ ಪರ್ಾ್ಯರ ಆಕೆ ಉಟ್ಟೋ? ಕಳ್ದ್ ಹೋದ ದಿನಗಳ ಮರ್ಯ್ಕೆಂದೇ, ಇಲ್ಲಿಗೆ ಬಂದೋಳು ನಾ. ಮತ್ತೆ ಅದರ ನೆಂಪುನ ನಂಗೆ ಮಾಡ್ಬಡ. ಅದಿರ್ಲಿ, ನಿಂಗೆ ಇಸ್ಟ್ ಲಾಯ್ಕಲಿ ಸಂಸ್ಕೃತ ಬಂದದೆಲೇ? ಅದ್ ಹೇಂಗೇ?"

ಅಂಬೆನ ಪ್ರಸ್ನೆಗೆ ಗಿರಿನಾಯಕ ಉತ್ತರ ಕೊಟ್ಟದೆ. "ನೀವು ನೆಗಾಡ್ದಕ್ಕೆ ನಂಗೆ ಏನ್ ಸಾ ಬೇಜಾರ್ ಇಲ್ಲೆ, ರಾಜಕುಮಾರಿ. ಕಸ್ಟಲಿ ಇರೋವ್ಕೆ ನನ್ನ ಕೈಂದಾದ ಸಾಯ ಮಾಡ್ದು ನನ್ನ ದರ್ಮಾಂತ ತಿಳ್ದಂವ ನಾ. ನನ್ನಂದ ನಿಮ್ಮ ಸಮಸ್ಯೆನ ಪರ್ಾ್ಯರ ಮಾಡಿಕೆ ಆತ್ಲರು ಸಾ ನಿಮ್ಮ ಕ್ಷೇಮಲಿ ಕಾಶಿಗೆ ನಾ ಕಳ್ಸಿ ಕೊಡುಂವೆ. ಕಾಶಿ ನಂಗೆ ಗುರ್ತದ ಜಾಗೆ. ನಾ ಸಂಸ್ಕೃತ ಕಲ್ತದೇ ಕಾಶಿಲಿ."

ಅಂಬೆಗೆ ಅಚ್ಚರಿ ಆದೆ. ಅದ್ ಹೇಳ್ತ್ "ನೀ ಕಾಶಿಗೆ ಹೋಗಿ ಸಂಸ್ಕೃತ ಕಲ್ತದ್‌ಬಾಳ ದೊಡ್ಡ ಸಾದನೆ. ಆದರೆ ನೀ ಅಸ್ಟ್ ದೂರಕೆಹೋಗಿ ಕಲ್ಯಕೆ ಕಾರ್‍ಣ ಏನ್?"

ಗಿರಿನಾಯಕ ಮುಂದರ್ಸಿತ್ "ಹಂಞ ದೂರಲಿ ರುಸಿನಮನೆ ಒಂದು ಉಟ್ಟು. ಅಲ್ಲಿನ ರುಸಿ ಒಬ್ಬನ ನಾ ಸಣ್ಣದಿರಿಕನ ನೋಡ್ದೆ. ಅವು ನನ್ನ ಸಂಸ್ಕೃತ ಕಲೀಂತ ಹೇಳ್ದೊ. ಹುಟ್ಟ್‌ಂದ ಜಾತಿ ಆಗಲಿ ವರ್ಣ ಆಗಲೀ ನಿರ್ಣಯ ಮಾಡಿಕೆ ಆದ್ಲೆ. ಹುಟ್ಟಿದ ಮ್ಯೊಂಸಂಗೆ ವಿದ್ಯೆ ಕಲೆವ ಹಕ್ಕ್ ಇದ್ದದೆ. ಎಂತ ಹೇಳಿ ನನ್ನ ಬಾಳ್‌ಗೆ ಒಂದ್ ಅರ್ತನ ಕೊಟ್ಟೊ. ಬಿಲ್ಲ್ ವಿದ್ಯೆನ ಕಲ್ಯೋಕುಂತ ಇಚ್ಚೆ ನಂಗೆ ಅವರ್‌ಂದಾಗಿ ಹುಟ್ಟಿತ್. ಅವರ ಕಾಲ್‌ಗೆ ಬಿದ್ದ್ ವಿದ್ಯೆ ಹೇಳಿ ಕೊಡೀಂತ ಕೇಳಿಕಂಡೆ. ಅವು ಯಾಗೋಳೂ ತಪಸ್ಸ್‌ಲಿ ಕುದ್ದ್‌ಕಂಡಿರೋವು. ಬೊದ್ಕಿಕೆ ಎಸ್ಟ್ ಬೇಕೋ ಅಸ್ಟ್ ಮಾತ್ರ ಅವು ಜನಂಗಳ ಹಕ್ಕಲೆ ಮಾತಾಡ್ತಿದ್ದೊ. ಅವುಕೆ ವಿದ್ಯೆ ಕಲ್ಸುದರ್ಲಿ ಮೊನ್ಸಿತ್ಲೆ. ಆದರೆ ನನ್ನ ಬೆನ್ನ್ ತಟ್ಟಿ, "ಲೋಕ ದೊಡ್ಡದುಟ್ಟು ನಿಂಗೆ ತಕ್ಕ ಗುರುಗ ಸಿಕ್ಕಿನೇ ಸಿಕ್ಕುವೊ."-ಎಂತ ಹೇಳಿ ಹರ್ಸಿದೊ. ನಾ ಕಾಡ್‌ನ ಗೆಣ್ಸ್, ಜೇನ್-ಇದರೆಲ್ಲಾ ಕೂಡ್ಸಿಕಂಡ್ ಹಸ್ತಿನಾವತಿನ ಪಂಡಿತರ್‌ಗೆ ಕಾಣಿಕೆ ಕೊಟ್ಟ್, ಉದ್ದಾಕೆ ಅಡ್ಡ ಬಿದ್ದ್ ನಂಗೆ ವಿದ್ಯೆ ಕಲ್ಸಿನೀಂತ-ಬೇಡಿಕಂಡೆ. ನನ್ನ ಹುಟ್ಟು ಗೊತ್ತಾಕನ, ಅವು ವಿದ್ಯೆ ಹೇಳಿಕೊಡಿಕೆ ಒಪ್ಪಿತ್ಲೆ. ಅಕೇರಿಗೆ ಕಾಶಿಗೆ ಹೋದೆ. ಬಾಳ ಬಡತನಲಿ ಇರುವ ಪಂಡಿತರ ಒಬ್ಬರ ಹೋಗಿ ನೋಡಿದೆ. ನನ್ನಕ್ಕಲೆ ಇರ್‌ವೊಸ್ಟ್‌ದುಡ್ಡು ಕೊಟ್ಟ್, ಅಡ್ಡ ಬಿದ್ದ್ ನನ್ನ ಉದ್ದೇಸನ ತಿಳ್ಸಿದೆ. ನನ್ನ ಹರ್ಕ್, ಮುರ್ಕ್ ಬಾಸೆ ಅವ್ಕೆ ಅರ್ತ ಆತ್."

ಉಕ್ಕಿ ಬಂದ ನೆಗೆಂದ ಗಿರಿನಾಯಕನ ಮಾತ್ ನಿತ್ತತ್. ಇದಾರ್ಲಿ ನೆಗಾಡಿಕೆ ಎಂತದುಟ್ಟೊಂತ ಅಂಬೆ ಹುಬ್ಬುನ ಕೊಣ್ಸಿತ್. ಗಿರಿನಾಯಕ ನೆಗಾಡಿಕಂಡ್ ಮುಂದೆ

ಹೇಳ್ದಿ. ಕಾಶಿಲಿರಿಕನ ಸುರುನ ದಿನಗಳ ನೆಂಪಾಗಿ ಅಂವಂಗೆ ನೆಗೆ ತಡ್ಯಕಾತ್ಲೆ. "ರಾಜಕುಮಾರಿ, ನಂಗೆ ವಿದ್ಯೆ ಹೇಳಿಕೊಟ್ಟ ಆ ಪಂಡಿತರ್ ಏಲ್ಲದರ ಸಮಾನ ನೋಡೋವು ಆಗಿದ್ದೊ. ಅವು ನಂಗೆ ಜನಿವಾರ ಹಾಕಿ, "ಇದ್ ನಿಂಗೆ ಎರಡ್ನೇ ಜಲ್ಮ. ನೀ ಈಗ ಬ್ರಾಂಬ್ರಮಾಣಿ ಆದ. ನಿಂಗೆ 'ಬ್ರಹ್ಮದತ್ತ'–ಎಂತ ಹೆಸರ್ ಇಸಿನೆ."–ಎಂತ ಹೇಳಿ ಒಂದ್ ಹಂಞಾ ಮಂತ್ರಗಳ ಕಲ್ಸಿದೊ. ಕಾಶಿ ವಿದ್ಯಾಪೀಠಲಿ ಬ್ರಹ್ಮದತ್ತಂತೇಳುವ ಹೆಸ್ರ್‌ಲಿ ನಾಕ್ ವೊರ್ಸ ಕಲ್ತೆ. ನನ್ನಂದಳೂ ಕಪ್ಪು ಬಣ್ಣದ ಶಿಷ್ಯರ್ ಅಲ್ಲಿ ಇದ್ದೊ. ಬಿಳಿ ಬಣ್ಣದೊವು ನಮ್ಮನ ಕಾಡ್ ಮ್ಯೊಂಸರಿಗೆ ಹುಟ್ಟಿದೊವುಂತ ತಮಾಸೆ ಮಾಡ್ತಿದ್ದೊ. ನಮ್ಮ ಕಪ್ಪು, ಕಪ್ಪು ಸರೀರಲಿ ಬಿಳಿ, ಬಿಳಿ ಆಗಿ ಇದ್ದ ಜನಿವಾರನ ನೆನ್ಸಿಕಂಡೇ ನಾ ಆಗ ನೆಗಾಡ್ದೆ. ಕಾಶಿಲಿರಿಕನ ಒಮ್ಮೆನೂ ನಿಮ್ಮ ಆಗಲಿ, ಪ್ರತಾಪಸೇನ ಮಾರಾಜರ ಆಗಲಿ ನಾ ಕಂಡಂವ ಅಲ್ಲ. ರಾಜಕಾರಣಲಿ ಮುಣ್‌ಂಗಿಕಂಡ್ ಇದ್ದ ನೀವು, ನಮ್ಮಂತವರ ಕಣ್ಣ್‌ಗೆ ಬೀಳಿಕೆ ಹೇಂಗೆ ಆದೆ? ನೀವು ತುಂಬಾ ಪೊರ್ಲುನ ಮತ್ತೆ ಗಂಡ್‌ಗಳ ಹಾಂಗೆ ಸಾಮರ್ತ್ಯ ಇರುವ ಗೂಡೇಂತ ಹೇಳ್ದರ ಕೇಳಿದ್ದೆ. ಆಗ ನಿಮ್ಮ ನೋಡೂಕುಂತ ನಂಗೆ ತುಂಬಾ ಆಸೆ ಇತ್ತ್. ಅದ್ ಹೇಂಗೆ ಈಡೇರ್ದೇಂತ ನಾ ಕನ್ಸ್‌ಲಿನೂ ನೆನ್ಸಿಲ್ಲೆ. ಕಾಶಿನ ಮಾರಾಜನ ಮಗಳ್ ನೀವು. ನೀವುಗೆ ತಿಂಬಕೆ ಕಾಡ್‌ಗೆಣ್ಸ್ ಕೊಟ್ಟೆ. ಕುಡೀಕೆ ಏಡ್‌ನ ಹಾಲ್ ಕೊಟ್ಟೆ. ನನ್ನ ನೀವು ಮಾಪು ಮಾಡೊಕು. ನೀವುಗೆ ಹೇಂಗೆ ಉಪ್ಚಾರ ಮಾಡೊಕೂಂತೇಳೇ ಗೊತ್ತಾದ್ಲೆ."

ಅಂಬೆ ಅಂವನ ಸಮ್ದಾನ ಮಾಡುವ ಸೊರಲಿ ಹೇಳ್ತ್. "ಗಿರಿನಾಯಕಾ, ನಾ ರಾಜಕುಮಾರಿ ಆಗಿ ನಿನ್ನಂದ ಉಪ್ಚಾರ ಮಾಡ್ಸಿಕಂಬಕೆ ಬಂದೋಳ್ಳು ಅಲ್ಲ. ಇಸ್ಟ್ ನೀ ಕೊಟ್ಟದೇ ನಿನ್ನ ದೊಡ್ಡಸ್ತನ. ಹೊಟ್ಟೆ ಇಸಿದವರ ಹೊಟ್ಟೆ ತುಂಬುಸುದರ್‌ಂದ ದೊಡ್ಡ ಧರ್ಮಬೇರೆ ಯಾವ್ದುಸಾ ಇಲ್ಲೆ. ಬರ್ಗಾಲ ಬಾಕಾಕನ ತಿಂಬಕೆ ಏನ್ ಇಲ್ಲದಿರಿಕನ ಬ್ರಹ್ಮರುಸಿ ವಿಶ್ವಾಮಿತ್ರರ್ ನಾಯಿನ ಮಾಸ ತಿಂದ್ ಬೊದ್ಕಿದೊ ಗಡ. ಅದ್ ಆಪತ್ ಬಾಕನ ತಕಂಬ ದರ್ಮ. ಅದರ್ಲಿ ಈಗ ನಿನ್ನಂದ ನಂಗೆ ಒಂದು ಉಪಕಾರ ಆಕು. ನಾ ಯೋಗಿನಿ ಆಗಿ ನನ್ನ ಮುಂದೆನ ಆಯಿಸ ಕಳ್ಯೊಕೂಂತ ಒಳೆ. ಬಂದದರ ಎದ್ರ್‌ಸುವ ಸಕ್ತಿನ ನನ್ನ ಮೊನ್ಸ್‌ನ ಒಂದೇ ಕಡೆ ಇಸುದರ್‌ಂದ ಗಳ್ಸೊಕೂಂತ ಒಳೆ. ನನ್ನ ಪರಿಸ್ತಿತಿನ ಅರ್ತ ಮಾಡಿಕಂಡ್, ನಂಗೆ ದಾರಿ ತೋರ್ಸುವ ದೊಡ್ಡ ರುಸಿಗಳ ನಾ ಹುಡ್ಕಿಕಂಡ್ ಒಳೆ. ನಿನ್ನೋವ್ಕೆ ನನ್ನ ಪರ್ಚಯ ಮಾಡ್ಸ್. ನನ್ನ ಕತೆನ ಮಾತ್ರ ಹೇಳ್ಬಡ. ಇಲ್ಲಿನೇ ಹಕ್ಕಲೆ ಇರುವ ಆಸ್ರಮದ ರುಸಿಗಳ ನೋಡಿಕೆ ಬಂದೊಳೆ ಎಂತ ಅವ್ವೆಗೆ ತಿಳ್ಸ್."

ಗಿರಿನಾಯಕ ಅವರ ಬಾಸೆಲಿ ಅದೇನೋ ಹೇಳ್ತ್. ಅದರ್ಲಿ ಕಾಶಿ, ಪ್ರತಾಪಸೇನ, ಅಂಬೆ ಎಂಬ ಹೆಸ್ರ್‌ಗ ಬಾತ್. ಅಂವ ಹೇಳಿಕಂಡ್ ಹೋದ ಹಾಂಗೆ ಅಲ್ಲಿದ್ದವರ ಮೋರೆಲಿ ಬದ್ಲಾವಣೆ ಕಂಡತ್. ಅಚ್ಚರಿ ಎಲ್ಲರ ಮೋರೆಲಿ ಕಂಡತ್. ಇಂವ ಮಾತ್‌ನ ನಿಲ್ಸಿಕಾಕನ ಗಿರಿನಾಯಕನ ಅಪ್ಪ ಅವ್ವ ಸೇರಿದಾಂಗೆ ಎಲ್ಲೋವುನೂ ಅಂಬೆಗೆ ಉದ್ದಂಡ ನಮಸ್ಕಾರ ಮಾಡ್ದೊ. ಅಂಬೆ ಅಡ್ಡಿ ಮಾಡುವಾಂಗೆ ಹೇಳ್ತ್, "ಇದ್, ಇದ್‌ನೇನಂಗೆ ಆದುಲ್ಲೆ. ನಾ ರಾಜಕುಮಾರಿ ಆಗಿರ್ದ್‌ಕೆಹೇಂಗೆಸಾ ಅಡ್ಡಬೀಳುದೋ? ನಿನ್ನ ಅಪ್ಪ,

ಅವ್ವನನ್ನಪ್ರಾಯನಾದರ್‌ನೋಡ್ದು ಅಲ್ಲನೋ? ಹುಟ್ಟಿನ ಕಾರ್ಣಕ್ಕೆ, ಪ್ರಾಯದೋವೂ ಎಂಬ ಕಾರ್ಣಕ್ಕೆನಾವು ಯಾರ್‍ನಸಾ ಗೌರವ ಕೊಡ್ದು ಬೇಡ. ನಾವು ಮಾಡ್ದ ಸಾದನೇಗೆ ಮಾತ್ರ ಗೌರವ ಕೊಡೊಕು. ನಿಮ್ಮ ಮೊನ್ಸ್‌ಲಿ ನಾವು ಕೀಳ್ ಜಾತಿಯಾವೂಂತ ಉಟ್ಟು. ಹಾಂಗಾಗಿ ನೀವು ಇದರೆಲ್ಲಾ ಮಾಡಿರೆ. ಅದರ್‌ಂದಾಗಿನೇ ನೀ ಬರೇ ಗಿರಿನಾಯಕ ಆಗಿ ಒಳ್ದದ್. ಆ ಸಾಲ್ವ ಭೂಪತಿನ ನೋಡು. ಅಂವ ಒಂದ್ ಸೊಂತ ರಾಜ್ಯನನೇ ಕಟ್ಟಿಬುಟ್ಟತ್ ಅದ್. ಅದ್ ನೀವು ಕಾಡ್ ಮ್ಯೊಂಸರ್ ಆರ್‍ಯರಿಗೆ ತೋರ್‍ಸಿಕೊಡಕಾದ್."

ಗಿರಿನಾಯಕಂಗೆ ಅದರ ಮಾತ್‌ಂದ ಬೇಜಾರ ಆತಿಲ್ಲೆ. "ರಾಜಕುಮಾರಿ, ಇವು ಯಾರ್‌ನೂ ವಿದ್ಯೆ ಕಲ್ತೋವು ಅಲ್ಲ. ರಾಜರ್‌ಗ ದೇವುರ್‌ಗೆ ಸಮಾಂತ ತಿಳ್ಕಂಡ್ ಹಾಂಗೆ ಮಾಡ್ತ್ಯೊಳೊ. ನಾನೀವುಗೆ ಅಡ್ಡಬಿದ್ದಳೆನೋ? ಆದರೆ ರಾಜಕುಮಾರಿ, ನೀವುಗೆ ಲೋಕದ ಅನ್ಬವ ಏನ್ ಸಾ ಸಾಲದ್. ಮೇಲ್ಜಾತಿಯವರ ಕಾಲ್ ಹಿಡ್ಯದೆ ಕೆಳಜಾತಿಯೊವು ಬೊದ್ಕುದು ತುಂಬಾ ಕಸ್ಟ. ಎಲ್ಲೋವುನೂ ಸಮಾನಾಂತ ಆಕರೆ ಸಾಸ್ತ್ರನ ಮಾಡ್ದೋವು ಏಲ್ಲೋವೂ ಸಮಾನಾಂತ ಹೇಳೊಕು. ಅದಕ್ಕೆ ಸರಿಯಾಗಿ ಆದಾರ ಸ್ಲೋಕಗಳ ಮಾಡೊಕು. ಅದರ ಸಾಸ್ತ್ರಕ್ಕೆ ಸೇರ್‍ಸೋಕು. ರಾಜರ್‌ಗಳ ಮೂಲಕ ಅದರ ರೂಡಿಗೆ ತರೊಕು. ದರ್ಮಾಂತೇಳ್ದು ಸಾಸ್ತ್ರಲಿ ಇರ್‍ದುಲ್ಲೆ. ಆಚರಣೆಲಿ ಇದ್ದದೆ."

ಅಂಬೆ ತಲೆದೂಂಗಿತ್ "ನೀ ಹೇಳ್ದೇನೋ ಸರಿನೇ. ಆದರೆ ನೀ ಏನ್ ಮಾಡೋಕುಂತಹೇಳಿಯಾಂತ ನಂಗೆ ಅರ್ತ ಆತ್ಲೆ."

ಗಿರಿನಾಯಕ ವಿವರ್‍ಣೆ ಕೊಡಿಕೆ ಸುರುಮಾಡ್ತ್. "ರಾಜಕುಮಾರೀ, ಆರ್‍ಯಾವರ್ತದ ರಾಜರ್, ಮಾರಾಜರ್‌ಗ ಮತ್ತೆ ಇದೇ ಸರೀಂತ ಹೇಳಿಕಂಡ್ ಬಾವ ಪುರ್‍ಯೊಯ್ತರ್ ಸಮಾನತೆನ ಎಂದಾದರ್ ಜೀವನದ ರೀತಿಂತ ಒಪ್ಪಿಕೆ ಸಾದ್ಯನೋ? ಇವರ ದರ್ಮದ ಬುಡನೇ ತಾರತಮ್ಯ. ಆರ್ಯಾವರ್ತದ ರಾಜರ್‌ಗಳ ಮತ್ತೆ ಪುರ್‍ಯೋಯ್ತರ್‌ಗಳ, ಪ್ರಜೆಗ ಹೆದ್ರಿಕಂಡ್ ಗೌರವ ಕೊಟ್ಟವೆ. ವಿದ್ಯೆ ಕಲ್ಯದ ಹೆಣ್ಮಕ್ಳ, ಸೂದ್ರರ್ ಮತ್ತೆ ಕಾಡ್ ಮ್ಯೊಂಸರ್ ರಾಜರ್‌ಗೆ, ಮತ್ತೆ ಪುರೋಯ್ತರ್‌ಗೆ ಅಡಿ ಆಳಾಗಿ ಬೊದ್ಕುವೆ. ಸೋಸಣೆನ ಕರ್ಮಪಲ, ಗ್ರಾಚಾರ, ಹಣೆಬರ ಎಂತ ಪೌರುಸ ಇಲ್ಲದವರಾಂಗೆ ಒಪ್ಪಿಕಂಡವೆ. ದರ್ಮನ ಒಳ್ಸಿ, ಯಾಗೋಳೂ ದೇವರ ದ್ಯಾನ ಮಾಡಿ, ಎಂತ ಹೇಳುವ ಪುರೋಯ್ತರ್‌ಗ, ಹುಟ್ಟುನ ಕಾರ್ಣದ ಮೇಲ್, ಕೀಳ್‌ನ ಏಕೆ ಒಮ್ಮೆನೂ ಹೇಳ್ದುಲ್ಲೇ? ಹೇಳಿರೆ ಅವರ ಬೋಗ, ವಿಲಾಸದ ಜೀವನಕ್ಕೆ ಅಡ್ಡಿ ಬಂದದೆ ಮೇಲ್, ಕೀಳ್‌ನ ತೆಗ್ಯಕೆ ತಿಳಿವಳಿಕೆನ ದಾರಿ ಹಿಡ್ಡಂವ ನಾ. ನನ್ನ ಸಾಲ್ವ ಭೂಪತಿಗೆ ಹೋಲ್ಸ್ ಬೊಡಿ. ಅಂವ ಅಂವನ ರಟ್ಟೆ ಬಲಲಿ ನಂಬಿಕೆ ಇಸಿದಂವ. ಆರ್‍ಯಾವರ್ತಲಿ ಒಂದು ಕಾಡ್ ಮ್ಯೊಂಸನ ರಾಜ್ಯ ಇರ್‍ದು ದೊಡ್ಡ ಸಾದನೇಂತ ನಾ ಒಪ್ಪಿಕಣೆ. ಆದರೆ ರಾಜ ಆದಂವ ಯಾವ್ದೇ ಜಾತಿಯಂವ ಆದರ್ ದಿನ ಹೋದಾಂಗೆ ಅಂವ ಕ್ಷತ್ರಿಯ ಅದೆ. ಅಂವನ ಸುತ್ತೋಳೂ ಪುರೋಯ್ತರ್ ಹುತ್ತ ಕಟ್ಟುವೆ. ಅಕೆರಿಗೆ ಅಂವ ಪುರೋಯ್ತರ ಕೈ ಬೊಂಬೆ ಆಗಿ ರೂಡಿಲಿ ಇರುವ ದರ್ಮದ ಪ್ರಚಾರ ಮಾಡಂವ ಆದೆ. ಹೀಂಗೆ ಆಕೆ ಬೊತ್‌ಂತಳೇ ನಾ ಜ್ಞಾನ ಮಾರ್ಗನ

ಕಂಡ್‌ಕಂಡದ್. ಭೀಷ್ಮಚಾರ್‍ಯರ ಬುಟ್ಟರೆ ಆರ್ಯಾವರ್ತದ ಎಲ್ಲಾ ರಾಜರ್‌ಗಳ ನಾ ತರ್ಕಲಿ ಸೋಲಿಸಿ ಬುಡುಂವೆ. ಇದರ ನಾ ನನ್ನ ಹೊಗಳಿ ಕೊಂಬೊದೂಂತ ತಿಳ್ಯಬಡಿ. ಇದರ ನಾ ಎದೆ ತಟ್ಟಿ ಹೇಳಿನೆ. ಜ್ಞಾನಗಳ್ಳುದರ್ಲಿ ಇರುವಸ್ಟ್ ಸಂತೋಸ ಬೇರೆ ಯಾವ್ದಾರ್‌ಲೂ ಇಲ್ಲೆ. ಜ್ಞಾನಕ್ಕೆ ಸರಿಸಮ ಆದದ್ ಈ ಲೋಕಲಿ ಯಾವ್ದುಟ್ಟು? ರಾಜ್ಯ ಕಟ್ಟುದು, ಅದರ ಸಾಮ್ರಾಜ್ಯ ಮಾಡಿಕೆ ನೆತ್ತರ್‌ನ ಕೋಡಿ ಹರ್ಸುದು, ಯಾಗೋಳೂ ಅಪನಂಬಿಕೆಲಿ, ಮಚ್ಚರಲಿ, ಆತ್ಮಕ್ಕೆ ಇರೋದವಾದ ಬೊರ್ದ್ಕನ ಬೊದ್ಕುದು ಇದೆಲ್ಲಾ ಯಾರಿಗೆ ಬೇಕ್? ಮ್ಯೊಂಸರ ಹೆಣಗಳ ಮೇಲೆ ಕಟ್ಟಿದ ಯಾವುದೇ ರಾಜ್ಯ ಎಸ್ಟ್ ದಿನ ಒಳ್ಯೋದು?"

ಅಂಬೆಗೆ ಗಿರಿನಾಯಕ ಜೀವನನ ನೋಡುವ ರೀತಿ ಇಸ್ಟ ಆದೆ. ಅದ್ ಇಸ್ಟ ಪಟ್ಟ ಒಬ್ಬನೇ ಒಬ್ಬ ಸಾಲ್ವ ಭೂಪತಿ. ಅಂವನಲ್ಲಿ ಎದೆಗಾರಿಕೆ ಇತ್ತ್. ವಿದ್ಯಾವಂತರ ನಡೋಳ್ಕೆ ಇತ್ತ್. ಆದರೆ ಜ್ಞಾನದ ಕೊರ್ತೆ ಇತ್ತ್. ಅಂವ ಜ್ಞಾನಿ ಆಗ್ತಿದ್ದರೆ ಅಂವನ ದೊಡ್ಡಸ್ತಿಕೆನ ಒಳ್ಸಿಕಂಬಕಾಗಿ, ಅದರ ತಿರಸ್ಕಾರ ಮಾಡ್ತಿತ್ಲೇಂತ ಅಂಬೆಗೆ ಆತ್. ಅಂವಂಗೆ ತನ್ನಂತ ಆರ್ಯರ ಹೆಣ್ಣ್ ಸಿಕ್ಕಿಕೆ ಸಾದ್ಯ ಇಲ್ಲೆ. ಅದರ್‌ಲಿನೂ ಬಿಲ್ವಿದ್ಯೆ ಕಲ್ತ, ವಿದ್ಯೆ ಕಲ್ತ ತನ್ನಂತವ್ಳ ಸಿಕ್ಕಿಕೆ ಹೇಂಗೆ ಸಾದ್ಯ? ದೊಡ್ಡಸ್ತಿಕೇಂತೇಳ್ದು ಬುದ್ದಿ ಇಲ್ಲದವರ ಒಂದು ಬ್ರಮೆ. ಸಾಲ್ವ ಭೂಪತಿ ಒಬ್ಬ ದೊಡ್ಡ ಮೂರ್ಕ.

ಆ ಭೀಷ್ಮರ್‌ಲಿ ದೇಹ, ಬುದ್ದಿ, ಮನ್ಸ್‌ನ ಸಕ್ತಿ ತುಂಬಾ ಉಟ್ಟು. ಅದಿದ್ದ್ ಸಾ ಏನ್ ಪ್ರಯೋಜನ ಆತ್? ಎಂತ ಅಂಬೆ ತನಲಿ ತಾನೆ ಪ್ರಸ್ನೆ ಕೇಳಿಕಂಡತ್. ಹೂಂತಗಾರ್ತಿ ಅರ್ಸ್ ಮಗಳ ಷಂಡ ತಮ್ಮಂಗೆ ಮೊದ್ವೆ ಮಾಡ್ಸುವ ತೀರ್ಮಾನ ಮಾಡ್ದ, ದಯೆ ಇಲ್ಲದ ಮ್ಯೊಂಸ ಭೀಷ್ಮರ್. ಬುದ್ದಿ ಇಲದೊವು. ಮುಂದೇನಾದೂಂತ ತಿಳ್ಯದೊವು ಎಂತಾ ಆಚಾರ್ಯರ್? ಅದ್ಕೇ ಸಾಲ್ವ ಭೂಪತಿನ ಮತ್ತೆ ಭೀಷ್ಮರ ಅಪ್ಪ ದೂರ ಇಸಿದ್. ಹಂಕಾರ, ಎದೆಗಾರಿಕೆ, ಮದ ತುಂಬಿದ ಇವು ಅಪ್ಪ ಜೂವಲಿರಿಕನ ಮುಟ್ಟ ಕೊರ್‌ಗೊಕೂಂತೇಳಿ ಅಲ್ಲನೋ ಕಾಶಿಗೆ ಬಂದದ್? ಅಪ್ಪ ಸತ್ತ ಮೇಲೆ ಯಾರ್ ಸಾ ವಿರೋದಿಗ ಇಲ್ಲದೆ ಕಾಶಿ ಕುರು ಸಾಮ್ರಾಜ್ಯಕ್ಕೆ ಸೇರಿಬುಟ್ಟದೆ. ಆ ಸಾಲ್ವ ಮತ್ತೆ ಈ ಭೀಷ್ಮ ತಮ್ಮ ದೊಡ್ಡಸ್ತಿಕೆಗಾಗಿ ಬೇರೋವ್ಕೆ ಬೇನೆ ಮಾಡೋವು. ಆದರೆ ಈ ಗಿರಿನಾಯಕ ಅವರಾಂಗೆ ಅಲ್ಲ. ಬುದ್ದಿವಂತ ಆದ ಇಂವ ತನ್ನಂದಾಗಿ ಬೇರೋವ್ಕೆ ಬೇನೆ ಆಕೆ ಬೊರ್ತ್ಂತ ಹೇಳುವ, ಲೋಕಲಿ ಎಲ್ಲೋವೂನೂ ಸುಕಲಿರೊಕೂಂತ ನೋಡುವ ಹೈದ. ಮದ ತುಂಬಿದ ಭೀಷ್ಮ, ಸಾಲ್ವರಿಗೆ ಇದೇ ಬುದ್ದಿ ಇರ್ತಿದ್ದರೆ ತನಿಗೆ ಈ ಪಾಡ್ ಬಾತಿತ್ಲೆ –ಎಂತ ಅಂಬೆ ಹೇಳಿಕಂಡತ್.

"ಗಿರಿನಾಯಕಾ, ನೀನ್ ಜೂವನನ ನೋಡುವ ರೀತಿ ಬಾರಿ ದೊಡ್ಡದ್. ಅದ್ ನಿಂಗೆ ಕುಸಿಕೊಡ್ದು. ಆದರೆ ಈಗಿರುವ ಕಟ್ಟ್ ಕಟ್ಲೆನ ಬದ್ಲಾಯ್ಸಿಕೆ ಅದರ್‌ಂದ ಪ್ರೋಜನ ಇಲ್ಲೆ. ಅಧಿಕಾರ ಇಲ್ಲದೊವು ತಮಿಗೆ ಬೇಕರೆ ಬೇರೇವ್ಕೆ ಹೇಳಿಕೆ ಆದುಲ್ಲೆ. ಈ ಆರ್ಯಾವರ್ತಲಿ ಇರುವ ಕ್ಷತ್ರಿಯರ ನೋಡು. ಅವು ಕಾಡ್ ಮ್ಯೊಂಸರ ದಕ್ಷಿಣ

ದಿಕ್ಕ್‌ಗೆ ಓಡ್ಸಿದ್ ದೊಡ್ಡ ಸಾಹಸಾಂತ ಈಗಳೂ ಬಡಾಯಿ ಕೊಚ್ಚಿಕೊಂಡವೆ. ಅಲ್ಲಿ ನೀರ್ ಕಮ್ಮಿಗಡ. ಮೊಣ್ಣು ಇಲ್ಲಿನಾಂಗೆ ಸಾರ ಇಲ್ಲೆಗಡ. ಇವ್ಕೆ ಸಾರ ಇರ್‍ವ ನದಿ ಬೈಲ್ ಎಲ್ಲಾ ಅವರ್ದೇ ಆಕೂಂತ ಆಸೆ. ನೆರ್‍ದ ಗೂಡೆಗ ಅವರ ಸೊತ್ತು ಆಕೂಂತ ಆಸೆ. ಕೆಟ್ಟ ಆಸೆಗ, ಜುಗಾರಿಕೋರತನ, ಮುರ್ಗಗಳ ಬೇಟೆನ ಅವು ರಾಜದರ್ಮಾಂತ ನೆನ್ಸಿಕೊಂಡೋವು. ದೊಡ್ಡಸ್ತಿಕೆಗೆ ಹುಟ್ಟದ ಕುಲನನೇ ಆದಾರ ಮಾಡಿಕೊಂಡ ಬುದ್ದಿ ಇಲ್ಲದೋವು ಅವು. ತಮ್ಮ ದೊಡ್ಡಸ್ತಿಕೆನೇ ಜೂವನಾಂತ ತಿಳ್ದ್‌ಕೊಂಡವ್ಕೆ ಎಲ್ಲೋವೂ ನಾವ್ಗೆ ಸಮಾಂತ ಚಿಂತೆ ಮಾಡಿವೆನಾ? ನಿನ್ನ ಜ್ಞಾನಂದ ನಿಂಗೆ ಮೇಲ್, ಕೀಳ್‌ನ ತಿಳ್ವಳಿಕೆ ಗೊತ್ತಾಗಿರ್‍ದು. ಅದರ್‌ಂದ ಹೆಚ್ಚಿಗೆದ್ ಏನ್ ಪ್ರೋಜನ ಆಗುಟು ಹೇಳ್. ಪಾಪ, ಇಲ್ಲಿ ನಾವು ಮಾತಾಡ್ದರ ಅರ್ತ ಆತ್ಲರ್‌ನೂ ಗಮನ ಇಸಿ ಕೇಳಿಕಂಬೋವ್ಕೆ ವಿದ್ಯೆ ಇಲ್ಲೆ. ಮೇಲ್, ಕೀಳ್‌ನ ತಿಳ್ವಳಿಕೆನೂ ಇಲ್ಲೆ. ವಿದ್ಯೆ ಇರ್‍ತಿದ್ದರೆ ಈ ಮೇಲ್, ಕೀಳ್‌ನ ಇರೋದ ಹೋರಾಡಿಕೆ ದೊಡ್ಡ ಸಕ್ತಿ ಒಂದು ಹುಟ್ಟಿಕಂಬತಿತ್. ಈಗ ನಿನ್ನ ಜ್ಞಾನದ ಪ್ರೋಜನ ನಿನ್ನ ಮಟ್ಟಿಗೆ ಮಾತ್ರ ಇರ್‍ದು."

ಗಿರಿನಾಯಕ ಅದ್ ಹೇಳ್ದ ಮಾತ್‌ನ ಅಲ್ಲಾಂತ ಹೇಳ್ತ್‌ಲ್ಲೆ. ಅಂವ ಸುಮ್ಮಂಗಿರುದರ ಅರ್ತ ಆಗಿ ಅಂಬೆ ಸಣ್ಣಕ್ಕೆ ನೆಗಾಡಿ ಹೇಳ್ತ್, "ಗಿರಿನಾಯಕಾ ಬಾಳ ಮಾತಾಡ್ದೇಂತ ಕಂಡದೆ. ಇಲ್ಲಿ ನಾಕ್ ದಿನ ನಿಮ್ಮ ಎಲ್ಲರ ಒಟ್ಟಿಗೆ ಯಾವ ಬೇನೆ, ಬೇಸರಿಕೆ ಇಲ್ಲದೆ ಕಳ್ಯಕೂಂತ ನನ್ನ ಆಸೆ. ಈಗ ನಂಗಾಗುಟು. ಇಂತಾ ಒಂದು ಅನ್ವಬವ ಮುಂದೆ ಜೂವನಲ್ಲಿ ಸಿಕ್ಕಿದೆನೋ ಇಲ್ಲೆನೋ? ದಯಮಾಡಿ ಇಲ್ಲಿ ಉಳ್ಕಂಬಕೆ ಹಂಞ ದಿನದ ಮಟ್ಟಿಗೆ ನಂಗೆ ಒಂದು ವ್ಯವಸ್ತೆ ಮಾಡಿ ಕೊಟ್ಟಿಯನಾ?"

*****

# ಹೋಳು – 12

## ಮೊನ್ಸ್‌ನ ಓದಿಕಣಿ ಅಜ್ಜಪ್ಪಾ

ದ್ರೋಣಾಚಾರ್ಯರ್ ಸತ್ತ ಮೇಲೆ ಇನ್ ಬೊದ್ಧಿ ಮಾಡ್ದೇನ್‌ಂತ ಏಚ್‌ನೆ ಭೀಷ್ಮರ ಕಾಡಿಕೆ ಸುರು ಮಾಡ್ತ್. ದ್ರೋಣಾಚಾರ್ಯರ ಹಾಂಗೆ ಕೊಲ್ಲುವ ಅಗತ್ಯ ಇತ್ಲೆ. ಹೆಬ್ಬೆಟ್ಟ್‌ನ ಕಳ್ಕಂಡ ಮುದಿ ಪ್ರಾಯದ ಗುರುಗಳ ಕೊಲ್ಲಿಕೆ ಧರ್ಮರಾಯ ಸುಳ್ಳು ಹೇಳಿಕೆ ಕೊಡುವ ಸಂದರ್ಬ ಆದರ ನೆನ್ಸಿ ಅವ್ಕೆ ಕಳವಳ ಆತ್. ತಾನ್ ಸ್ತಿರ ಮೊನ್ಸ್‌ಲಿ ಇಲ್ಲದಿರಿಕಾಕನ ಸಿಕಂಡಿ ಬಾಣ ಹೊಡ್ದದ್ ನೆಂಪಾತ್. ಈಗ ನಾ ಬೊದ್ಧಿರ್‌ನೂ ಸತ್ತಾಂಗೆ ಒಳೆ. ದ್ರೋಣಾಚಾರ್ಯರ್ ನಿಜಲಿನೂ ಸತ್ತೊಳೊ. ಈ ಎರ್ಡ್ ಸಂಗತಿನ ಹಿಂದೆ ಒಂದೇ ಸಕ್ತಿ ಇರುವ ಹಾಂಗೆ ಅವ್ಕೆ ಆತ್. ದರ್ಮರಾಯ ಸುಳ್ಳು ಹೇಳಕರೆ ಅದ್ಕೆ ಕೃಷ್ಣನ ಒತ್ತಾಯನೇ ಕಾರ್ಣ ಆಗಿರೋಕು. ಸಿಕಂಡಿನ ಬಾಣ ಬುಡಿಕೆ ಹೇಳ್ದುನೂ ಅಂವನೇ ಇರೊಕು. "ಭೀಷ್ಮರ್ ಬಿಲ್ಲ್ ಬಾಣನ ಕೈಲಿ ಹಿಡ್ಕಂಡ್ ಇರಿಕನ ಮುಟ್ಟ ಪಾಂಡೋವ್ಕೆ ಜಯ ಸಿಕ್ಕಿಕಿಲ್ಲೆ."–ಎಂತ ಕೃಷ್ಣ ಅಂದ್ ಅರ್ಜುನನೊಟ್ಟಿಗೆ, ಎದ್ರೆದ್‌ರ್ ಇರಿಕಾಕನ ಹೇಳ್ದ್ ನೆಂಪಾತ್. ಅಂವನ ಕುಮ್ಮಕ್ಕ್ ಇಲ್ಲದಿರ್ತಿದ್ದರೆ ಸಿಕಂಡಿ ಏಕೆ ಬಾಣ ಬುಡ್ತಿತ್? ಸಿಕಂಡಿ ಮಾಡ್ದಕ್ಕೆ ಬೇರೆ ಯಾವ ಕಾರಣ ಸಾ ಭೀಷ್ಮರ್ಗೆ ಹೊಳ್ತ್‌ಲ್ಲೆ.

ಅವರ ನೆಂಪುಗ ಹಿಂದೆಗೆ ಒಡ್ದೊ. ಯುದ್ದ ಹದ್ನಾರ್ನೇ ದಿನನ ಕಂಡದೆ. ದುರ್ಯೋದನನ ತಮ್ಮಂದರಲ್ಲಿ ಬೊದ್ಧಿ ಒಳ್ದವೂಂತೇಳ್ರೆ ಯುಯುತ್ಸು ಮತ್ತೆ ದುಶ್ಯಾಸನ ಮಾತ್ರಾ. ಯುದ್ದ ಸುರಾಕೆ ಮುಂದೆ ಕುರುಸೇನೆನ ಅದ್ಯಕ್ಷ ಆಗಿ, ಎರ್ಡ್ ಸೇನೆನ ನೊಡುಲಿ ರಥನ ನಿಲ್ಸಿ ಅವು ಎತ್ತರದ ದನಿಲಿ ಹೇಳ್ದೊ. "ಇದ್ ಧರ್ಮಕ್ಷೇತ್ರ ಆದ ಕುರುಕ್ಷೇತ್ರ. ಧರ್ಮನ ಒಳ್ಸಿಕಾಗಿ ಯುದ್ದನಡ್ದದೆ. ನಮ್ಮ ಪಾಳಯಲಿ ಇರ್ವ ಚಂಚಲ ಮೊನ್ಸ್‌ನೊವ್ಕೆ ಕುರುಸೇನೆನ ಎಜಮಾನ ಆಗಿ ಅಕೆರಿನ ಅವ್ಕಾಸ ನೀಡಿನೆ. ಪಾಂಡೋವು ಧರ್ಮ ಮಾರ್ಗಲಿ ನಡ್ಯೋವೂಂತ ತಿಳ್ಕಂಡೊವು ನಮ್ಮ ಸೇನೆಲಿ ಇದ್ದ್, ಅವರ ಮೊನ್ಸ್‌ಗೆ ಇರೋದ ಆಗಿ ಹೋರಾಡೋಕೂಂತ ಇಲ್ಲೆ. ಅವು ಅವ್ಕೆ ಇಸ್ಟ ಬಂದಾಂಗೆ ಮಾಡಕ್."

ಭೀಷ್ಮಾಚಾರ್ಯರ್ ಹೇಳ್ದರ ಕೇಳಿ ಎರ್ಡ್ ಕಡೆ ಇದ್ದ ಸೇನೆಯೊವು ಅಚ್ಚರಿಪಟ್ಟೊ. ಕುರುಸೇನೆಲಿದ್ದ ಹೆಚ್ಚಿನೊವ್ಕೆ ಏನ್ ಮಾಡ್ದೊಂತ ಗೊತ್ತಾತ್ಲೆ. ಅದರ್ಲಿ ಒಬ್ಬ ಬಿಲ್ಲ್ ಬಾಣ ಹಿಡ್ಕಂಡಿದ್ದಂವ ಮುಂದೆ ಬಂದ್‌ದ್, "ಅಜ್ಜಪ್ಪಾ, ಜೂಜಾಡಿಕೆ ಮುಂದೆ ಪಾಂಡೋವು ಇಂದ್ರಪ್ರಸ್ತನ ಆಳ್ತಿದ್ದೊ. ಜೂಜುನ ನಿಯಮದಾಂಗೆ ವನವಾಸ, ತಲೆಮರೆಸಿಕೊಂಡಿದ್ದ್ ತಿರ್ಗಬಂದ್ ನ್ಯಾಯ ರೀತಿಲಿ ಇಂದ್ರಪ್ರಸ್ತನ ಕೇಳುವೆ. ಅವುಕೆ ಅದರ ಕೊಡುದು ದರ್ಮ. ಪಾಂಡವೊರ ಕಡೆಂದ ಕೃಷ್ಣ ರಾಜಿ ಪಂಚಾಯ್ತಿಗೆ ಬಾಕನ ನಾ ಇದರ ಅಣ್ಣನಲ್ಲಿ

ಹೇಳ್ಯಳೆ. ಅವಂಗೆ ಅದ್ ಹಿಡ್ಸಿತ್ಲೆ. ಅಣ್ಣ ಮಾಡ್ದು ಅಧರ್ಮಾಂತ ನನ್ನ ಮೊನ್ಸ್ ಹೇಳ್ದಿ. ನಾ ಪಾಂಡೋವರ ಪಾಳಯಕ್ಕೆ ಸೇರಿಕಂಡ್ ಅನ್ಯಾಯದ ಇರೋದ ಹೋರಾಡ್ನೆ. ನೀವು ನನ್ನ ಹರ್ಸೋಕು."

ಅಂವನ ಹೆಸ್ರ್ ಯುಯುತ್ಸ್. ದುರ್ಯೋಧನನ ತಮ್ಮಂದರ್‌ಲಿ ಹೆಚ್ಚಿನ ತಿಳ್ವಳಿಕೆ ಇದ್ದಂವ. ದ್ರೌಪದಿನ ಸೀರೆ ಎಳ್ಯಕನ ಅಂವ ಸಿಟ್ಟಾದೇಂತ ಭೀಷ್ಮರ್ ತಿಳ್ಕಂಡಿದ್ದೊ. ಆಗ ಅಂವನ ಸದ್ದ್ ಸುದ್ದಿ ಇತ್ಲೆ. ವಿಕರ್ಣ ತಿರ್ಗಿ ಬಿದ್ದ್ ದ್ರೌಪದಿನ ಪರ ವಾದ ಮಾಡ್ತ್. ಅಂವನ ಮಾತ್‌ನ ಒಬ್ಬ ಸಾ ಎತ್ತಿ ಹಿಡ್‌ತ್ಲೆ. ಅಂವ ಯುದ್ಧ ಮಾಡ್ದುಲ್ಲೇಂತ ಸುಮ್ಮಂಗೆ ಕುದ್ರುದೂಂತ ಭೀಷ್ಮರ್ ಏಚನೆ ಮಾಡ್ದೊ. ಆದರೆ ಅಂವ ಹಾಂಗೆ ಮಾಡ್ತಿಲ್ಲೆ. ಕೌರವನ ಪಾಳೆಯಲೇ ಒಳ್ದ್‌ದ್. ಈಗ ಆ ಯುಯುತ್ಸ್ ಪಾಂಡವ ಪಾಳ್ಯಕ್ಕೆ ಸೇರಿಕೆ ಹೋದೆ. ದುರ್ಯೋಧನನ ಕೆಟ್ಟ ಕೆಲ್ಸಗಳ ಬಗ್ಗೆ ಒಮ್ಮೆನೂ ದನಿ ಎತ್ತದಂವ ಈಗ ಎದ್ದ್ ಕೊಂಡುಟ್ಟು. ಹೆಚ್ಚ್ ತಿಳ್ವಳಿಕೆ ಇದ್ದ ಜನರ ಹಣೇಬರನೇ ಹೀಂಗೆ. ಏನ್ಸಾ ಮಾತಾಡದೆ ಸುಮ್ಮಂಗೆ ಕುದ್ದವೆ. ಅಕೆರಿಗೆ ಒಮ್ಮೆನೇ ಸಿಡ್ದ್ ಎದ್ದವೆ.

ಯುಯುತ್ಸನ ಈ ರೀತಿನ ನಡೋಳ್ಕೆ ದುರ್ಯೋಧನನ ಸೋಲುಂತ ಭೀಷ್ಮರ್‌ಗೆ ಆಗ ಅನ್ಸಿತ್. ಯುದ್ಧ ಸುರಾಕೆ ಮುಂದೆ ಸ್ವತಹ ದುರ್ಯೋಧನನ ತಮ್ಮ ಎರ್ಡ್ ಸೇನೆಗಳ ನೊಡುಲಿ ನಿತ್ತ್‌ದ್ ತನ್ನಣ್ಣ ಮಾಡ್ದ್ ಅಧರ್ಮಾಂತ ಹೇಳ್ದ್. ಮುಂದೆನ ಪ್ರತಿ ಕಾಳಗಕೆ ಸಾ ಕುರುಪಾಳಯದ ಆತ್ಮ ಸಾಕ್ಷಿನ ಕೆಣ್ಕುವ ಸಂಗತಿ ಇದ್. ಅದ್ಕಿಂತ ಹಂಞ ಮುಂದೆ ಯುಧಿಷ್ಠಿರ ತನ್ನ ತಮ್ಮಂದರ ಒಟ್ಟಿಗೆ ಬಂದ್ ಕಾಲ್‌ಗೆ ಅಡ್ಡ ಬಿದ್ದಿತ್ತ್. "ಯುದ್ದಲಿ ಗೆಲ್ಲಿನೀಂತಹರ್ಸಿ ಅಜ್ಜಪ್ಪಾ"–ಎಂತಹೇಳಿ ಅವರಮಾತ್‌ಲಿ ಕಟ್ಟಿಹಾಕಿತ್. ಈ ಕಷ್ಟಂದ ಪಾರಾಕೆ ಅವು "ಧರ್ಮಕ್ಕೆ ಜಯ ಆಗಲಿ"– ಎಂತಹರ್ಸಿದೊ. ದುರ್ಯೋಧನನ ತಮ್ಮ ಯುಯುತ್ಸು, ಅಧರ್ಮ ಯಾರ್‌ದ್‌ಂತ ಎದ್ದ್ ಕಾಂಬಾಂಗೆ ಉತ್ತರ ಕೊಟ್ಟುಟು.

ಅಪಮಾನಂದ ಸಿಟ್ಟ್ ಆಗಿದ್ದ ದುರ್ಯೋಧನ ಅಂವನ ರಥಂದಳೇ ಬೊಬ್ಬೆ ಹೊಡ್ಯತಿತ್ತ್. "ಅಜ್ಜಪ್ಪಾ, ಇದೇನ್ ಮಾಡ್ದರಿ ನೀವು? ಸೇನೆನ ಎಜಮಾನನೇ ಹೀಂಗೆ ಹೇಳಿಕೆ ಕೊಡಕಾ? ಆ ತಲೆಕೆಟ್ಟ ಯುಯುತ್ಸು ಎಲ್ಲಿಗೆ ಬೇಕರೂ ಹೋಗಿ ಸಾಯಲಿ. ಯುದ್ಧಲಿ ನಂಗೆ ಎದ್‌ರ್ ಬಾಕಾಕನ ಅಂವನ ತಲೆನ ಕತ್ರಿಸಿ ಹಾಕಿನೆ."

ಯುಯುತ್ಸು ಭೀಷ್ಮರ್‌ಗೆ ಅಡ್ಡಬಿದ್ದ್ ಪಾಂಡವರ ಪಾಳಯಕ್ಕೆ ಗಟ್ಟಿ ಹೆಜ್ಜೆ ಇಸಿಕಂಡ್ ಹೋತ್. ಹತ್ತನೇ ದಿನ ಸಿಕಂಡಿಂದಾಗಿ ಹೀಂಗೆ ಮೊಲ್ಗಿನೇ ಇರಕಾದ ಸ್ತಿತಿಲಿ, ಈ ಮಾತ್‌ಗ ಕೆಬಿಲಿ ಗುಣುಗುಟ್ಟಿತ್. ಹದಿನೈದ್ನೇ ದಿನ ಗುರುದ್ರೋಣಾಚಾರ್ಯರ ಮೋಸದ ಕೊಲೆ ನಡ್ದುಟು. ನಷ್ಟದ ಪರ್ಣಾಮನ ಹೋಲ್ಸಿರೆ ಪಾಂಡೋವರ್‌ಂದಳೂ ಹೆಚ್ಚ್‌ನ ಸೋಲ್ ಕೌರವ ಪಕ್ಷಕ್ಕೆ ಆವುಟು.

ಹೀಂಗೆ ಭೀಷ್ಮರ್ ಚಿಂತೆ ಮಾಡಿಕಂಡಿರಿಕಾಕನ ಕರ್ಣ ಬಾತ್. ಜೊತೆಲಿ ದುರ್ಯೋಧನ ಇತ್ಲೆ. ಕರ್ಣ ತನ್ನ ಮೊನ್ಸ್‌ಲಿ ಇದ್ದ ಮಾತ್‌ನ ಗುಟ್ಟ್‌ಲಿ ಹೇಳಿಕೆ ಒಬ್ಬನೇ ಬಂದಿರೊಕುಂತ ಭೀಷ್ಮರ್ ನೆನ್ಸಿಕೊಂಡೊ. ಕರ್ಣಂದ್ ಬಾಳ ಇಕ್ಕಟ್ಟ್‌ನ ಪರಿಸ್ತಿತಿ. ತನ್ನ

ಅಯ್ಯೆನ ಹೊಟ್ಟೆಂದ ಬಂದ ಯುಧಿಷ್ಠಿರ, ಭೀಮ, ಅರ್ಜುನ–ಇವರೊಟ್ಟಿಗೆ ಅಂವ ಹೋರಾಟ ಮಾಡೊಕು. ಅದ್ ಸಾ ದುರ್ಯೋಧನಂದ್ ಅಧರ್ಮಾಂತ ತಿಳ್ದ್ ಇದ್ದ ಮೇಲೆನೂ. ನಿಜಲಿ ನೋಡ್ರೆ ಇಂತಾ ಇಕ್ಕಟ್ಟಿಲಿ ಆರ್ಯಾವರ್ತಲಿ ಯಾರ್ ಸಾ ಸಿಕ್ಕಿಬಿದ್ದಿರಿಕಿಲ್ಲೇಂತ ಅಂವಂಗಾತ್.

ಕರ್ಣ ಅವ್ಕೆ ಕೈ ಮುಗ್ದ್ ಕುದ್ದ್‌ಕಂಡತ್. ಸುಟ್ಟ ಬದನೆ ಹಾಂಗೆ ಕಪ್ಪು ಕಪ್ಪಾಗಿತ್ತ್ ಅಂವನ ಮೋರೆ. ಇಂವ ಈಗ ಸೇನೆನ ಎಜಮಾನ. ಒಂದ್ ದಿನ ಇಡೀ ಕುರುಸೇನೆನ ಮುಂದೆ ನಡ್ಸಿಟು. ಇಂವ ಅಶ್ವತ್ಥಾಮ, ಕೃಪಾಚಾರ್ಯರ ಪಾಲ್‌ಗೆ ದೊಡ್ಡ ಬ್ರಾಂಬ್ರ ಹಗೆಂದ ನೋಡಂವ. ಶಲ್ಯ ಭೂಪತಿ ಇಂವನ ಮೊಗ್ಗನ ಮಂಜ ಎಂತ ಹೇಳಿನೇ ಕರ್ದದೆ. ಪಾಪ, ಈಗ ಸಾ ಎಂತೆಂತ ಅಪಮಾನನ ಅಂವ ಅನ್ಬವಿಸಿದೆನೋ ಏನೋ?

ಭೀಷ್ಮರ್ ಪ್ರೀತಿಂದ ಕೇಳ್ರೊ, "ಏನ್ ಕುಂಞಿ? ಏಕೆಬಂದ?"

ಕರ್ಣಂಗೆ ಭೀಷ್ಮರ್ ಇಷ್ಟ ಆಗ್ತಿದ್ದದ್ ಅದ್ಕನೇ. ಲೋಕ ಅಂವನ ಮೀನ್ ಹಿಡ್ಯಂವನ ಮಂಜ ಎಂತ ಕರ್ಯತಿತ್ತ್. ಅಂವ ಪರಶುರಾಮರ ಹಕ್ಕಲೆ ಶಾಸ್ತ್ರ ಕಲ್ತವಾಂತ ಗೊತ್ತಾದ ಮೇಲೆ ಭೀಷ್ಮರ್ ಅಂವನ ಕುಂಞಿಂತೇಳಿನೇ ಕರ್ಯತಿದ್ದದ್. ಅಧಿರಥ ರಾಧೇಯರ್ ಕರ್ಣನ ಕರ್ಯತಿದ್ದದ್ ಕುಂಞಿ ಎಂತ ಹೇಳಿನೇ. ಹಾಂಗೆ ಕರ್ಯಕನ ಅದರ್ಲಿ ತುಂಬಾ ಪ್ರೀತಿ ತುಂಬಿಕಂಡ್ ಇರ್ತಿತ್ತ್. ಭೀಷ್ಮರ್ ಹಾಂಗೆ ಕರ್ಯಕಾಕನ ಅದರ್ಲಿ ಪ್ರೀತಿನೊಟ್ಟಿಗೆ ಅಭಿಮಾನನೂ ತುಂಬಿ ಕಂಡಿರ್ತಿತ್ತ್. ಅದ್ ಅಂವಂಗೆ ಗೊತ್ತಿತ್ತ್. ಅಂವ ಅಂವನ ಮೊನ್ಸ್‌ನ ಬೇನೆನೆಲ್ಲಾ ಅವರೊಟ್ಟಿಗೆ ಹೇಳಿಕಂಡ್ ಮೊನ್ಸ್‌ನ ಹಗ್‌ರ ಮಾಡಿಕಂಬತಿತ್ತ್.

"ಈ ಮ್ಯೊಂಸಲೋಕಲಿ, ಯಾಗೋಳೂನೆಗೆಂದ ಬೇನೆನೇ ಹೆಚ್ಚ್. ಬೇನೆನ ಮರ್ತ್ ನೆಗಾಡಿಕಂಡ್ ಇರ್ದೇ ಜೀವನಕಲೆ" ಎಂತ ಅವು ಹೇಳ್ದರ ಅಂವ ಕೇಳಿತ್ತ್. ಅದ್ ಅಂವನ ನೆಂಪುಲಿನೂ ಇತ್ತ್. ಆ ಮಾತ್‌ಗ ನೆಂಪಾಕನೆಲ್ಲಾ ಅವಂಗೆ ತುಂಬಾ ಹುರ್ಪು ಬಾತಿತ್ತ್. ಭೀಷ್ಮಾಚಾರ್ಯರ ಎದೆನ ಹುಣ್ಣ್‌ಂದ ನಾತ ಹೊರ್ಡುದು ಅಂವಂಗೆ ಗೊತ್ತಾತ್. ಆದರೆ ಕುರುಕ್ಷೇತ್ರಲಿ ಉದ್ದಾಕೂ ಇಸಿದ ಮ್ಯೊಂಸರ ಹೇಲ್‌ಗ, ಕೊಳ್ತ ಹೆಣಗಳ ನಾತದಸ್ಟ್, ಇದ್ ಕೆಟ್ಟದಾಗಿತ್ಲೆ.

"ಅಜ್ಜಪ್ಪಾ, ಇಂದ್‌ನ ಕಾಳಗಲಿ ನಾವು ದೊಡ್ಡ ವೀರರ್ ಆದ ಕ್ಷೇಮಧೂರ್ತಿ, ವಿಂದಾನುವಿಂದ, ಸಂಸಪ್ತಕರ ಕಳ್ಕೊಂಡೊ. ಕುರು ಪಾಳ್ಯ ಕಮ್ಮಿ ಆತಾ ಬಾತುಟ್ಟು. ಮುಂದೇನ್ ಮಾಡೊಕೂಂತ ನಂಗೆ ಗೊತ್ತಾದ್ಲೆ. ಅದ್ಕಾಗಿ ನಿಮ್ಮಕ್ಕಲೆ ಬಂದೆ."

ಭೀಷ್ಮರ್ ಸಮ್ದಾನ ಮಾಡುವ ಸೊರಲಿ ಹೇಳ್ರೊ. "ಕುಂಞಿ, ನೀ ಈಗ ಕುರುಸೇನೆನ ಎಜಮಾನ. ಸೇನೆನ ಮುಂದೆ ತಕೊಂಡೋಕಾದ ನೀನೇ ಹೀಂಗೆ ಹಿಂದ್ ಸರ್ದರೆ ಅದ್ ತೊಪ್ಪಾದೆ. ಹೇಳ್‌ನಿಂಗೆ ಕಾಡುವ ಪ್ರಸ್ನೆ ಯಾವುದು?"

ಕರ್ಣ ತನ್ನ ಬೇನೆನ ಹೇಳಿಕಂಡತ್. "ಈ ಕಾಳಗ ಸುರಾಕೆ ಮುಂದೆ ನನ್ನ ಹೆತ್ತವ್ವ ಬಂದಿತ್ತ್. ಕುಂತಿದೇವಿ ನನ್ನ ಹೆತ್ತದ್‌ಂತ ಕೃಷ್ಣದೇವ್ರು ನಂಗೆ ಮುಂದೆನೇ ಹೇಳಿದ್ರೊ. ಅವ್ವನ ಮೋರೆಲಿ ತೊಪ್ಪು ಮಾಡ್ದ ಚರ್ಯೆ ಎದ್ದ್ ಕಾಂಬತಿತ್ತ್. ಪಾಂಡುರಾಜನ ಮೊದುವೆ

ಆಕೆ ಮುಂದೆ ನನ್ನನ ಹೆತ್ತ್ ಬಿಸಾಡ್ದವುಳು. ಯುದ್ದ ನಿಚ್ಚಯ ಆದ ಮೇಲೆ ನನ್ನ ಎದ್ರ್ ನಿತ್ತ್ ಮಾತಾಡಿಕೆ ಅದ್ ಎಸ್ಟ್ ಮೊಸ್ನ್ಲಿ ಬೇನೆನ ಅನ್ಬವಿಸುಟ್ಟೋ ಏನೋ? ಅದ್ ಬಂದದೇ ಕಣನೀರ್ ಇಳ್ಸಿಕಂಡ್ ಮೊದ್ವೆ ಆಕೆ ಮುಂದೆ ಕೂಸುನ ಹೊಟ್ಟೆಲಿ ಹೊತ್ತ್ ಕಂಡಿದ್ದದರ್‌ಂದ ತಾನ್ ಹಾಂಗೆ ಮಾಡಕಾತ್‌ಂತ ಹೇಳ್ತ್. ಮುಂದೆ ನಡೆವ ಕಾಳಗಲಿ ಪಾಂಡೋರ ಕೊಲ್ಲಿಕಾಗದ್‌ಂತ ಬೇಡಿಕಂಡತ್. ಅರ್ಜುನನ ಬುಟ್ಟ್‌ದ್ ಒಳ್ದ ಮಕ್ಕಳ ಕೂದಲ್‌ನ ಸಾ ಮುಟ್ಟುದ್ಲೇಂತ ನಾ ಅದ್ಕೆ ಬಾಸೆ ಕೊಟ್ಟೆ. ಈಗ ನನ್ನ ಕೈ ಕಟ್ಟಿ ಹಾಕಿದಂಗಾಗುಟು."

ಭೀಷ್ಮರ್‌ಗೆ ಕರ್ಣನ ಬೇನೆ ಅರ್ತ ಆತ್. ಕರ್ಣ ಪಾಂಡವರ ಎಲ್ಲರ ಕೊಲ್ಲುವಂತ ಬಲವಂತಾಂತ ಭೀಷ್ಮರಿಗೆ ಗೊತ್ತಿತ್ತ್. ಆ ಕುಂತಿ ಯಾವ ಮೋರೆ ಇಸಿಕಂಡ್ ಇಂವನಲ್ಲಿಗೆ ಬಂದ್ ಬೇಡಿಕಂಡತೋ? ಇಂವ ಯಾವ ಕಾರ್ಣಕ್ಕೆ ಬಾಸೆ ಕೊಟ್ಟತೋ? ಬವುಸ ಕೃಷ್ಣ ಹೇಳ್ದರ್‌ಂದಳೇ ಕುಂತಿ ಇಂವನಲ್ಲಿಗೆ ಬಂದಿರೊಕು. ಅರ್ಜುನನ ಬುಟ್ಟ್‌ದ್ ಒಳ್ದವರ ಕೊಲ್ಲಿಕೇಂತ ಇಂವ ಬಾಸೆ ಕೊಟ್ಟದ್ ಇಂವನ ಹೆಡ್ಡ್‌ತನ. ಇಂವಂಗೆ ಯುಧಿಷ್ಠಿರನ ಕೊಲ್ಲುದು ದೊಡ್ಡ ಸಂಗತಿನೇ ಅಲ್ಲ. ಆದರೆ ಅಂವನ ಇಸ್ಟರ ಮುಟ್ಟ ಕೊಲ್ಲಿಕೆ ಇಂವಂದಾತ್ಲೆ. ಕೃಷ್ಣ ಮತ್ತೆ ಕುಂತಿ ಇಂವನ ನೈತಿಕ ನೆಲೆಗಟ್ಟ್‌ನ ಹೊಡಿ ಮಾಡ್ದೊ. ಈ ಕರ್ಣನ ದೂರಿ ಏನ್ ಸುಕ?

ನಿರ್ದಾರದ ಸೊರಲಿ ಭೀಷ್ಮರ್ ಹೇಳ್ದೊ. "ಕುಂಞಿ, ದುರ್ಯೋಧನ ಕಾಳಗದ ಸುರುಲಿ ನನ್ನ ಕುರುಸೇನೆಗೆ ಎಜಮಾನ ಮಾಡಿಕಾಕನ ಅಡ್ಡಿ ಹೇಳ್ದಂವ ನೀ. ಆಗನೀ, "ಈ ಪ್ರಾಯಲಿ ನಿಮ್ಮ ಕೈಲಿ ಏನ್ ಸಾ ಮಾಡಿಕೆ ಆಕಿಲ್ಲೆ ಅಜ್ಜಪ್ಪಾ"– ಎಂತ ಹೇಳಿದ್ದ. ನಾ ಸೇನೆನ ಎಜಮಾನ ಆಗಿ ಹತ್ತ್‌ದಿನ ಕಾಳಗಮಾಡ್ದೆ. ಆ ಸಮಯಲಿ ಕುರುಪಾಳ್ಯಕ್ಕೆ ದೊಡ್ಡನಸ್ಟ ಏನಾತ್ಲೆ. ದ್ರೋಣಾಚಾರ್ಯರ ಎಜಮಾನಿಕೆನ ಐದ್ ದಿನದ ಕಾಳಗಲಿ ಅಧರ್ಮ, ಅನ್ಯಾಯನ ಸರ್ಮಾಲೆನೇ ನಡ್ತ್. ನೀ ಒಂದೇ ದಿನಲಿ ದಾರಿ ಕಾಣದೆ ಕಂಗಾಲಾಗಳ. ನಿನ್ನ ಕೈಗಳ ನೀನೇ ಕಟ್ಟಿ ಹಾಕಂಡಳ. ಜೂವಮಾನ ಇಡೀ ಬ್ರಹ್ಮಾಚಾರಿ ಆನೇಂತ ಆಣೆ ಮಾಡ್ದು ನಂಗೆ ಅಗತ್ಯ ಆಗಿತ್ತ್. ಆದರೆ ನೀ ಕುಂತಿಗೆ ಮಾತ್ ಕೊಡುವ ಅಗತ್ಯ ಏನಿತ್ತ್? ಆಗ ನಿಂಗೆ ನಿನ್ನ ಅಂಗರಾಜ್ಯದ ರಾಜನಾಗಿ ಮಾಡ್ದ ದುರ್ಯೋಧನನ ನೆಂಪಾತ್ಲೆ. ನೀ ರಾಜ ಆದ ಕಾರ್ಣ ಮುಕ್ಕರ ಹೈದಂತೇಳುವ ಹೆಸ್ರ್ ಹೋಗಿ ದುರ್ಯೋಧನನಂದಾಗಿ ಕ್ಷತ್ರಿಯ ಆದ. ಏಕೆಂತ ಹೇಳಿಯನೋ?"

ಕರ್ಣ ಮಾತ್ ಹೊರ್ಡದೆ ತಲೆ ತಗ್ಗಿಸಿತ್. ಅಂದ್ ಪರೀಕ್ಷೆ ಕಣಲಿ ಅಂಗರಾಜ್ಯದ ದೊರೇಂತ ಹೇಳಿ ದುರ್ಯೋಧನ ನನ್ನನ ಅಪಮಾನಂದ ಪಾರ್ ಮಾಡ್ತ್. ಹಸ್ತಿನಾವತಿಂದ ಅಂಗದೇಸಕ್ಕೆ ಏನಿಲ್ಲೆಂತೇಳೂ ಐದ್ ದಿನಗಳ ಕುದ್ರೆ ಸವಾರಿ ದಾರಿ. ನಾ ಅಂಗದೇಸಕ್ಕೆ ಹೋಗಿ ಇರಿಕೆ ದುರ್ಯೋಧನ ಬುಟ್ಟತ್ಲೆ. ಹಸ್ತಿನಾವತಿಲಿ ದುರ್ಯೋಧನನ ಅಂತ ರಂಗದ ಗೆಳೆಯ ಆಗಿ ಒಳ್ದ್ ಬುಟ್ಟೆ. ಅಂಗರಾಜ್ಯದ ಪಟ್ಟ ಒಂದು ತಂತ್ರದ ವಿದಿ ಮಾತ್ರ. ಭೀಷ್ಮರ ಬಯಂದ ಅಂಗರಾಜ ವರ್ಸಕ್ಕೊಮ್ಮೆ ಬಂದ್ ಹೋವುದರ ಬುಟ್ಟರೆ ಬೇರಾವ

ಸಂಮಂದನೂ ಇತ್ಲೆ. ದುರ್ಯೋಧನನ ಈ ಸಾಯಂದಾಗಿ ಅಂವನ ಯಾವ್ದೇ ಕೆಟ್ಟ ಕೆಲ್ಸಗಳ ಇರೋದ ಮಾತಾಡಿಕೆ ಆಗದೆ ಸುಮ್ಮಂಗಾದೆ. ನಿಜಲಿ ನಾ ನಿಸ್ಟೆಂದ ಇರಕಾದ್ ದುರ್ಯೋಧನಂಗೆ. ಹೆತ್ತ ಕೂಡ್ಲೇ ಲೋಕಾಪವಾದಕ್ಕೆ ಹೆದ್ರಿ ನನ್ನ ಬಿಸಾಡ್ದ ಅವ್ವಂಗೆ ನಾ ಮಾತ್ ಕೊಡುವ ಅಗತ್ಯ ಇತ್ಲೆ. ಆದರುನೂ ಮಾತ್ ಕೊಟ್ಟೆ. ಏಕೆಂತ?

"ಏಕೆ ಅಜ್ಜಪ್ಪಾ ?"

"ಏಕೇಂತೇಳ್ರೆ ಕುಂಞಿ, ದುರ್ಯೋಧನ ಮಾಡ್ದ ಕೆಲ್ಸಗ ಎಲ್ಲಾ ಪಾಪದ್ಂತ ನಿನ್ನ ಮೊನ್ಸ್‌ಲಿ ಇತ್. ಅದ್ಕೆ ದುರ್ಯೋಧನನ ರುಣಬಾರಕ್ಕೆ ನೀ ಅಂವನ ಪಾಪದ ಕೆಲ್ಸಲಿ ಪಾಲ್ ತಕೊಣೊಕೂಂತ ಲೋಕಕ್ಕೆ ಗೊತ್ತ್ ಇರುವ ಸತ್ಯ. ಆ ಪಾಪದ ಪರ್ಯ್ಯಾರಕ್ಕಾಗಿ ನೀ ಅವ್ವಂಗೆ ಮಾತ್ ಕೊಟ್ಟ."

ಕರ್ಣ ತಿರ್ಗ ಮೊನ್ಸ್‌ಲಿ ಏಚನೆ ಮಾಡಿಕೆ ಸುರು ಮಾಡ್ತ್. ಭೀಷ್ಮಾಚಾರ್ಯ್ಯಾರ್ ಹೇಳ್ದ ಕಾರ್ಣ ಸರಿನೇ? ಮೋಸದ ಜೂಜಾಟ, ದ್ರೌಪದಿನ ಮಾನಬಂಗ, ಪಾಂಡೋವು ಕಾಡ್‌ಲಿ ಇರಿಕಾಕನ ಕಾಳಗಕ್ಕೆ ಹೋದ್, ವಿರಾಟ ರಾಜನ ದನಂಗಳ ಕದ್ದದ್, ಚಕ್ರವ್ಯೂಹಲಿ ಸಣ್ಣ ಹೈದ ಅಭಿಮನ್ಯುನ ಕೊಂದದ್, ಇರ್‍ನ ಕಾಳಗ–ಇದ್ ಯಾವುದಕ್ಕುನೂ ತನ್ನ ಒಪ್ಪಿಗೆ ಇತ್ಲೆ. ಆದರೆ ಯಾವುದರ ಸಾ ನಾ ಇರೋದ ಮಾಡಿಕೆ ಹೋತ್ಲೆ. ನಂಗೆ ಗೊತ್ತಿಲ್ಲದೇನೇ ಮೊನ್ಸ್‌ನ ಮೂಲೆಲಿ ಎಲ್ಲೋ ದುರ್ಯೋಧನನ ದ್ವೇಷ ಮಾಡುವ ಚಿಗ್‌ರ್ ಇತ್ತೋ? ಅವ್ವ ಕುಂತೀದೇವಿ ನನ್ನನ ಹುಡ್ಕಂಡ್ ಬಾಕಕನ ಜೂವಮಾನ ಇಡೀ ನಾ ಪಟ್ಟ ಸಂಕಟ ಹೊರಗೆ ಹಾಕಿತ್ಲೆ? ಕೃಷ್ಣ ನನ್ನ ಹುಟ್ಟ್‌ನ ಬಗ್ಗೆ ತಿಳ್ಸಿದ ಮೇಲೆ ತೀರಾ ಮೆತ್ತಂಗಾಗಿ ಬುಟ್ಟೆ. ಒಂದ್ ಕಾಲಲಿ ಮೊದುವೆಗೆ ಮುಂದೇನೇ ಅಯ್ಯೆ ಆದು ಅಪಮಾನದ ಸಂಗತಿ ಆಗಿತ್ಲೇಂತ ಭೀಷ್ಮರ್ ಯಾವುದೋ ಒಂದು ಸಂದರ್ಬಲಿ ಹೇಳಿದ್ದೊ. ನನ್ನ ಕೀಳರಿಮೆನ ಹೋಗಲಾಡ್ಸಿಕೆ ಅವು ಮಾಡ್ದ ಪ್ರಯತ್ನಂತ ಕಂಡದೆ. ಮೊದುವೆಗೆ ಮುಂದೇನೇ ಮಕ್ಕಳ ಪಡ್ದ ಸತ್ಯವತಿದೇವಿಯೊವುರ ಮಂಜ ದ್ವೈಪಾಯನರು ಆರ್ಯಾವರ್ತದ ಬಾಳದೊಡ್ಡ ವಿದ್ವಾಂಸರ್ ಎಂತ ಜನರ್‌ಂದ ಹೆಸ್ರ್ ಪಡ್ದೋವು. ಸತ್ಯವತಿಯವರ ಧೈರ್ಯ ಕುಂತಿದೇವಿಗೆ ಬಾತ್ಲೆ. ಯಾವ ಮೊನ್ಸ್, ಯಾವ ಸಂದರ್ಬ ಕುಂತಿದೇವಿ ನನ್ನ ನೀರ್‌ಲಿ ಬುಡುವಾಂಗೆ ಮಾಡ್ತೋ? ಪಾಂಡು ರಾಜನ ಕೈ ಹಿಡ್ದ್, ಸುಖ ಪಡಿಕೆ ಆಗದೆ, ನಾಕ್ ಜನ ಗಂಡ್ ಮಕ್ಕ ಇದ್ದ್ ಸಾ ಯಾರ ಯಾರ್ದೋ ಹಂಗ್‌ಲಿ ದಿನ ಕಳ್ಯಕಾಗಿ ಬಂದ ದುರವಸ್ತೆ ಅದರ್‌ದ್. ಒಬ್ಬ ಹೆಣ್ಣಾಗಿ ಹುಟ್ಟಿದಕ್ಕೆ ಕುಂತಿ ಅನ್ಬವಿಸಿದ ಬೇನೆ ಮತ್ತೆ ಅಪಮಾನಗಳಿಗಾಗಿ ನಾ ಅದ್ಕೆ ಮಾತ್ ಕೊಟ್ಟಿದ್ದೆ. ಅವ್ವಂತೇಳ್ವ ಕಾರ್ಣಕ್ಕೆ ಅಲ್ಲ. ನಾ ಕೂಸು ಆಗಿರಿಕನ ಒಮ್ಮೆನೂ ತೊಬ್ಬಿಕಣದ, ಒಮ್ಮೆನೂ ಮೊಲೆ ಹಾಲ್ ಕುಡ್ಸದ, ಮೊರ್ಡಿಕನ ಸಮ್ದಾನ ಮಾಡದ, ನಂಗೆ ಒಂದೇ ಒಂದು ಅಕ್ಷರನನೂ ಕಲ್ಸದ ಅದ್, ನನ್ನ ಅವ್ವಾಂತ ನಂಗೆ ಒಮ್ಮೆನೂ ಒಪ್ಪಿಕಂಬಕೆ ಆತ್ಲೆ.

"ಇರ್ದು ಅಜ್ಜಪ್ಪಾ, ಕುಂತೀದೇವಿಗೆ ನಾ ಮಾತ್ ಕೊಡುವ ಅಗತ್ಯ ಇಲ್ಲದೆ ಇರ್ದು. ನಾಕ್ ಜನ ಮಕ್ಕ ಇದ್ದ್ ಸಾ ಅದ್ ಸುಕ ಕಂಡತ್ಲೆ. ನನ್ನಂದ ಅದ್ಕೆ ಅಸ್ವಾದರ್

ಸಂತೋಸ ಸಿಕ್ಕಲೀಂತ ನನ್ನಲ್ಲಿ ಆ ಮೊನ್ಸ್ ಬಂದಿರೋಕು. ಬೇಡುವವಂದ ಕೊಡಂವ ದೊಡ್ಡಂವ. ಇದ್ ನನ್ನ ಸಾಂಕಿ, ಪಾಲನೆ ಮಾಡ್ದ ಅಯ್ಯೆ ರಾಧೆ ನಂಗೆ ಕಲ್ಸಿಕೊಟ್ಟ ಪಾಟ. ಆದರ್ ಸಾತ್ ನಾ ಮಾತ್ ಕೊಡಿಕನ ಅರ್ಜುನನ ಹೊರಗಿಸ್ಯಳೆ. ಯುಧಿಷ್ಠಿರ, ನಕುಲ, ಸಹದೇವರ ಗೆಲ್ಲುದು ಅಸ್ಟೇನ್ ಕಷ್ಟ ಅಲ್ಲ. ಆದರೆ ಅವರ ಕೊಲ್ಲಿಕೆ ಕಾರ್ಣನೇ ಸಿಕ್ಕುದ್ಲೆ. ಭೀಮಾರ್ಜುನರ್ಲಿ ಯಾರ್ನಾದರ್ ಒಬ್ಬರ್ನ ಕೊಂದರೆ ಅದ್ ನಿಜಲಿ ವಿಜಯನೇ. ಕಪಟಾಂತೇಳ್ದು ಒಂದ್ ಚೂರುನೂ ಇಲ್ಲದ ಭೀಮನ ಕೊಲ್ಲಿಕೆ ಮೊನ್ಸ್‌ನೇ ಬಾದುಲ್ಲೆ. ಆ ಅರ್ಜುನ ದೊಡ್ಡ ಸ್ವಾರ್ತಿ. ಅಂವಂದಾಗಿ ಪರೀಕ್ಷೆ ಕಣಲಿ ನಾ ಅಪಮಾನಕ್ಕೆ ಸಿಕ್ಕಿದೆ. ಪಾಪ, ಬಡಂವ ಏಕಲವ್ಯ. ಅಂವ ಹೆಬ್ಬೆಟ್ಟ್‌ನನೇ ಕಳ್ಕಂಡತ್. ಜಾತಿನ ಕಾರ್ಣಕ್ಕೆ ಬೇಕಾಗಿ ಇನ್ನೊಬ್ಬರ್ನ ಅಪಮಾನ ಮಾಡೋವರ ನಾ ಮ್ಯೊಂಸಾಂತ ಹೇಳ್ದುಲ್ಲೆ. ಅದಕ್ಕೆ ನಾ ಅರ್ಜುನನ ಗುರಿಯಾಗಿ ಇಸಿಕಂಡದ್."

ಕರ್ಣ ತನ್ನ ಮೊನ್ಸ್‌ಲ್ಲಿ ಇದ್ದದರ ಹೇಳ್ದೇಂತ ಭೀಷ್ಮರಿಗಾತ್. ಅರ್ಜುನ ಈಗನ ಮಟ್ಟ್‌ಗೆ ಇಡೀ ದೇಸಲಿ ದೊಡ್ಡ ಬಿಲ್ಲ್ ವಿದ್ಯೆ ಕಲ್ತಂವ. ಈಗ ಸಾ ಅಂವನ ಮೊದ್ವೆ ಆಕೆ ರಾಜಕುಮಾರಿಗ ಕಾದ್‌ಕೊಂಡೊಳೊ ಗಡ. ಇನ್ನ್ ಮುಂದೆ ಕುರು ಸಾಮ್ರಾಜ್ಯನ ಕಾಪಾಡಿಕಂಬ ಬಿಲ್ಗಾರಾಂತೇಳ್ರೆ ಅದ್ ಅರ್ಜುನ ಮಾತ್ರಾ. ಅಂವನನೇ ಈ ಕರ್ಣ ಕೊಂದರೆ ಕುರು ಚಕ್ರಾಧಿಪತ್ಯ ಒಳ್ಯಕಿಲ್ಲೆ. ಘೋಷಯಾತ್ರೆನ ಕಾಲಲಿ ಕರ್ಣಂದ ಗೆಲ್ಲಿಕೆ ಆಗದೆ ಚಿತ್ರಸೇನನ ಅರ್ಜುನ ಸೋಲ್ಸಿತ್. ದನಗಳ ಕಳ್ಳತನ ಮಾಡ್ದ ಕಾಲಲಿ ಅರ್ಜುನ ತನ್ನ ಬುದ್ಧಿವೊಂತಿಕೆನ ತೋರ್ಸಿ ಗೆದ್ದತ್. ಜಯದ್ರಥನ ಅರ್ಜುನಂದ ಕಾಪಾಡಿಕೆ ಕರ್ಣಂದ ಆತ್ಲೆ. ಇನ್ನ್ ಅರ್ಜುನನ ಇಂವ ಕೊಲ್ಲಿಕುಟ್ವೋ?"

ಭೀಷ್ಮರ್ ಆತಂಕಂದ ಕೇಳ್ದೊ. "ಕೂಸು, ನೀ ಅರ್ಜುನನ ಕೊಲ್ಲುವನೋ? ನಿನ್ನ ತಮ್ಮನ ಕೊಲ್ಲಿಕೆ ನಿಂಗೆ ಮೊನ್ಸ್ ಬಂದದೆನೋ?"

"ಸುರುದು ಸಾಮರ್ತ್ಯಕ್ಕೆ ಸಂಮಂದಪಟ್ಟ ಪ್ರಸ್ನೆ ಅಜ್ಜಪ್ಪಾ. ನೀವು, ದ್ರೋಣರ್ ಮತ್ತೆ ನಾ ಪರಶುರಾಮರ ಶಿಷ್ಯರ್. ನಾ ಪಡ್ಡ ವಿದ್ಯೆ ಅರ್ಜುನನ ಕೊಲ್ಲಿಕೆ ದಾರಾಳ ಸಾಕ್. ಎರಡ್ನೇದ್ ಮೊನ್ಸ್‌ಗೆ ಸಂಮಂದಿಸಿದ ಪ್ರಸ್ನೆ. ಅರ್ಜುನ ಕುಂತಿದೇವಿನ ಹೊಟ್ಟೆಲಿ ಹುಟ್ಟಿದಂವ. ಅವ್ವ ಒಬ್ಬಳೇಂತ ಎಲ್ಲೋವ್ಕು ಗೊತ್ತುಟು. ಅಪ್ಪಂದ ಯಾಗೋಳುನೂ ಅಯ್ಯೆನೇ ಹೆಚ್ಚ್. ಆದರೆ ಅಜ್ಜಪ್ಪಾ, ನನ್ನ ಪಾಲ್‌ಗೆ ನನ್ನ ಸಾಂಕಿದ ರಾಧೆನೇ ನನ್ನ ಅಯ್ಯೆ. ಇನ್ನ್ ನನ್ನ ಯಾಗೋಳೂ ನಿಂದನೆ ಮಾಡುವ ಅರ್ಜುನನ ಮೇಲೆ ನಂಗೆ ಹೇಂಗೆ ತಮ್ಮಾಂತ ಪ್ರೀತಿ ಬಾದು, ನೀವೇ ಹೇಳಿ? ಕುಂತಿ ನನ್ನ ಹೆತ್ತ ಅಯ್ಯೇಂತ ಗೊತ್ತಾಕೆ ಮುಂದೆನೇ ನಾ ಅರ್ಜುನನ ಹುಟ್ಟ್‌ನ ಆಕ್ಷೇಪಣೆ ಮಾಡ್ದಂವ ಅಲ್ಲ. ನಮ್ಮ ಹುಟ್ಟುಗೆ ನಾವು ಕಾರ್ಣ ಅಲ್ಲದರ್‌ಂದ ನಾವು ಹುಟ್ಟ್‌ನ ಬಗ್ಗೆ ಹೇಳುದು ಸರಿ ಅಲ್ಲ. ಆ ಹಕ್ಕ್ ಸಾ ನಾವ್ಗಿಲ್ಲೆ. ನಾ ಅರ್ಜುನನ ಪ್ರೀತಿಸಿಕೆ ಒಂದೇ ಒಂದ್ ಕಾರ್ಣ ನಂಗೆ ಕಾಂಬೋದುಲ್ಲೆ. ಹೇಳಿ ಅಜ್ಜಪ್ಪಾ, ನಾ ಏಕೆ ಅರ್ಜುನನ ಕೊಲ್ಲಿಕಾಗದ್?"

ಏನ್ ಹೇಳೊಕೂಂತ ಭೀಷ್ಮರ್‌ಗೆ ಗೊತ್ತಾತ್ಲೆ. ಅರ್ಜುನನ ಗುಣ ಎಲ್ಲನೂ ನಾ

ಹೇಳ್ದಾಂಗೆ ಆಕು. ನನ್ನಂದ ಮೇಲೆ ಯಾರ್ ಸಾ ಇರಿಕೆ ಆಗದ್, ಮತ್ತೆ ಅಂವನ ಹಂಕಾರ ಭೀಷ್ಮರಿಗೆ ಗೊತ್ತಿಲ್ಲದ ಇಸಯ ಏನ್ ಅಲ್ಲ. ಅದಾದರನೂ ದೊಡ್ಡ ಇಸಯಾಂತ ಅವ್ಕೆ ಅನ್ನಿತ್ಲೆ. ಎಲ್ಲಾ ಕಸ್ಟಕ್ಕೆ ಯುಧಿಷ್ಠಿರನ ಚಂಚಲ ಮೊನ್ಸೇ ಕಾರಣಾಂತ ಎಸ್ಟೋ ಸರ್ತಿ ಅವ್ಕೆ ಆಗುಟು. ಇಂದ್ರ ಪ್ರಸ್ತಲಿ ಪಾಂಡೋವರ ಕುದ್ರಿಸಿಕೆ ಅವು ತುಂಬಾ ಕಸ್ಟಪಟ್ಟಿದ್ದೊ. ಜೂಜಾಟಲಿ ರಾಜ್ಯನ ಅಲ್ಲದೆ, ಬಾಳ ಸುಲಬಲಿ ಮಾನ ಮೊರ್ಯಾದೆನ ಸಾ ಯುಧಿಷ್ಠಿರ ಕಳ್ಕಂಡತ್. ಸೋಲುವ ನಿಚ್ಚಯ ಎಂತ ತಿಳ್ದ್ ಸಾ ತನ್ನನ್ನ, ತನ್ನ ತಮ್ಮಂದರ್‌ನ ಮತ್ತೆ ಕೈಹಿಡ್ದ ಹೆಣ್ಣ್‌ನ ಅಡವು ಇಸೊವು ಈ ಪ್ರಪಂಚಲಿ ಯಾರಾದರ್ ಒಳೊನೋ? ಭೀಮಸೇನ ಮಾಡ್ದ ಪ್ರತಿಜ್ಞೆಗೆ ಹೆದ್ರಿ ದೃತರಾಷ್ಟ್ರ ಯುಧಿಷ್ಠಿರಂಗೆ ಅಂವ ಕಳ್ಕಂಡದರ ಎಲ್ಲದರ ಕೊಟ್ಟತಲೇ? ಅದರ್‌ಂದ ಮೇಲೆನೂ ವನವಾಸ, ತಲೆ ಮರ್ಸೆಕೊಂಡಿರ್ದು ಎಂತ ಸರ್ತ ಹಾಕಿ ತಿರ್ಗ ಜೂಜು ಆಡಿ ಸೋತತ್. ಒಂದ್ ಸರ್ತಿ ಸೋತದರ್‌ಂದ ಪಾಟ ಕಲ್ಯದ ಅಂವನ ಬೋದಾಳತನಕ್ಕೆ ಏನ್ ಹೇಳೋಕು? ಅಂದ್ ಯುಧಿಷ್ಠಿರ ಬರೇ ಮೊನ್ಸ್‌ನ ಕುಸಿಗಾಗಿ ಜೂಜಾಟ ಆಡಕಾಗಿತ್ತ್. ಯಾವ್ದೇ ಪಂತ ಇಸಿಕೆ ಆಗದಿತ್ತ್. ಆಗ ದ್ರೌಪದಿನ ಮಾನಬಂಗ ಆಗ್ತಿತ್ಲೆ. ಕಾಡ್‌ಲಿ ವಾಸಮಾಡ್ದು, ತಲೆಮರ್ಸಿಕಂಡಿರ್ದು–ಇದೆಲ್ಲಾ ಆಗ್ತಿತ್ಲೆ. ನಿಜಲಿ ನೋಡ್ರೆ ಈ ಕಾಳಗನೇ ನಡ್ಯತಿತ್ಲೆ. ಈಗ ಸಾ ದುರ್ಯೋಧನ ಕಾಳಗದ ಬದ್‌ಲ್ ಜೂಜಾಟ ಆಡೊಮೋಂತ ಕರ್ಯತಿದ್ದರೆ ಯುಧಿಷ್ಠಿರ ಬೇಡಾಂತ ಹೇಳಿಕಿತ್ಲೆ. ರಕ್ತಪಾತ ಇಲ್ಲದೆ ದುರ್ಯೋಧನಂಗೆ ರಾಜ್ಯ ಸಿಕ್ಕಿತ್ತ್. ನಾಳೆ ಪಾಂಡೋವು ಯುದ್ದಲಿ ಗೆದ್ದರೆ ರಾಜ್ಯನ ಒಳ್ಸಿಕೊಂಬೊನೋ? ಚಂಚಲ ಮೊನ್ಸ್‌ನ ಯುಧಿಷ್ಠಿರ ಯಾರೊಟ್ಟಿಗೆ ಜೂಜಾಡಿ ಇದರ ಕಳ್ಕಂಡದೆನೋ?

ಒಂದು ನಿಟ್ಟುಸ್ರ್ ಬುಟ್ಟ್‌ದ್ ಭೀಷ್ಮರ್ ಹೇಳ್ದೊ, "ಹೌದು ಕೂಸು. ನೀ ಅರ್ಜುನನ ಪ್ರೀತಿ ಮಾಡಿಕೆ ಕಾರ್ಣನೇ ಇಲ್ಲೆ. ಆದರೆ ಅಂವನ ಸಾರಥಿ ಕೃಷ್ಣ ದೊಡ್ಡ ತಂತ್ರನ ತಿಳ್ದಂವ. ಅಂವಂದಾಗಿ ನಾ ಅರ್ಜುನನ ಏನ್ ಸಾ ಮಾಡಿಕೆ ಆಗದೆ ಹೋದೆ. ಈಗ ನೀ ಅರ್ಜುನನ ಕೊಲ್ಲಿಕೆ ಹೊರ್ಟಳ. ಕೃಷ್ಣನ ಸಾರಥಿತನಕ್ಕೆ ಎದ್‌ರ್ ಆಗಿ ಯಾವ ತಂತ್ರನ ಮಾಡ್ಯಳ? ಏನಾದರ್ ಏಚನೆ ಮಾಡ್ಯಳನೋ?"

ಕುಸಿಂದ ಕರ್ಣ ಹೇಳ್ತ್. "ಏಚನೆ ಮಾಡಿನೇ ನಾ ನಿಮ್ಮಲ್ಲಿಗ ಬಂದ್‌ದ್ ಅಜ್ಜಪ್ಪಾ. ಕೃಷ್ಣನಸ್ಟೇ ಯುದ್ದದ ತಂತ್ರನ ತಿಳ್ದೋವು ನಮ್ಮಲ್ಲಿನೂ ಒಳೊ. ಅಂವ ಶಲ್ಯ ಭೂಪತಿ. ಅಂವ ಏನಾದರ್ ನನ್ನ ಸಾರಥಿ ಆಗಿ ಬುಟ್ರೆ ಕೃಷ್ಣನ ತಂತ್ರಕ್ಕೆ ಎದ್‌ರ್ ತಂತ್ರಹೂಡ್ದು. ನಾ ಅರ್ಜುನನ ಒಟ್ಟಿಗೆ ಚಿಂತೆ ಇಲ್ಲದೆ ಹೋರಾಟ ಮಾಡ್ವೆ. ಅಂವನ ಕೊಲ್ಲುಂವೆ ಕೂಡಾ. ನಂಗೆ ಬೇರೆ ರುಣದ ಹಂಗ್ ಇಲ್ಲೆ. ಆದರೆ ದುರ್ಯೋಧನನ ರುಣನ ನಾ ಹಂಞ ಆದರ್ ತೀರ್ಸೋಕು. ಅಂವನ ಒಂದು ಗುಣನ ನಾ ಬಾಳ ಮೆಚ್ಯಳೆ. ಹುಟ್ಟುನ ಕಾರಣಕ್ಕೆ ಆಗಿ ಅಂವ ಯಾರ್ನೂ ನಿಂದನೆ ಮಾಡ್ದರ ನಾ ನೋಡ್ತಿಲ್ಲೆ. ಅಂವ ಇಲ್ಲದಿರ್ತಿದ್ದರೆ ನಾ ಬರೇ ಹಸ್ತಿನಾವತಿನ ಕುದುರೆ ಕಾಯಂವ ಆಗಿ ಇರ್ತಿದ್ದೆ. ರಾಜ ಮೊನ್ಸ್ ಮಾಡ್ರೆ ಯಾವುದೇ ರೀತಿನ ಮೇಲ್– ಕೀಳ್‌ನ ಸರಿಮಾಡಿಕೆ ಆದೆ. ಅಲ್ಲನೋ ಅಜ್ಜಪ್ಪಾ?"

ಭೀಷ್ಮರ್‌ಗೆ ನೆಗೆ ಬಾತ್. "ಕೂಸೂ, ರಾಜ ಮಾತ್ರ ಮೊನ್ಸ್ ಮಾಡ್ರೆ ಸಾಕಾದುಲ್ಲೆ. ಪ್ರಜೆಗ ಸಾತ್ ಮೊನ್ಸ್ ಮಾಡೊಕು. ನಿದಾನಲಿ ಆವ ಬದ್ಲಾವಣೆಗ ಸ್ತಿರ ಆಗಿ ಇದ್ದದೆ. ಮ್ಯೊಂಸರಲ್ಲಿ ಇರ್ವ ಮುರ್ಗ ಜಾತಿನ ಗುಣಗ ಜಾತಿ ಮತ್ತೆ ಬಣ್ಣ ಸಂಮಂದ ಮೇಲ್ ಕೀಳ್‌ಗೆ ಕಾರಣಗ. ಅವು ಹೋಕರೆ ಮ್ಯೊಂಸನಲ್ಲಿ ಓದುಬರ ಕಲ್ಯವ, ಅದರ ಗ್ರೇಸುವ, ಇಚ್ಚಾರಗಳ ಒಳ್ಳದ್ ಕೆಟ್ಟದ್ ತಿಳ್ಕಂಬ ಬುದ್ದಿವಂತಿಕೆ ಹುಟ್ಟೋಕು. ದುರ್ಯೋಧನ ನಿನ್ನನ ಅಂವನ ಹಕ್ಕಲೆ ಕರ್ಕಂಡದಕ್ಕೆ, ನಿಂಗೆ ಅಂವ ಗುಣವೊಂತಾಂತ ಕಂಡದೆ. ತುಂಬಾ ಪ್ರೀತಿ ಮಾಡೋವರ ಕೆಟ್ಟಗುಣಗಳ ನಾವು ತಿಳ್ದರೂ ತಿಳ್ಯದಾಂಗೆ ಇದ್ದವೆ. ಈ ದುರ್ಯೋಧನ ಒಬ್ಬನೇ ಒಬ್ಬ ಕೆಳಜಾತಿಯಂವನ, ಇಲ್ಲರೆ ಕಾಡ್ ಮ್ಯೊಂಸನ ತನ್ನ ಹಕ್ಕಲಿ ಸೇರ್ಸಿಟೋ? ಅಂದ್ ಕೃಷ್ಣ ರಾಜಿಪಂಚಾತಿಕೆ ಮಾಡಿಕೆ ಬಾಕನ ವಿದುರನ ಮನೆಲಿ ನಿತ್ತತ್. ಅದ್ಕೆ ವಿದುರನ ಇಂವ ತುಂಬಿದ ಸಭೆಲಿ ದಾಸಿನ ಮಂಜ ಎಂತ ಹೇಳಿ ಅಪಮಾನ ಮಾಡಿಟು. ವಿದುರನ ಅಪ್ಪ ಯಾರಂತ ತಿಳ್ಕಂಡಳ? ದ್ವೈಪಾಯನರ್. ನೇರಲಿ ವಿದುರ ದುರ್ಯೋಧನಂಗೆ ಪಾಂಡುನ ಹಾಂಗೆ ಸಣಪ್ಪ ಆಕು. ಆದರೆ ಅಂವನ ಅಯ್ಯೆ ದಾಸಿ ಆಗಿದ್ದರ್‌ಂದ ವಿದುರ ದಾಸಿ ಮಂಜ ಎಂತ ಕರ್ಸಿ ಕಂಬಕಾತ್. ಕುರು ಸಾಮ್ರಾಜ್ಯಲಿ ಇರುವ ಕೆಳ ಜಾತಿಯೋವ್ಕೆ ಮತ್ತೆ ಕಾಡ್ ಮ್ಯೊಂಸರ್‌ಂಗೆ ಬಿಲ್ಲ್ ವಿದ್ಯೆ ಕಲ್ಸುವ ಒಂದು ಸಾಲೆನ ಸುರು ಮಾಡಿಕೆ ಇಂವಂಗೆ ಮೊನ್ಸ್ ಬಾತ್ಲೆ. ಇದ್ ದುರ್ಯೋಧನ ಎಲ್ಲೋವು ಒಂದೇ ಸಮಾಂತ ಹೇಳಿಕೆ ಮಾಡ್ದ ಕತೆ. ಅಂದ್ ಸ್ಪರ್ಧಾಕಣಲಿ ಅರ್ಜುನ ನಿನ್ನ ಹುಟ್ಟುನ ಮೂಲನ ಕೆದ್ಕಿಕನ, ನಿನ್ನಲ್ಲಿ ಮೂಡ್ದ ಸೇಡ್‌ನ, ಪಾಂಡೋವರ ನಾಶಮಾಡಿಕ್ಕಾಗಿ ಬಳ್ಸಿಕೆ ನಿನ್ನ ಅಂವ ಒಂದ್ ಬಾಣ ಆಗಿ ಮಾಡಿಕಂಡತ್. ಅಷ್ಟೆಯ. ಅದರೆಲ್ಲಾ ಈಗ ಹೇಳಿ ಪ್ರೋಜನ ಇಲ್ಲೆ. ಈಗ ನೀನ್ ಏನ್ ಮಾಡಿಕೆ ಹೊರ್ಟಳ? ಅದರ ಹೇಳ್."

ಕರ್ಣ ಹೇಳ್ತ್. "ದುರ್ಯೋಧನ ಎಂತಂವ ಆದರ್‌ಸಾ ನಾ ಅಂವ ಗೆಲ್ಲಿಕಾಗಿ ಒಂದ್ ಕಡೆ ನಿರ್ದಾರನ ಮಾಡೋಕು ಅಜ್ಜಪ್ಪಾ. ಶಲ್ಯ ಭೂಪತಿ ನನ್ನ ಸಾರಥಿ ಆದರೆ ಕೃಷ್ಣಾರ್ಜುನರ್ಗೆ ಸಡ್ಡ್ ಹೊಡ್ಯಕ್. ಶಲ್ಯನ ನನ್ನ ರಥನ ನಡ್ಸಿಕೆ ಒಪ್ಪುಸುದು ಸುಲ್ಬದ ಕೆಲ್ಸ ಅಲ್ಲ. ದುರ್ಯೋಧನ ಈ ಮಾತ್‌ನ ಹೇಳಿಕಾಕನ "ಕ್ಷತ್ರಿಯ ಆದ ನಾ ಕೀಳ್ ಜಾತಿಯಂವ ಆದ ಕರ್ಣನ ಸಾರಥಿ ಆದೋ?– ಏಂತ ಕೇಳ್ತ್ ಗಡ. ಯುದ್ದದ ಈ ಹಂತಲಿನೂ ಮೇಲ್, ಕೀಳ್‌ಂತ ಹೇಳ್ವ ಜನಂಗಳ ಮೊನ್ಸ್‌ಗೆ ನಾ ಏನ್ ಹೇಳಲಿ ಅಜ್ಜಪ್ಪಾ? ಅವು ಕೆಲ್ಸ ಮಾಡ್ವ ರೀತಿನ ನೋಡ್ದರಿನೋ? ದುರ್ಯೋಧನಂದ ಶಲ್ಯ ಭೂಪತಿನ ಒಪ್ಪುಸಿಕೆ ಆತ್ಲೆ. ಅದ್ ನಿಮ್ಮಂದ ಆದು. ನೀವು ಒಂದ್ ಮಾತ್‌ನ ಹೇಳಿರೆ ಶಲ್ಯ ಭೂಪತಿ ಒಪ್ಪದಿರಿಕಿಲ್ಲೆ. ದುರ್ಯೋಧನನ ರುಣನ ತೀರ್ಸಿಕೆ ನಂಗೆ ಕಟ್ಟ ಕಡೆನ ಒಂದ್ ಅವ್ಕಾಸನ ಮಾಡಿ ಕೊಟ್ಟರೆನೊ ಅಜ್ಜಪ್ಪಾ?"

ಅರ್ಜುನನ ಕೊಲ್ಲಿಕೆ ಸಾಯಮಾಡ್ದೇ? ಅರ್ಜುನ ನಾಳೆನ ಕಾಳಗಲಿ ಕರ್ಣಂದ ಸತ್ತರೆ ಮುಂದೆ ಕುರು ಸಾಮ್ರಾಜ್ಯದ ರಕ್ಷಣೆ ಮಾಡೋವು ಯಾರ್? ಭೀಷ್ಮರ್ ದೊಡ್ಡ

ಆಲೋಚನೆಲಿ ಮುಣ್‍ಂಗಿದೊ. ಈಗ ಕುರು ಸಾಮ್ರಾಜ್ಯಂತ ಕರ್ಸಿಕಂಬ ಜಾಗೆನ ಹಿಂದೆ ಅದೆಸ್ಟ್ ರಾಜರ್‍ಗ, ಮಾರಾಜರ್‍ಗ ಆಳಿದ್ ಸತ್ತ್ ಹೋಗೊಳೊನೋ ಏನೋ? ಕುರುಗ ಚಂದ್ರ ವಂಸದೊವು ಗಡ. ಆದರೆ ಧೃತರಾಷ್ಟ್ರ ಆಗಲಿ, ಪಾಂಡು ಆಗಲೀ ಚಂದ್ರವಂಸದೊವು ಆಕೆ ಹೇಂಗೆ ಸಾದ್ಯ? ಪರಾಶರ ಮುನಿಗೆ ಸತ್ಯವತೀ ದೇವಿಲಿ ಹುಟ್ಟಿದ ದ್ವೈಪಾಯನರ ಮಕ್ಕ ಅವು. ಧೃತರಾಷ್ಟ್ರನ ರಾಣಿಗ ದೂರದ ಗಾಂಧಾರ ದೇಸದೊವು. ಕುಂತಿದೇವಿ ಯದುಕುಲದ್. ಅಂದ ಮೇಲೆ ಮುಂದೆನ ಸಾಮ್ರಾಜ್ಯದ ಮತ್ತೆ ರಕ್ಷಣೆ ಮಾಡುವೊವರ ನಿರ್ದಾರ ಮಾಡುವ ಹಕ್ಕ್ ನಂಗಿಲ್ಲೆ. ಕಾಲ ಬಂದಾಂಗೆ ಕೋಲ ಕಟ್ಟೋಕು. ಕರ್ಣನ ಅಕೆರಿನ ಆಸೆನ ತೀರ್ಸಿಕೆ ನಾ ಸಾಯ ಮಾಡ್ದೇ ನನ್ನ ದರ್ಮ, ಎಂತ ತೀರ್ಮಾನಕ್ಕೆ ಬಂದ ಭೀಷ್ಮರ್ ಹೇಳ್ದೊ,

"ಹೋಗು ಕೂಸೂ. ದುರ್ಯೋಧನಂಗೆ ತಿಳ್ಸ್. ನನ್ನ ಆಜ್ಞೆಂತ ಹೇಳಿ ಅಂವಶಲ್ಯಭೂಪತಿನ ಕರ್‍ಕಂಡ್‍ಬರ್‍ಲಿ."

ಕರ್ಣ ಹೊರಗೆ ನಡ್ತ್. ಮಾದ್ರ ದೇಸದ ರಾಜ ಶಲ್ಯ ಭೂಪತಿಗೆ ಬಾಳ ಜಾತಿನ ದೊಡ್ಡಸ್ತಿಕೆ. ಅಂವ ಹುಟ್ಟೇ ದೊಡ್ಡದರ ಹೇಳ್ದೇಂತ ಹೇಳಂವ. ಅಂವನ ಹಂಞ ಹೊಗಳ್‍ರೆ ಅಂವಂದ ಏನ್ ಸಾ ಪಡ್ಕಣಕ್. ಎದ್‍ರ್ ಹೊಗಳ್‍ರೆ ಹಿಗ್ಗ್‍ವ ಬೋಳೇ ಸೊಬಾವದಂವ ಅಂವ. ಶಲ್ಯ ಭೂಪತಿ ತನ್ನ ಮಾತ್‍ನ ಕೇಳದೆ ಇರಿಕಿಲ್ಲೇಂತ ಭೀಷ್ಮರಿಗೆ ಇಸ್ವಾಸ ಇತ್ತ್.

ಶಲ್ಯ ಭೂಪತಿ ಕೌರವ ಪಾಳ್ಯನ ಸೇರುವ ಪರ್ಸಂಗ ಬಂದದರ ಭೀಷ್ಮರ್‍ಗೆ ನೆಂಪಾದೆ. ಅಂವನ ತಂಗೆ ಮಾದ್ರಿ ಪಾಂಡುನ ಎರಡ್ನೇ ಹೆಣ್ಣ್ ಆಗಿ, ಹಸ್ತಿನಾವತಿನ ಸೊಸೆ ಆತ್. ಪಾಂಡುನ ಒಪ್ಪಿಗೆಂದ ನಕುಲ ಸಹದೇವರ ಅಯ್ಯೆ ಆದೋಳು. ಕೌರವರ, ಪಾಂಡೋವರ ನೊಡುಲಿ ಯುದ್ದ ನಿಚ್ಚಯ ಆಕಾಕನ ಶಲ್ಯ ಭೂಪತಿ ಮಾದ್ರ ದೇಸದ ಸೇನೆನ ತಕಂಡ್ ತನ್ನ ಅಳಿಯಂದರ್ ಆದ ಪಾಂಡೋವರ ಸಾಯಕ್ಕೆ ಹೊರ್ಟ್ತ್. ಮಾರ್ಗ ನೊಡುಲಿ ದುರ್ಯೋಧನ ಅಂವನ ನೋಡ್ತ್. ಅಂವಂಗೆ ಗಡ್ಡ್‍ನ ಸಂಮಾನ ಮಾಡ್ತ್. ಕುಡ್ಯಕೆ ಬೇಕಾದಸ್ಟ್ ಅಮಲ್ ಪದಾರ್ತನ ಕೊಟ್ಟತ್. ಪೊರ್ಲು ಪೊರ್ಲುನ ಹೆಣ್ಮಕ್ಕಳ ಕೊಣ್ತ, ಹಾಡ್‍ಲಿ ಶಲ್ಯನ ಮೊರ್ಳ್ ಗೊಳ್ಸಿತ್. ಅಂವನ ಕಾಲಿಗೆ ಬಿದ್ದ ಕುರು ಸಾಮ್ರಾಜ್ಯನ ರಕ್ಷಣೆ ಮಾಡೊಕೂಂತ ಕೇಳಿಕಂಡತ್.

ಶಲ್ಯ ಭೂಪತಿ ಇಕ್ಕಟ್ಟ್‍ಲಿ ಸಿಕ್ಕಿತ್. ಪಾಂಡೋವರ ಕಾಯಕೇಂತ ಹೊರ್ಟಂವ ಹೀಂಗೆ ದುರ್ಯೋಧನನ ಹಂಗ್‍ಗೆ ಬಿದ್ದ್ ಬುಟ್ಟೆನೆಲೇಂತ ಮೊರ್ಗಿತ್. ಸುಲಬಲಿ ಅಂವ ದುರ್ಯೋಧನನ ಮಾತ್‍ಗೆ ಒಪ್ಪಿತ್ಲೆ. ದುರ್ಯೋಧನ ಶಲ್ಯನ ಉಬ್ಬುವ ಹಾಂಗೆ ಹೊಗಳ್ತ್. ತನಿಗೆ ಹಗೆ ಇರ್ದು ಭೀಮ ಮತ್ತೆ ಅರ್ಜುನರ್‍ಲಿ ಮಾತ್ರ, ನಕುಲ, ಸಹದೇವರ್ ಮಾದ್ರಿನ ಮಕ್ಕ ಆದ್ದರ್‍ಂದ ಅವು ಸುದ್ದ ಕ್ಷತ್ರಿಯ ಹೆಣ್ಣ್‍ನ ಹೊಟ್ಟೆಲಿ ಹುಟ್ಟಿದೋವು ಆದವೆ. ಅವರ ಕುಂತಿ ಮಕ್ಕಳ ಹಂಗ್‍ಂದ ಬುಡ್ಸಿ ಕೊಂಬೊದು ತನ್ನ ಉದ್ದೇಸಲಿ ಒಂದ್ ಎಂತ ಹೇಳಿ ಶಲ್ಯ ಭೂಪತಿ ತಲೆದೂಂಗುವ ಹಾಂಗೆ ಮಾಡ್ತ್. ಮಾದ್ರಿನ

ಮಕಳ್‌ಲಿ ಯಾರನಾದರ್ ಕುರು ಸಾಮ್ರಾಜ್ಯದ ಅರ್ಸ್ ಆಗಿ ಮಾಡ್ವಾದರೆ ನಾ ಈಗಳೂ ಸಾತ್ ರಾಜಿ ಪಂಚಾಯಿತಿಗೆ ಒಪ್ಪಿನೆ. ಹಿಂಗೆಲ್ಲಾ ಹೇಳಿ ಶಲ್ಯನ ಕೆಬಿ ತುಂಬುಸಿ ಪುಂಗಿನ ಊದಿತ್. ಆಗ ಶಲ್ಯ ಭೂಪತಿನ ಮೊನ್ಸ್ ಕರ್‌ಗಿ ಅಂವ ಕುರು ಪಾಳಯನ ಸೇರ್ತ್. ಅಂವನ ಹಾಂಗೆ ಕುದ್ರೆನ ಮತ್ತೆ ದನಂಗಳ ಇಸಯ ಗೊತ್ತಿದ್ದೋವು ಇಡೀ ದೇಸಲಿ ಯಾರ್‌ನೂ ಇತ್ಲೆ. ಆ ವಿದ್ಯೆನ ಅಂವ ಅಳಿಯಂದರ್ ನಕುಲ, ಸಹದೇವಂಗೆ ಹೇಳಿಕೊಟ್ಟಿದ್, ತಲೆ ಮರ್ಸಿಕೊಂಡಿದ್ದ ಕಾಲಲಿ ಉಪಯೋಗಕ್ಕೆ ಬಂದಿತ್ತ್. ಅಂತಾ ಶಲ್ಯ ಕರ್ಣನ ಸಾರಥಿ ಆದರೆ ಯುದ್ದದ ಹಣೆಬರ ಬದ್ಲಾದೆನೋ?

ದುರ್ಯೋಧನ ಕರ್ಣ ಮತ್ತೆ ಶಲ್ಯ ಭೂಪತಿನೊಟ್ಟಿಗೆ ಬಿಡಾರನ ಹೊಗಿಕನ ಭೀಷ್ಮರ್ ಏಚನೆ ಮಾಡ್ದು ತುಂಡಾತ್. ಆಗತಾನೇ ಅವರ ಹುಣ್ಣುನ ಸುತ್ತೋಳೂ ಪಂಡಿತರ್ ಪೊರ್ಕ್ಮಳ ಬರ್‍ವ ನೀರ್‌ಗಳ ಪೂಜಿದ್ದೊ. ಇನ್ನ್ ಈ ಹುಣ್ಣುಗ ತಡ್ಯಕೆ ಬೊತ್ತದ ನಾತನ ಸೂಸಿಕಿಲ್ಲೇಂತ ಅವ್ಕೆ ದೈರ್ಯ ಆತ್. ಬಂದವರ ನಮಸ್ಕಾರಗಳ ತಕಂಡ್ ಅಲ್ಲಿದ್ದ ಅಸನಲಿ ಕುದ್ರಿಕೆ ಹೇಳಿ ಭೀಷ್ಮರ್ ಮಾತಾಡ್ದೊ "ಮದ್ರ ದೇಸದ ಅರ್ಸ ಆದ ಶಲ್ಯ ಭೂಪತಿ ಈ ಬಿಡಾರಕ್ಕೆ ಬಂದದರ್‌ಂದ ನನ್ನ ಗೌರವ ಹೆಚ್ಚಾತ್. ನಾ ಬೊದ್ಕಿ ಇದ್ದರುನೂ ಸತ್ತ ಹಾಂಗೆ ಒಳೆ. ನಿನ್ನೆ ಆಚಾರ್ಯ ದ್ರೋಣರ ಕೊಲೆ ಆಗುಟು. ಈಗ ಕುರು ಪಾಳ್ಯಲಿ ಕಾಳಗನ ಗೆದ್ದ್ ಕೊಡ್ವಂತಾ ಹಿರ್‍ಯರ್‌ಂತ ಇರ್ದು ನೀವು ಮಾತ್ರ. ಹೇಳ್ ಭೂಪತಿ, ಯುದ್ದದ ಗತಿ ಏನಾದು?"

ಹೊಗಳ್ದರ್‌ಂದ ಶಲ್ಯ ಭೂಪತಿ ಉಬ್ಬಿ ಹೋತ್. ಅಂವಂಗೆ ಭೀಷ್ಮರ್ ಯೋಗ್ಯತೆ ಏನ್‌ಂತ ಲಾಯ್ಕಲಿ ಗೊತ್ತಿತ್ತ್. ಅಂವ ಇದ್ದ ಹಾಂಗೇ ಉತ್ತರ ಕೊಟ್ಟಿತ್. "ಆಚಾರ್ಯರೇಪರಿಸ್ತಿತಿ ಬಾಳ ಕಸ್ಟಲಿ ಉಟ್ಟು. ಕೃಷ್ಣ ಮತ್ತೆ ಅರ್ಜುನರ್‌ಂದ ನಾವ್ಗೆ ದೊಡ್ಡ ತಲೆ ಬೇನೆ ಆಗುಟು. ಅವರ ಕೊಂದರೆ ಜಯ ನಮ್ಮ ಕಡೆಗೆನೆ. ಆದರೆ ಅದ್ ಹೇಂಗೇಂತ ಹೇಳ್ದೇ ದೊಡ್ಡ ಸಮಸ್ಯೆ ಆಗುಟು. ಅರ್ಜುನನಂತ ಬಿಲ್ ವಿದ್ಯೆಲಿ ಪಳ್ಗಿದಂವ ಮತ್ತೆ ಕೃಷ್ಣನ ಹಾಂಗೆ ಯುದ್ದದ ತಂತ್ರನ ತಿಳ್ದಂತ ಕೆಣಿಗಾರಿಕೆಯೊವು ನಮ್ಮ ಕಡೆಲಿ ಯಾರ್ ಸಾತ್ ಇಲ್ಲೆ. ಇದ್ದಿದ್ದರೆ ನಾವು ಚಿಂತೆ ಮಾಡುವ ಅಗತ್ಯ ಇತ್ಲೆ."

ಕೂಡ್ಲೆ ದುರ್ಯೋಧನ ಹೇಳ್ತ್. "ಅಜ್ಜಪ್ಪಾ, ಈ ಶಲ್ಯಮಾಂವ ರಥನ ಓಡ್ಸುದರ್ಲಿ ದೊಡ್ಡ ಜಾಣ. ಯುದ್ದ ತಂತ್ರಗಾರಿಕೆಲಿ ಕೃಷ್ಣಂಗೆಸಮ ಒಳೊ. ಅಸ್ಟವಲಿ ಅವರ್‌ಂದಳೂಹಿರ್‍ಯರ್. ಆದರೂಸುಮ್ಮಂಗೆ ಕೀಳರ್ಮೆಂದ ಏನೇನೋಹೇಳಿವೆ. ಇನ್ನ್‌ನಮ್ಮ ಕರ್ಣ ಬಿಲ್ಲ್ ವಿದ್ಯೆಲಿ ಯಾಗೋಳೂ ಅರ್ಜುನಂದ ಮೇಲೆನೇ. ಕರ್ಣ ರಥಲಿ ಕುದ್ದ್, ಈ ಮಾಂವ ಸಾರಥಿ ಆದರೆ ಕುರುಸೇನೆನ ಗೆಲ್ಲೋವು ಈ ಲೋಕಲಿ ಯಾರೊಳೋ? ಏನ್ ಹೇಳ್ರೆ ಅಜ್ಜಪ್ಪಾ?"

ಇದ್ ಸರಿ ಆದ ಅವ್ಕಾಸಾಂತ ಭೀಷ್ಮರ್ ನೆನ್ಸಿಕಂಡ್ ಹೇಳ್ದೊ. "ಶಲ್ಯಭೂಪತಿ, ದುರ್ಯೋಧನ ಹೇಳ್ದರ್ಲಿ ಹೆಚ್ಚ್‌ಗಾರಿಕೆ ಏನ್ ಸಾ ಇಲ್ಲೆ. ಇಡೀ ದೇಸಲಿ ಕುದ್ರೆನ ಕತೆನೆಲ್ಲಾ ತಿಳ್ದಂವರ್‌ಲಿ ನಿಂಗೆ ಸಮ ಯಾರ್‌ನೂ ಇಲ್ಲೆ. ನೀ ಕರ್ಣನ ಸಾರಥಿ. ಆದರೆ

ನಾಳೆನ ಜಯ ನಮ್ಮೊದೆ. ನೀ ಇದರ ತಿರಸ್ಕಾರ ಮಾಡಿಕೆ ಬೊತ್ತ್. ಕರ್ಣನ ಸಾರಥಿ ಆಗಿ ಕೃಷ್ಣನ ಮೀರ್‍ಲೊಕು. ದುರ್ಯೋಧನಂಗೆ ಗೆಲ್ಮೆನ ತರೋಕು."

ಭೀಷ್ಮರ್ ಬೇಡಿಕಂಬ ಹಾಂಗೆ ಹೇಳ್ದರ ತಿರಸ್ಕಾರ ಮಾಡಿರೆ ತೊಪ್ಪಾದೂಂತ ಅಂವಂಗೆ ಆತ್. ಅಂವ ಹೇಳ್ತ್. "ಆಚಾರ್ಯರೇ, ನೀವೇಹೇಳ್ದಮೇಲೆ ಇನ್ನ್ ಏನ್‌ಮಾಡ್ದು? ಅದರ ಆಜ್ಞೇಂತ ತಲೆಲಿಹೊತ್ತ್ ಕಂಡ್ ಒಪ್ಪಿಕಣೆ. ವಿಧಿನನ್ನ ಕುರುಪಾಳ್ಯಕೆಸೇರ್‍ಸಿಟು. ದುರ್ಯೋಧನಂಗೆ ಜಯ ದೊರ್‍ಕಿಸಿ ಕೊಡ್ದು ನನ್ನ ಧರ್ಮ. ನಂಗೆ ಒಪ್ಪುಸಿದ ಕೆಲ್ಸನ ನಿಷ್ಟೆಲಿ ಮಾಡಿವೆ. ಆದರೆ ಈ ಕರ್ಣ ಒಂದ್ ಮಾತ್‌ನ ನೆಂಪುಲಿ ಇಸೊಕು. ನಾ ಇಂವಂದ ಕುಲಲಿ, ಬಲಲಿ, ವಿದ್ಯೆಲಿ, ಅನ್ಬವಲಿ, ಪ್ರಾಯಲಿ ಎಲ್ಲದರ್‍ಲೂ ದೊಡ್ಡಂವ. ಯುದ್ದ ಮಾಡಿಕಾಕನ ನಾ ಹೇಳ್ವ ಮಾತ್‌ಗ ದುರ್ಯೋಧನನ ಗೆಲ್ಲ್‌ದಕ್ಕಾಗಿ ನಾ ಹೂಡುವ ತಂತ್ರಗ ಎಂತ ತಿಳ್ಕಂಡ್ ಇಂವ ಅದರಾಂಗೇ ನಡ್ಯೋಕು. ನನ್ನ ಮಾತ್‌ನ ಅಂವ ಕೇಳ್ತ್‌ಲ್ಲರೆ ನಾ ಒಂದ್ ನಿಮ್ಸನೂ ಸಾ ಅಲ್ಲಿ ನಿಲ್ಲಿಕಿಲ್ಲೆ."

ಕರ್ಣನ ಬದ್‌ಲ್ ಭೀಷ್ಮರ್ ಅಂವಂಗೆ ಬರವಸೆ ಕೊಟ್ಟೊ. "ಇಲ್ಲೆ ಭೂಪತಿ ಅಂತಾದೇನ್‌ನೂ ನಡ್ಯಕಿಲ್ಲೆ. ಹಾಂಗೇನಾದರ್ ಆದರೆ ನೀ ನಿನ್ನ ಇಸ್ಟಪ್ರಕಾರ ಮಾಡ್."

ಬಾಳ ಕುಸಿನ ಮೋರೆಂದ ದುರ್ಯೋಧನ ಎದ್ದ್‌ದ್ ಭೀಷ್ಮರಿಗೆ ತಲೆ ಬೊಗ್ಗಿಸಿ ಕೈ ಮುಗ್ತ್. ಕರ್ಣ ಮತ್ತೆ ಶಲ್ಯ ಸಾ ಅಂವ ಮಾಡ್ದಾಂಗೆ ಮಾಡ್ದೊ. ಗೆಲ್ಲುವ ಕನ್ಸ್‌ನ ಕಂಡ್ ಕಂಡ್ ಅವು ಮೂರು ಜನನೂ ಬಿಡಾರಂದ ಹೊರಗೆ ನಡ್ದೊ.

ಅವು ಹೋದ ಮೇಲೆ ಹುಣ್ಣ್‌ನ ಸೈಸಿಕಾಗದ ನಾತ ಅವರ ಮೂಂಕ್‌ಗೆ ಬಾತ್. ಆ ಮಾತ್‌ಗ ಕೆಬಿಗೆ ಅಪ್ಪಿಸಿದಾಂಗೆ ಆತ್. .... "ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ..."–

*****

## ಹೋಉ – 13

# ಸುಕದ ನಿಮ್ಸ ಅದ್ ಎಸ್ಟ್ ಸಾಸ್ವತ ಆದು?

ಗಿರಿನಾಯಕನ ಮನೆನ ಉಪ್ಪರಿಗೆಲಿ ಒಂದು ದೊಡ್ಡ ಕೋಣೆ ಇತ್ತ್. ಅದರ್ನೇ ಅಂಬೆಗೆ ಬುಟ್ಟ್ ಕೊಟ್ಟೊ. ಅದರ್ಲಿ ಎದ್ರ್ ಬದ್ರ್ ಆಗಿ ಎರ್ಡ್ ದೊಡ್ಡ ಕಿಡ್ಕೆಗ ಇದ್ದೊ. ಮೂಡು ಕಡೆನ ಕಿಡ್ಕೆಂದ ನೋಡ್ರೆ ಕಾಡ್, ಪುಂಡೆಲ್, ದೈಗಳ್‌ಂದ ಹಿಡ್ದ್ ಮುಗಲ್‌ಗೆ ಮುಟ್ಟುವಸ್ಟ್ ಎತ್ತರದ ಬೇರೆ ಬೇರೆ ಜಾತಿನ ಮರಗ. ಯಾರ್ ಸಾ ನೆಟ್ಟದಲ್ಲ. ನೀರ್ ಹೊಯ್ದ್ ಬೆಳ್ಸಿದ್ ಅಲ್ಲ. ಗಿಡ ಮರಲಿ ಎಲ್ಲಾ ಹಕ್ಕಿಗ, ಕುಂಡಚ್ಚಗ, ಓಡಾಡಿ ಕಂಡಿದ್ದೊ. ಹಕ್ಕಿನ ಚಿಲಿಪಿಲಿ ಸದ್ದ್‌ನೊಟ್ಟಿಗೆ ಕುಂಡಚ್ಚಗಳ ಓಡಾಟ ಕಣ್ಣ್‌ಗೆ ಹಬ್ಬ ಕಾಂಬತಿತ್ತ್. ಆ ಬಿಳಳ್‌ನ ನೋಡಿ ಕಾಕನ ಕುಂಡಚ್ಚಗಳ ಹಾಂಗೆ ಅದರ್ಲಿ ಓಡಾಡಿಕೆ ಆಕಾಗಿತ್ತ್‌ಂತ ಅದ್ಕೆ ಆಸೆ ಮೂಡ್‌ತ್. ಪಡುದಿಕ್ಕ್‌ನ ಕಡೆನ ಕಿಡ್ಕೆಂದ ನೋಡಿರೆ ಬಾಳ ಅಗಲದ ಸರೋವರ ಕಾಂಬತಿತ್ತ್. ಅದರ್ಲಿ ನೀರ್ ಹಕ್ಕಿಗ ಆಟ ಆಡ್ತಿದ್ದೊ. ಬಾತುಕೋಳಿಗ, ಮತ್ತೆ ಹಂಸಗ ಈಜಾಟ ಮಾಡ್ತಿದ್ದೊ. ಕೊಕ್ಕರೆಗ ಅಲ್ಲಲ್ಲಿ ಬಕಧ್ಯಾನಲಿ ನಿತ್ತಿದ್ದೊ. ಮಿಂಚುಳ್ಳಿ ಹಕ್ಕಿಗ 'ಪುಳ್ಕ' ಎಂತ ಕೊಕ್ಕುನ ಕಂತ್‌ಸಿಮೀನ್ ಹಿಡ್‌ಕಂಡ್ ಮೇಲೆಗೆ ಹಾರಿ ನೀಲಬಣ್ಣದ ಆಕಾಸಲಿ ಕಣ್ಣ್‌ಮರೆ ಆಗಿ ಹೋಗ್ತಿದ್ದೊ. ಎಸ್ಟ್‌ಲಾಯ್ಕುಟ್ಟು. ಇದ್ ಕಾಶಿನ ಉಪವನಲಿ ಇರ್ದ್ಅರ್‌ಂದಳೂ ದೊಡ್ಡದುಟ್ಟು. ಸರೋವರನ ನೋಡಿ ಕಾಕನೆಲ್ಲಾ ಅದ್ಕೆ ಹೊಸ ಉತ್ಸಾಹ ಕೊಣ್ಯತಿತ್ತ್. ನಾಳೆ ಅದರ್ಲಿಮೊನ್ಸ್ ತಣ್ಯವಹಾಂಗೆ ಈಜೋಕೂಂತ ಅಂಬೆ ನೆನ್ನಿಕಂಡದೆ.

ಕೆಳಗೆಂದ 'ರಾಜಕುಮಾರೀ'ಂತ ಹೇಳ್ವ ಕರ್ಕಟ ಕೇಳಿಕನ ಅಂಬೆ ಕೆಳಗೆ ಇಳ್ದ್‌ಬಂದದೆ. ಗಿರಿನಾಯಕ ಬೇರೆ ಬೇರೆ ತರದ ನಾರ್‌ಂದ ಮಾಡ್ದ ಉಡ್ಪುನ ಹಿಡ್ಕಂಡ್ ನಿತ್ತಿತ್ತ್. ಹತ್ತಿಂದ ತಯಾರ್ ಮಾಡ್ದ ಕೆಲವು ಅರ್ವೆಗ ಇದ್ದೊ. "ನೀವು ಉಟ್ಟಬಟ್ಟೆಲೇ ಎಸ್ಟ್ ದಿನ ಪ್ರಯಾಣ ಮಾಡಿದರಿನೋ ಏನೋ? ಈಗ ಬದ್ಲಾಯ್ಸಿನಿ. ನೀವುಗೆ ನಾವು ತಯಾರ್ಸಿದ ಉಡ್ಪುಗ ಹಿಡ್ಸುವೆನೋ ಇಲ್ಲೆನೋ? ಬೇರೆ ಬೇರೆ ಅಳ್ತೆನ ಮೇಲ್ ಉಡ್ಗೆ, ಕೆಳಗೆ ಹಾಕುವ ಉಡ್ಗೆ, ಒಳಗೆ ಹಾಕುವ ಉಡ್ಪುಗ ಇಲ್ಲಿ ಒಳೊ. ಇದೆಲ್ಲಾ ಹೊಸತ್ ಉಡ್ಪುಗ. ಇಲ್ಲಿ ನಾವು ತಯಾರ್ಸಿದ ಉಡ್ಪುಗಳ ಪಟ್ಣಲಿ ಮಾರಿವೆ. ಹಂಞ ದೂರಲಿ ಒಂದು ಮುನಿಗಳ ಆಸ್ರಮ ಉಟ್ಟು. ಅವು ನಮ್ಮ ಹಕ್ಕಲೆನೇ ಉಡುಪುಗಳ ತಕಂಡವೆ. ಗೂಡೆಗ, ಹೈದಂಗಳಿಗೇಂತ ಆಕರ್ಸಣೆನ ಉಡ್ಪುಗಳ ತಯಾರ್ಸಕಾದೆ. ಅಂತದರನೇ ನೀವ್ಗಾಗಿ ತಂದಳೆ. ಎಸ್ಟ್ ಬೇಕರೆ ತಕಣಿ."

ಕಾಶಿಂದ ತಂಗೆಕಳೊಟ್ಟಿಗೆ ಅದ್ ಹೊರ್ಡಿಕಾಕನ ಬಟ್ಟೆ ಬರೆಗಳ ಮೂರು ದೊಡ್ಡ

ಪೆಟ್ಟಿಗೆಗಳ ಭೀಷ್ಮಾಚಾರ್ಯರ ರಥಲಿ ಅಪ್ಪ ಇರ್ಸಿದ್ದೊ. ಅದ್ ಈಗ ಹಸ್ತಿನಾವತಿಲಿ ಉಟ್ಟು. ಪುರೋಯ್ತು ದೇವೀಚರಣದಾಸರೊಟ್ಟಿಗೆ ಸೌಭಕ್ಕೆ ಹೊರ್ಡಿಕನ ಸಾಲ್ವ ಭೂಪತಿನ ಸಿಂಯಿಕನ್ಸ್‌ಲಿ ಪೆಟ್ಟಿಗೆ ಮರ್ತೇ ಹೋಗಿತ್ತ್. ಉಟ್ಟ ಸೀರೆಲೇ ಅದ್ ಹೊರ್ಟಿತ್ತ್. ಮಿಾಯದೆ, ಉಡ್ಪು ಬದ್ಲಾಯ್ಸದೆ ಮೈ ಎಲ್ಲಾ ತೊರ್ಸಿಕೆ ಸುರಾಗಿ, ಅದರ ಬೆಗರ್‌ನ ನಾತ ಅದ್ಕೆ ಅಸಯ್ಯ ಆಕೆ ಸುರಾತ್. ಬೇರೆ ಬಟ್ಟೆಗೆ ಏನ್ ಮಾಡ್ದೂಂತ ಅದ್ ಏಚನೆ ಮಾಡಿಕಾಕನ ಗಿರಿನಾಯಕ ಅಂವನಾಗಿನೇ ಬಟ್ಟೆಗಳ ತಂದದರ ನೋಡಿ ಅದರ ಎದೆ ತುಂಬಿ ಬಾತ್. ಬಟ್ಟೆ ಬದ್ಲಾಯ್ಸಿಕೆ ಮುಂದೆ ಒಂದು ಲಾಯ್ಕ್‌ನ ಮಿಾಯಟ ಮಿಾಯೊಕು. ಇಸ್ಟ್ ಹೊತ್ತ್‌ಲಿ ಸರೋವರಲಿ ಈಜಿಕೆ ಆದುಲ್ಲೆ.

ಅದರ ಮೊನ್ಸ್‌ನ ಓದಿಕೊಂಡಂವನಾಂಗೆ ಗಿರಿನಾಯಕ ಹೇಳ್ತ್ "ನಿಮ್ಮ ನಿತ್ಯ ಮಾಡುವ ಕೆಲ್ಸಕ್ಕೆ ಮತ್ತೆ ಮಿಾಯಕೆ ನಮ್ಮಲ್ಲಿ ಬೇರೆನೇ ಏರ್ಪಾಡ್ ಉಟ್ಟು. ನಾವು ಎಲ್ಲದರಸಾ ಈ ಪ್ರಕೃತಿಲೇ ಮುಗ್ಸುವೆ. ಅಲ್ಲಲ್ಲಿ ಬೀಳುವ ನೀರ್, ತೊರೆಗ, ಚೋಡುಗ ಇರ್ದರ್‌ಂದ ಸಮಸ್ಯೆ ಆದುಲ್ಲೆ. ಈಜೊಕೂಂತೇಳ್ರೆ ಸರೋವರ ಉಟ್ಟು. ಒಮ್ಮೊಮ್ಮೆ ಸರೋವರಲಿ ಈಜ್ ಪಂದ್ಯ ಮಾಡಿವೆ. ನಮ್ಮ ಮನೆಗೆ ದೊಡ್ಡ ದೊಡ್ಡ ಜನಂಗ ಬಂದವೆ. ಅವರ ಹಾಂಗೆಲ್ಲ ಕಳ್ಸಿಕೆ ಆದ್ಲೇಂತ ಈ ಮನೆನ ಹಿಂದೆ ದೊಡ್ಡ ಮಿಾವ ಕೋಣೆ ಮತ್ತೆ ಪಾಯ್ಖಾನೆಗಳ ಮಾಡ್ಯೊಳೊ. ನಗರಂದ ಬಾವ ಆಡಳ್ತೆ ಮಾಡುವ ಅಧಿಕಾರಿಗ ಮತ್ತೆ ಅರಣ್ಯ ಅಧಿಕಾರಿಗ ಇಲ್ಲಿ ಒಳ್ದ್ ಕಂಡವೆ. ಆದರೆ ಅದರ ಅವು ಉಪಯೋಗಿಸುದುಲ್ಲೆ. ನಗರ ಜೀವನಂದ ಬೇಜಾರ್ ಪಡ್ಡ ಅವು ಎಲ್ಲದರ ಸಾ ಹೊರಗೇನೇ ಮುಗ್ಸುವೆ. ನೀವ್ಗೆ ಅಚ್ಚರಿ ಆದು. ಹಾಂಗೆ ಬಂದೋವು ಮನೆನ ಜಗ್ಲೀಲೇ ಮೊಲ್ಗುವೆ. ನಮ್ಮ ನಿತ್ಯಕರ್ಮಗಳ ತೀರ್ಸುವ ಕೋಣೆ ಮತ್ತೆ ಮಿಾವ ಕೋಣೆ ಇಂದ್ ನಿಮ್ಮಂದಳೇ ಸಾರ್ತಕ ಪಡ್ದ್‌ಕಂಡವೆ."

ಗಿರಿನಾಯಕನ ಮಾತ್‌ಗೆ ಅದ್ ನೆಗಾಡ್ತ್. ತಾನ್ ಇಸ್ಟರ ಮುಟ್ಟ ನೋಡ್ದ ಗಂಡ್‌ಗಳ್‌ಂದ ಇಂವ ತೀರಾ ಬೇರೆಯಂವ ಆಗುಟ್ಟೂಂತ ಅದ್ ಹೇಳಿಕಂಡತ್. ಯಾರ್‌ಗೆ ಯಾಗ ಏನ್ ಬೇಕ್ ಎಂಬುದರ ಅರ್ತ ಮಾಡಿಕಂಬಕೆ ಅಂವಂಗೆ ಆದೆ. ಇಂವನಂತಂವ ನಿಜಲಿನೂ ಎಜಮಾನ ಆಗಿರೋಕು. ಈ ಸಣ್ಣ ಗಿರಿಗೆ ಅಲ್ಲ ದೇಸಕ್ಕೇ ಎಜಮಾನ ಆಗಿ ಇರೊಕು. ಇಲ್ಲರೆ ದೇಸನ ಆಳೋವು ಇಂವನ ಹಾಂಗೆ ಇರೊಕು. ಅಂವನ ಮೆಚ್ಚಿಕಂಡ್ ಅಂಬೆ ಹೇಳ್ತ್.

"ಗಿರಿನಾಯಕಾ, ನೀ ಉಡ್ಗೆ ಕೊಟ್ಟದ್ ಒಳ್ಳದಾತ್. ಆದರೆ ಆ ದೊಡ್ಡ ಉಪ್ಪರಿಗೆಲಿ ಒಬ್ಬಂಗೇ ಇರಿಕೆ ಒಳ್ಳದಾದ್ಲೆ. ಒಂದು ಗೂಡೆನನೋ, ಹೆಂಗ್‌ಸ್‌ನನೋ ನಂಗೆ ಜೊತೆಲಿ ದೋಸ್ತಿ ಆಗಿರಿಕೆ ಕಳ್ಸಿಯನೋ? ಆಗ ಒಬ್ಬಳೇ ಇರ್ದು ಕಳ್ದದೆ. ನಿನ್ನ ಬಾಸೆನನೂ ಕಲ್ಯೋಕೂಂತ ಆದೆ. ಅರಮನೆಂದ ಬೇರೆ ಆದ ಬೊದ್‌ಕ್‌ನ ಒಂದೆರ್ಡ್ ದಿನ ಬಾಳೊಕೂಂತ ನನ್ನ ಮೊನ್ಸ್ ಹೇಳ್ದೆ. ಮುಂದೆದರ ಮತ್ತೆ ಏಚನೆ ಮಾಡ್ರೆ ಆತ್‌ಂತ ನೆನ್ಸಿಯಳೆ."

ಗಿರಿನಾಯಕ ಕಳ್ಸಿದ ಗೂಡೆನ ಹೆಸ್ರ್ ಸೇವಂತಿ. ನೋಡಿಕೆ ಮೊರ್ಲಿತ್ತ್. ಕನ್ನೆ ಗೂಡೆ

ಆಗಿತ್. ಹದಿನಾರೋ ಹದಿನೇಳೊ ವೊರ್ಸ ಆಗಿರ್ದು. ಲಕಲಕ ಹೊಳ್ಯತಿತ್. ಮೋರೆಲಿ ನೆಗೆ ಕೊಣ್ಯತಿತ್. ಗಿರಿನಾಯಕನ ಅಯ್ಯೆನ ಹಕ್ಕಲೆ ಇರುವ ನಗಗಳಸ್ಟ್ ಅಲ್ಲರೂ ಕೆಬಿ ಮತ್ತೆ ಎದೆ ಇರ್ದೇ ನಗಗಳ ಹಾಕಿಕೇಂತೇಳಿನೇ ಎಂತ ತಿಳ್ದವುಳು. ಅಂಬೆನ ಬಾಸೆ ಸೇವಂತಿಗೆ ಅರ್ತ ಆಗ್ತಿತ್ಲೆ. ಮುಗುಳು ನೆಗೆ ಒಂದೇ ಅದರ ಬಾಸೆ. ಬಾರೀ ಪೊರ್ಲುನ ಗೂಡೆ ಇದ್ ಯಾರಾದರ್ ಒಬ್ಬ ಕ್ಷತ್ರಿಯನ ಕಣ್ಣ್‌ಗೆ ಬಿದ್ದರೆ ಎಳ್ಕೊಂಡೋಗಿ ಅದರ ದಾಸಿನ ಆಗಿ ಮಾಡಿ ಬುಡ್ತಿತ್. ಇಲ್ಲರೆ ಇದೇ ಗಿರಿನ ಯಾರಾದರ್ ಒಬ್ಬ ಗುಗ್ಗುನ ಮೊದುವೆ ಆಗಿ ಹೆತ್ತ್ ಹೆತ್ತ್ ಹುಟ್ಟಿದ ಜಾಗೆಲೇ ಸತ್ತ್ ಹೋಗ್ತಿತ್.

ಅಂಬೆ ಆ ಗೂಡೆನನೇ ದಿಟ್ಟಿಸಿ ನೋಡಿಕನ ಗಿರಿನಾಯಕ ಹೇಳ್ತ್. 'ಇದ್ ನನ್ನ ಹೆಣ್ಣ್ ಮಲ್ಲಿಗೆನ ತಂಗೆ. ನಾಕ್ ವೊರ್ಸ ಹೆಣ್ಣ್‌ನ ಸುಕನ ಪಡ್ದಂವ ನಾ. ನಾವು ಒಟ್ಟಾಗಿ ಸುತ್ತದ ಕಾಡ್, ಹತ್ತದಬೆಟ್ಟ, ಸುತ್ತುಮುತ್ತೋಳೂ ಎಲ್ಲಿಸಾ ಇಲ್ಲೆ. ಈ ಕೆರೆಲಿ ನಾವು ಎಸ್ಟ್ ಸರ್ತಿ ಈಜಿಯೊಳೊನೋ? ಅದ್ ನನ್ನಂದಳೂ ಹೆಚ್ಚ್ ಹೊತ್ತ್ ನೀರ್‌ಲಿ ಮುಣ್‌ಂಗಿತಿತ್. ಒಂದು ದಿನ ಈ ಸೇವಂತಿ ಮತ್ತೆ ಇನ್ನೊಂದು ಗೂಡೆನೊಟ್ಟಿಗೆ ಈಜಿಕೊಂಡು ಇದ್ದೋಳು ಇದ್ದಕಿದ್ದ ಹಾಂಗೆ ಮುಣ್‌ಂಗಿ ಬುಟ್ಟತ್. ಆ ಮೇಲೆ ಒಮ್ಮೆಲೇ ನೀರ್‌ಂದ ತಲೆ ಎತ್ತಿ, "ನನ್ನ ಕಾಲ್‌ನ ಮೊಸಳೆ ಕಚ್ಚಿಕೊಂಡುಟ್ಟು ಬೇಗ ಬುಡ್ಸಿ"-ಎಂತ ಬೊಬ್ಬೆ ಹಾಕಿತ್. ಅದರೊಟ್ಟಿಗೆ ಈಜ್‌ತಿದ್ದೋವು ಜೂವದ ಹೆದ್ರಿಕೆಂದ ಓಡಿ ಬಂದೊ. ನಾ ನಗರಕ್ಕೆ ಹೋಗಿದ್ದೆ. ಇಲ್ಲಿದ್ದ ಹೊಂತಗಾರ ಗಂಡ್‌ಗ ಕೈಲಿ ಆಯ್ದ ಹಿಡ್ಕಂಡ್ ನೀರ್‌ಲಿ ಮೊಸಳೆನ ಬೆನ್ನಟ್ಟಿದೊ. ಮೊಸಳೆನ ಕೊಂದ್ ಅದರ ಬುಡ್ಸಿ ತಂದೊ. ಅಸ್ಟೊತ್ತಿಗೆ ಅದರ ಸಾಸಕೋಸಲಿ ನೀರ್ ತುಂಬಿಕಂಡ್‌ದರ್‌ಂದ ಅದರ ಒಳ್ಸಿಕಂಬಕೆ ಆತ್ಲೆ. ಕೆರೆಲಿ ಅಸ್ಟ್ರಮುಟ್ಟ ಮೊಸಳೆನ ನಾ ಕಂಡಂವ ಅಲ್ಲ. ಈಗ ಸಾ ಕೆರೆಲಿ ಮೊಸಳೆ ಇಲ್ಲೆ. ಅಂದ್ ಅದ್ ಎಲ್ಲಿ ದಾರಿ ತೊಪ್ಪಿದ್ ಬಂದ್ ಸೇರಿಕಂಡತೋ ಅದರ ಜೂವ ತಿಂಬಕೆ? ಅದರ ನೆಂಪುಲೇ ದಿನ ಕಳ್ದನೆ. ಸೇವಂತಿನ ಮೊದುವೆ ಮಾಡಿಕಾಂತ ಇದರ ಅವ್ವ, ಅಪ್ಪ ಒತ್ತಾಯ ಮಾಡಿವೆ. ನಾ ಎತ್ತಿ ಆಡಿಸಿದ ಕೂಸು ಇದ್. ಇದರ ಅಕ್ಕನ ಜಾಗೆಲಿ ನೋಡಿಕೆ ನಂಗಾದ್ಲೆ. ನಿಜ ಹೇಳೊಕೂಂತೇಳ್ರೆ ಮೊದುವೆ ಆದು ಮತ್ತೆ ಮಕ್ಕಳ ಪಡ್ಯೋದು ಒಂದ್ ಸಾಧನೇಂತ, ಅದ್ ಬೇಕೇ ಬೇಕ್‌ಂತ ನಾ ತಿಳ್ಕಂಡಂವ ಅಲ್ಲ. ಆಗಾಗ ಅದರ ನೆಂಪು ನನ್ನ ಕಾಡ್ದರ ಬುಟ್ಟರೆ, ನಾ ಸುಕಳೇ ಒಳೆ."

ಅಂಬೆಗೆ ಗಿರಿನಾಯಕನ ಬೊದ್ಕ್‌ಲಿ ಅಂತದೊಂದು ಬೇನೆ ತರ್ಪ ಕತೆ ಇರ್ದೊಂತ ಊಹನೆ ಸಾ ಇತ್ಲೆ. ಆಗಂದ ಅಂವನ ಮೋರೆಲಿ ನೆಗೆನನೇ ಅದ್ ಕಂಡಿತ್. ಇಂತಾದೊಂದ್ ಬೇಜಾರದ ಸಂಗತಿನ ಹೇಳಿಕಾಕನ ಅಂವನ ಕಣ್ಣ್‌ಲಿ ನೀರ್ ಬಾತ್ಲೆ. ಸೊರ ನಡ್ಗಿತ್ಲೆ. ಕಾಶಿಲಿ ಅಪ್ಪನ ಆಸ್ಥಾನಕ್ಕೆ ಬಂದ್, ಅಂವಂಗೆ ಅಡ್ಡಬಿದ್ದ್ ತಮ್ಮ ಗೋಳ್‌ನ ಕತೆನ ಹೇಳೋವರ ಅದ್ ತುಂಬಾ ಜನಂಗಗಳ ನೋಡಿಟು. ಲೋಕಲಿರುವ ಎಲ್ಲಾ ಕಸ್ಟಗ ತಮಿಗೆ ಮಾತ್ರ ಬಂದದ್‌ಂತ ಹೇಳಿಕಂಡ ಜನಂಗ ಅವು. ಹೆಚ್ಚಿನೊಕ್ಕೆ ಇದ್ದ ಸೊರಲಿ ತಮ್ಮ ಬೇನೆಗಳ ಹೇಳಿಕಂಬಕೆ ಗೊತ್ತಿರ್ದುಲ್ಲೆ. ಮೆಲ್ಲಂಗೆ ಸುರು ಮಾಡ್ಡೋವು ಅಕೆರಿಗೆ

ದೊಡ್ಡ ದನಿಲಿ ಮೊರ್ಟ್‌ಕಂಡ್ ಬೇಜಾರ ಪಡ್ಸುವ ಜನಗ ಎಲ್ಲಿ? ಇಂವ ಎಲ್ಲಿ? ಇಂವನ ಮೋರೆಲಿ ಈಗ ಸಾ ನೆಗೆ ಉಟ್ಟು. ಜವ್ವಂತಿಕೆಗೆ ಜೂವ ಬಂದಾಂಗೆ ನೆಗಾಡುವ ಸೇವಂತಿನೂ ಅಂವನೊಟ್ಟಿಗೆ ನೆಗಾಡ್ದೆ. ಇದ್ ಈ ಗಿರಿನಾಯಕನ ಮೊದುವೆ ಆದರೆ, ಇದರ ಮೋರೆನ ನೆಗೆ ಹೀಂಗೆನೇ ಒಳ್ಯೋದೋ? ಒಳ್ಯಕೂ ಸಾಕ್. ಇವು ಬೊದ್‌ಕ್ ಹೀಂಗೇನೇ ಇರೊಕೂಂತ ಬಯಸೋವು ಅಲ್ಲ. ಹೇಂಗೆ ಬಂದದೆನೋ ಹಾಂಗೆ ಅದರ ಪಡ್ಯೋವು. ಅದ್ಕೇ ಇವ್ಕೆ ಯಾಗೋಳೂ ನೆಗಾಡಿಕಂಡ್ ಇರಿಕೆ ಆದೆ. ಮೊನ್ನಿಗೆ ಹಿಡ್ಸಿದಂವನ ಗಂಡಾಂತ ಪಡ್ಯವ ಪ್ರಯತ್ನಲಿ ನಂಗೆ ಗೆಲುವು ಸಿಕ್ಕಿತ್ಲೆ. ಈ ಸೇವಂತಿನ ಹಾಂಗೆ ಇರ್ತಿದ್ದರೆ ತನಿಗೂ ಅದರಾಂಗೆ ನೆಗಾಡಿಕೆ ಆಗ್ತಿತ್ತೋ ಏನೋ? ಎಂತ ಅಂಬೆಗೆ ಆತ್. ಆದರೆ ಬೊದ್‌ಕ್‌ನ ಮುಂದೆನೇ ನಿಚ್ಚಯ ಮಾಡ್ದ್‌ಂತ ಹೇಳಿಕಂಡ್ ಅದ್ ಯೋಗ ಇಲ್ಲರೆ ಹಣೆಬರಾಂತ ಹೇಳಿಕಂಡ್ ಇದ್ದೋವು ಸುಕಲಿ ಇದ್ದವೆನೋ? ಅವರ ಮೊನ್ಸ್‌ನ ಬೊಗ್ಸ್‌ದ್ ಹುಡ್ಕುದು ಹೇಂಗೆ?

ಇಂತಾ ಏಚನೆಂದ ಸದ್ಯಕ್ಕೆ ಏನ್ ಸಾ ಪ್ರಯೋಜನ ಇಲ್ಲೇಂತ ನೆನ್ಸಿಕಂಡ್ ಅಂಬೆ ಹೇಳ್ತ್. "ಗಿರಿನಾಯಕಾ, ಸೇವಂತಿನ ನೋಡಿಕಾಕನ ನಂಗೆನಾ ಗಂಡಾಗಿರಕಾತ್‌ಂತ ಎನ್ಸಿದೆ. ಒಳ್ಳೇ ದೋಸ್ತಿನನೇ ನಂಗೆ ಕೊಟ್ಟಳ. ಬೇಗ ಮಿಾದ್ ಬನ್ನೆ. ಇರ್ಳ್‌ಗೆ ತಿಂಬಕೆ ಏನಾದರ್ ಕೊಟ್ಟು ಬುಡು. ನಂಗೇಂತ ಬೇರೆ ಏನ್ ಸಾ ಮಾಡ್ದುಬೇಡ. ನೀವು ತಿಂಬೊದು ಎಲ್ಲನೂ ನಂಗಾದೆ. ಮಾಸ ಸಾ. ಮಾಸ ಆದರೆ ಯಾವುದರ ಮಾಸಾಂತ ತಿಳ್ಸಿಬುಡು. ನಂಗೆ ನಿಮ್ಮ ಹಾಂಗೆ ಬೊದ್ಯೋಕೂಂತ ಆದೆ."

ಗಿರಿನಾಯಕ ತಲೆ ಹಂದಾಡ್ಸಿ ಅಡ್ಗೆ ಕೋಣೆ ಕಡೆ ಹೋತ್. ಅಂಬೆ ಸೇವಂತಿನ ಕರ್ಕಂಡ್ ಮನೆ ಹಿಂದೆ ಇದ್ದ ಮಿಾವ ಕೋಣೆಲಿ ಮಿಾದ್ ಬಾತ್. ಬಿಸ್ನೀರ್ ಮೈಗೆ ಬೀಳಿಕನ ಅದ್ಕೆ ಅಸ್ಟ್ ದಿನದ ಆಯಾಸ ಎಲ್ಲಾ ಪರ್ರ್ಯಾರ ಆತ್. ಉಪ್ಪರಿಗೆಲಿ ಅದರ ಎದ್‌ರ್ ನಾರ್ ಉಡ್ಗೆನ ಒಂದು ರಾಸಿನೇ ಇತ್ತ್. ಅದರ್ಲಿ ಒಳ್ಳದರ ನೋಡಿ ತೆಗ್ದ್ ಉಟ್ಟ್‌ಕಂಡತ್. ಕೈ ಬೊಟ್ಟಿದ್ ಕುಸಿಂದ ಸೇವಂತಿ ಒಳ್ಳೆದುಟ್ಟೂಂತ ಸನ್ನೆ ಮಾಡಿ ತೋರ್ಸಿತ್. ಅಂಬೆ ಅಸ್ಟರಮುಟ್ಟ ಹಾಕಂಡ್ ಇದ್ದ ಅರ್ವೆನ ಸೇವಂತಿ ಹೇಸಿಕಣದೆ ತೆಗ್ದಿಸಿತ್. ಅದರ ನಾಳೆ ಸೇವಂತಿನೇ ಒಗ್ದ್ ತಾದೂಂತ ಅಂಬೆ ನೆನ್ಸಿತ್.

ಇರ್ಳ್ ತುಂಬಾ ಹೊತ್ತ್ ಅಂಬೆ ಸೇವಂತಿಗೆ ಸಂಸ್ಕೃತ ಬಾಸೆನ ಕಲ್ಸಿಕೆ ಪ್ರಯತ್ನ ಮಾಡ್ತ್. ಕೈನ ತೋರ್ಸಿ ಹಸ್ತ ಎಂತ ಹೇಳಿಕನ ಅದಕ್ಕೆ ಸೇವಂತಿ ಅದರ ಬಾಸೆಲಿ ಸರಿ ಆದ ಪದನ ಹೇಳ್ತ್. ಸರೀರದ ಎಲ್ಲಾ ಅಂಗಗಳ ಸೇವಂತಿನ ಬಾಸೆಲಿ ಹೇಳ್ದು ಹೇಂಗೇಂತ ಅಂಬೆ ಕಲ್ತ್‌ಕಂಡತ್. ಹೇಲ್, ಉಚ್ಚೆ ಹೊಯ್ಯುವ ಜಾಗೆನ ಅರ್ತ ಹೇಳಿಕನ ಸೇವಂತಿಗೆ ತುಂಬಾ ನಾಚಿಕೆ ಆತ್. ಅಂಬೆಗೆ ನಗಗಳ ಮುಟ್ಟಿ ಮುಟ್ಟಿ ಸೇವಂತಿ ಕುಸಿ ಪಟ್ಟದೆ. ಅಂಬೆ ತನ್ನ ಮೈಮೇಲೆನ ನಗಗಳ ಹೆಸ್ರ್ ಹೇಳಿಕನ, ಸೇವಂತಿ ಅದರ ಸರೀರದ ಮೇಲೆ ಇದ್ದ ನಗಗಳ ಹೆಸ್ರ್ ಹೇಳ್ತ್. ಗಿರಿನಾಯಕನ ಮೊದುವೆ ಆದಿಯನಾಂತ ಕೇಳಿಕನ ಇಲ್ಲೇಂತ ತಲೆ ಹಂದಾಡ್ಸಿ ಸನ್ನೆಲಿ ಹೇಳಿ ಕುಲು ಕುಲು ನೆಗಾಡ್ತ್.

ಅದ್ ನೆಗಾಡಿಕಾಕನ ಸುತ್ತೋಳೂ ಹೊಸ ಜೂವ ಮೂಡ್‌ದಾಂಗೆ ಕಾಂಬತಿತ್ತ್. ಓದು–ಬರ ತಿಳ್ದ ರಸಿಕ ಒಬ್ಬ ಇದರ ನೋಡ್ರೆ ಲಾಯ್ಕ್‌ನ ಪದ್ಯ ಬರ್‍ಯದೆ ಇರಿಕಿಲ್ಲೆಂತ ಅಂಬೆಗಾತ್. ಅದರ ಅಪ್ಪನ ಆಸ್ತಾನಲಿ ಇರ್‍ವ ಕವಿಗಳ ನೆಂಪಾತ್. ಅಪ್ಪನ ಮೇಲೆ, ಕಾಶಿ ವಿಶ್ವನಾಥನ ಮೇಲೆ, ಗಂಗಾನದಿನ ಮೇಲೆ ಪದಗಳ ಬರ್ದ್ ಅಪ್ಪನ ಕೈಂದ ಚಿನ್ನದ ಬಳೆ, ಜರಿ ಸೀರೆ ಪಡ್ಕಂಬಕೆ ಅವರ ನೊಡುಲಿ ಆಗಾಗ ಪೈಪೋಟಿ ನಡ್ಯತಿತ್ತ್. ಬೇರೆ ವಸ್ತುಗ ಅವುಕೆ ಪದ ಬರ್‍ಯಕನ ಉಡ್ಗರೆ ತಕಂಬಕೆ ಯಾಕೆ ಹೊಳ್ಯೊದಿಲ್ಲೆನೋ? ಎಂತ ಎಸ್ಟೋ ಸರ್ತಿ ಅಂಬೆಗಾಗ್ತಿತ್ತ್. ಅವು ಬರ್ದ ಪದಗ ಕಾವ್ಯಗಾಂತ ಅದ್ಕೆ ಒಮ್ಮೆನೂ ಅನ್ನಿಸ್ತೆ. ಆಸ್ಥಾನ ಕವಿಗಳ್ಲಿ ಇಬ್ಬೊರು ಹೆಣ್ಣ್‌ನ ಬಗ್ಗೆ ರಸವತ್ತಾದ ಕಾವ್ಯನ ಬರ್‍ಯತಿದ್ದೊ. ಅದ್ ಸತ್ಯಕ್ಕೆ ದೂರದ ಮಾತ್‌ಂತ ಅದ್ಕೆ ಅನ್ನಿದರ್ ಸಾ, ಅದರ ಓದಿ ಕುಸಿಪಡ್ತಿತ್ತ್. ಇಸ್ಟ್ ಲಾಯ್ಕ್‌ನ ಪದಗಳ ಹೇಂಗೆ ಬರ್ದರೀಂತ ಅದ್ ಕವಿಗಳ ಕೇಳ್ತಿತ್ತ್. ಒಬ್ಬ ಹೇಳ್ತ್, ತಾನ್ ಕಾಡ್, ಗುಡ್ಡಲಿ ಸಂಚಾರ ಮಾಡಿ ಪ್ರಕೃತಿಂದ ಮತ್ತೆ ಗಿರಿಕನ್ನೆಗಳ್‌ಂದ ಹುರ್ಪು ಪಡ್ದ್ ಬರ್ದನೇಂತ. ಇನ್ನೊಬ್ಬ ಹೇಳ್ತ್ ತಾನ್ ಗಂಗಾನದಿನ ದಂಡೆಲಿರುವ ದ್ಯಾನ ಮಂಟಮೆಲಿ ಕುದ್ದ್‌ದ್ ನದಿಲಿ ಪಾಪ ತೊಳ್ಕಂಬಕೇಂತ ಮುಣ್‌ಂಗುವ ಜವ್ವಂತಿ ಗೂಡೆಗಳ ಮೈ ಮಾಟನ ನೋಡಿ ಕಾವ್ಯನ ಬರ್ದನೇಂತ. ಅವು ಜರಿ ಶಾಲ್ ಮತ್ತೆ ಚಿನ್ನದ ಕಡಗಕ್ಕೆ ಬೇಕಾಗಿ ಕಾವ್ಯ ಬರೆದವರ್‌ಂದ ಮೇಲೇಂತ ಅದ್ ನೆನ್ಸ್‌ತಿತ್ತ್. ಆದರುನೂ ಒಂದು ಸಂಸಯ ಅದರಕ್ಕಲೆ ಒಳ್ದಿತ್ತ್. ಹೆಣ್ಣ್‌ಗಳ್‌ಂದ ಹುರ್ಪು ಪಡ್ದ್ ಕಾವ್ಯ ಬರ್‍ಯವು ಅದರ ಸರೀರದ ಮೇಲೆ ಮಾತ್ರ ಬರ್ದವೆ. ಅದರ ಮೊನ್ಸ್‌ನ ಹೊಕ್ಕ್ ಯಾರ್ ಸಾ ನೊಡ್ತುಲ್ಲೆ. ಈ ಇಸಯಕ್ಕೆ ಕಾರ್‍ಣ ಏನ್? ಅದರ್‌ಂದ ಏನ್ ಪ್ರೋಜನ ಇಲ್ಲೇಂತಳೋ ಹೇಂಗೆ? ಕಾವ್ಯ ಬರ್‍ಯೊವುಕೆ ಶಾಸನ ಬರ್‍ಯೆವ ಅಧಿಕಾರ ಇಲ್ಲೇಂತನೋ ಹೇಂಗೆ? ಆದರೆ ಸಾಸನ ಮಾಡೋವ್ಕೆ ಇರುವ ಹಾಂಗೆ ಕವಿಗಳಿಗುನೂ ಹೆಣ್ಣ್ ಒಂದು ಸಾಧನ ಮಾತ್ರನೋ ಹೇಂಗೆ? ಹಿಂಗೆಯೇ ಏಚನೆ ಮಾಡಿಕಂಡಿರಿಕಾಕನ ಅದ್ಕೆ ನಿದ್ದೆ ಬಂದದೇ ಗೊತ್ತಾತ್ಲೆ.

ಬೊಳ್ಪುಗೆ ಹೊತ್ತು ಏರ್‍ದ ಮೇಲೆ ಎದ್ದ ಅಂಬೆ ಬಾಳ ಕುಸಿಲಿತ್ತ್. ಸೇವಂತಿ ಮನೆಲಿ ಕಟ್ಟಿ ಹಾಕಿಕಂಡ್ ಇದ್ದ ದನ ಕರ್‌ಗಳ, ಏಡ್‌ಗಳ ಬೊಳ್ಳಿ ಬಿಚ್ಚಿದ್ ಹೊರಗೆ ಬುಡ್ತಿತ್ತ್. ಹೊರಗೆ ದನಂಗಳ ಮತ್ತೆ ಏಡ್‌ಗಳ ಒಟ್ಟಿಗೆ ದನ ಮೇಸುವ ಮೇಪತ ಹೈದಂಗ ಕಾಯೊತಿದ್ದೊ. ಅಂಬೆನ ನೋಡಿ ಗಿರಿನಾಯಕ ಹೇಳ್ತ್ "ಕೆರೆನ ಸುತ್ತೋಳೂ ಬಾಳಹುಲ್ಲು ಬೆಳ್ದುಟು. ಮೇಪತಹೈದಂಗ ಮದ್ಯಾನಮುಟ್ಟ ಇಲ್ಲಿನೇ ಮೇಸುವೆ. ಮತ್ತೆ ಅವರವರ ಮನೆಗೆ ದನಂಗಳ ಮತ್ತೆ ಏಡ್‌ಗಳ ಕ್ಷೇಮಲಿ ಮುಟ್ಟುಸುವೆ. ನೀವು ಬೇಗ ಬೊಳ್ಪುನ ಕೆಲ್ಸಗಳ ಮಾಡ್ತಿದ್ದರೆ, ಮೇಪತರ ಒಟ್ಟಿಗೆ ಹೋಗಿ ಬರಕ್. ಬೊಳ್ಪುನ ತಿನ್ಸ್‌ನ ಸೇವಂತಿ ಕಟ್ಟಿಕಂಡ್ ಬಾದು."

ಅಂಬೆ ಹೊರ್‍ಟತ್. ಮೇಪತ ಹೈದಂಗ ಪೊರ್ಲುನ ಸೊರಲಿ ಹಾಡಿಕಂಡ್ ದನಂಗಳ ಕೆರೆ ಸುತ್ತ ಮೇಸಿಕನ ಗಿರಿನಾಯಕ ಹೇಳ್ತ್. "ರಾಜಕುಮಾರಿ, ಬಾಳ ಕುಸಿಲಿ ಒಳರಿ. ಸೇವಂತಿ ನೀವ್ಗೆಹಿಡ್ಸಿರೊಕು. ಅದರಕ್ಕಲೆ ಮಾತಾಡಿಕೆ ನೀವ್ಗೆ ಆತೋ?"

ತನಿಗೆ ತಿಂಬಕೆ ತಕಂಡ್ ಬಾತಿದ್ದ ಸೇವಂತಿನ ಕೈನ ಹಿಡ್ಕಂಡ್ ಅಂಬೆ ಹೇಳ್ತ್. "ಗಿರಿನಾಯಕಾ, ನಂಗೆ ಈ ಸೇವಂತಿ ಎಸ್ಟ್ ಸಬ್ದಗಳ ಹೇಳಿಕೊಟ್ಟಿತ್? ನಾ ಈಗ ಮ್ಯೊಂಸನ ಅಂಗಾಂಗದ ಹೆಸ್ರ್‌ಗಳ ನಿನ್ನ ಬಾಸೆಲಿ ಹೇಳುಂವೆ. ಇದಕ್ಕೆ ಹಂಞ ಸಂಸ್ಕೃತಪದನ ಹೇಳಿಕೊಟ್ಟಳೆ. ನೀ ಕಾಶಿಗೆ ಹೋಗಿ ಹೇಂಗೋ ಸಾಸ್ತ್ರ ಅಬ್ಬೆಸ ಮಾಡಿ ಬಂದ. ಈ ಜನಂಗಳಿಗೆ ಅದರ ನಿದಾನಲಿ ಕಲ್ಸ್. ಹೊರಗೆನ ಲೋಕ ಹೇಂಗುಟ್ಟೊಂತ ಅದ್ಕೆ ಗೊತ್ತಾಗಲಿ."

ಗಿರಿನಾಯಕ ತಲೆದೂಂಗಿತ್. ಅವು ಮೂರ್ಜನ ಒಂದ್ ಕಡೆ ಕುದ್ದ್‌ದ್ ತಿಂಡಿ ತಿಂದೊ. ಕೆರೆನ ನೀರ್‌ನ ಕುಡ್ದೊ. ಅಂಬೆಗೆ ಕೆರೆ ಈಜುವ ಮೊನ್ಸಾತ್. "ಗಿರಿನಾಯಕಾ, ನಾ ಮತ್ತೆ ಸೇವಂತಿ ಕೆರೆಲಿ ಈಜುವೆ. ನೀ ನಿನ್ನ ಕೆಲ್ಸನ ನೋಡಿಕ."

ಅದ್ ಹೇಳ್ದ ಮಾತ್‌ನ ರೀತಿ ಅಂವಂಗೆ ಅರ್ತ ಆಗಿ ಗಿರಿನಾಯಕ ಹೇಳ್ತ್. "ರಾಜಕುಮಾರೀ, ನಾವು ಈಜಿಕನ ಗಂಡ್, ಹೆಣ್ಣ್ಂತ ಬೇದಬಾವ ಮಾಡ್ದುಲ್ಲೆ. ಒಟ್ಟ್‌ಲಿ ಈಜಿಕನ ನಾವು ಮೊನ್ಸ್‌ಲಿ ಕೆಟ್ಟದರ ಏಚನೆ ಮಾಡ್ದುಲ್ಲೆ. ಬರೇ ಸೃಷ್ಟಿ ಕಾರ್ಯಕ್ಕೆ ಮಾತ್ರಾ ನಾವು ಗಂಡ್ ಹೆಣ್ಣ್ಂತ ತಿಳ್ಕಂಡವೆ. ಸಂಕೋಚ ಮಾಡ್ಬೊಡಿ. ಗಂಡ್‌ಗ ಈಗ ಕೆರೆಲಿ ಈಜುದುಲ್ಲೆ. ನೀವು ಎಸ್ಟ್ ಹೊತ್ತ್ ಬೇಕರೂ ಈಜಿನಿ."

ಅಂಬೆ ಸೇವಂತಿನೊಟ್ಟಿಗೆ ಕೆರೆಗೆ ಇಳ್ಯಕಾಕನ ಗಿರಿನಾಯಕ ಮನೆಗೆ ಹೋತ್. ಅಂಬೆ ಮೊನ್ಸ್ ಬಂದಾಂಗೆ ಈಜಿತ್. ತನ್ನಂದಲೂ ಸೇವಂತಿ ಬಾಳ ದೊಡ್ಡ ಈಜ್‌ಗಾರ್ತಿಂತ ಅದ್ಕೆ ಗೊತ್ತಾತ್. ಈಜಿಕನ ಅದ್ಕೆ ಗಿರಿನಾಯಕನ ಹೆಣ್ಣ್‌ನ ನೆಂಪಾತ್. ಅದ್ ಈ ಸೇವಂತಿನ ಹಾಂಗೆ ಇದ್ದಿರ್ದು. ನಾಕ್ ವೊರ್ಸ ಸಂಸಾರ ಮಾಡ್ದೇಂತ ಗಿರಿನಾಯಕ ನಿನ್ನೆ ಹೇಳಿತ್ತ್. ಈಗ ಅಂವಂಗೆ ಹೆಣ್ಣ್ ಬೇಕ್‌ಂತ ಆದುಲ್ಲೆನೋ? ನೋಡಿಕೆ ಬಾಳ ಪೊರ್ಲು ಉಟ್ಟು. ಹೆಣ್ಣ್ ಬೇಕ್‌ಂತ ಎನ್ನಿರೂ ಈ ಸೇವಂತಿನ ಮೊದ್ವೆ ಆಕಿಲ್ಲೆ. ಮುಂದೆನ ಜೂವನನ ಒಬ್ಬನೇ ಕಳ್ದದೆನೋ? ಹೆಣ್ಣ್‌ನ ಸಂಗ ಇಲ್ಲದೆ ಬೊದ್ಕುದು ಸುಲಬನೋ? ಆದರೆ ಭೀಷ್ಮಾಚಾರ್ಯರ್‌ಂದ ಅದ್ ಸಾದ್ಯ ಆಗುಟ್ಟು. ಮ್ಯೊಂಸ ಒಂಟಿ ಆಗಿ ಹುಟ್ಟಿದೆ. ಹುಟ್ಟಿಕನನೂ ಒಬ್ಬನೇ ಸಾಯಕನನೂ ಒಬ್ಬನೆ. ಆದರೆ ಒಂಟಿ ಆಗಿ ಬೊದ್ಕಿಕೆ ಏಕೆ ಆದುಲ್ಲೆ? ಅದರ ಮಾಡಿ ತೋರ್ಸೋಕು.

ಈಜಿಕಂಡ್ ಈಜಿಕಂಡ್ ಅದ್ ಸೇವಂತಿಗೆನ ಹಕ್ಕಲೆ ಹೋಗಿ ಸನ್ನೆ ಮಾಡಿ ಬೆನ್ನುಜ್ಜಿಕೆ ಹೇಳ್ತ್. ಸೇವಂತಿ ಬೆನ್ನುಜ್ಜಿತ್. ಕೈಗೆ ತಾಂಗದ, ಬೆನ್ನ್‌ನ ನೊಡುಲಿ ಇದ್ದ ಕಪ್ಪು ಕೊಳೆನ ಅಂಬೆನ ಮೋರೆ ಹಕ್ಕಲೆ ತಂದ್ ತೋರ್ಸಿತ್. ಸಣ್ಣಂವ ಇರಿಕನ ಅವ್ವ ತನ್ನ ಬೆನ್ನ್ ಉಜ್ಜುತಿದ್ದದ್ ಅಂಬೆಗೆ ನೆಂಪಾತ್. ಹೊಂತಗಾರಳ್ ಆದ ಮೇಲೆ ದಾಸಿ ಜನಂಗ ಅದರ ಬೆನ್ನ್‌ನ ಉಜ್ಜುತಿದ್ದೊ. ಸೇವಂತಿನ ಪರ್ಚಯ ನಿನ್ನೆ ತಾನೆ ಆದ್. ಆದರ್ ಸಾತ್ ಅದ್ ಹಕ್ಕಲೆನ ದೋಸ್ತಿನ ಹಾಂಗೆ ಇದರ ಬೆನ್ನ್‌ನ ಉಜ್ಜುತಿತ್ತ್. ಬೆನ್ನ್‌ಲಿ ಇರ್ವ ಮೊಣ್ಣ್‌ನ ನೋಡಿ ಅದ್ಕೆ ಹೇಸಿಗೆ ಆತ್ಲೆ. ಪ್ರೀತಿ ಇದ್ದರೆ ಮಾತ್ರ ಅದ್ ಆದು.

ಅಂಬೆಗೆ ಸಾಲ್ವ ಭೂಪತಿನ ನೆಂಪಾತ್. ಕಾಶಿನ ಉಪವನದ ಕೆರೆ ಹಕ್ಕಲೆ ಆದ

ಅಂವನ ಸುರುನ ದರ್ಸನ ಅದರ ಬಾಳ್‌ಲಿ ನಡೆವ ದಿಕ್ಕ್‌ನನೇ ಬದ್ಲಾಯ್ಸಿ ಬುಟ್ಟಿತ್. ಅಂವ ತನ್ನ ಕೈ ಹಿಡ್ಯತಿದ್ದರೆ ಸೌಭದೇಸಂದ ಅಸ್ಟ್ ಕೆರೆಗಳ್‌ಲಿ ಒಟ್ಟಿಗೆ ಈಜಕಾತ್‌ಂತ ಅದ್ಕೆ ಆತ್. ಅಂವಂಗೆ ಭಾಗ್ಯ ಇಲ್ಲೆ. ಹೋಗಲಿ ಇನ್ನ್ ಅಂವನ ನೆನ್ಸಿಕಾಗದ್. ನನ್ನ ಮೊನ್ಸ್‌ಂದ ಕಿತ್ತ್ ಹಾಕೊಕು. ಹೆಣ್ಣ್‌ಗೆ ಪ್ರೀತಿನ ಮುಂದೆ ಬೇರೆ ಯಾವ್ದು ಸಾತ್ ಇಲ್ಲೆ. ತನ್ನ ಜೀವನಲಿ ಬಂದ ಸುರುನ ಗಂಡ್‌ನ ಅದ್ ಯಾಗೋಳೂ ಮರ್ಯಕಿಲ್ಲೆ. ಆದರೆ ಆ ಬುದ್ದಿ ಇಲ್ಲದ ಸಾಲ್ವಂಗೆ ಪ್ರೀತಿಂದ ತನ್ನ ಪ್ರತಿಸ್ಟೆ ಹೆಚ್ಚಾತ್.

ಈಜಿಕಂಡಿರಿಕಾಕನ ಅದ್ಕೆ ಕಾಶಿಲಿ ಹರಿವ ಗಂಗಾನದಿನ ನೆಂಪಾತ್. ಈಜಿಕೆ ಸರಿಯಾಗಿ ಬಾರದೊವು ಅದರ್ಲಿ ಮುಣ್‌ಂಗಿ ಸಾಯತಿದ್ದೊ. ಇನ್ನ್ ಕೆಲವು ಜನಂಗ ಸಾಯಕೆಂತೇಳಿನೇ ಅಲ್ಲಿಗೆ ಬಾತಿದ್ದೊ. ಕಾಶಿಲಿ, ವಿಶ್ವನಾಥನ ಸನ್ನಿದಿಲಿ ಗಂಗೆಗೆ ಹಾರಿ ಸಾಯೋವು ಆತ್ಮಹತ್ಯೆ ಮಾಡ್ದು ದೊಡ್ಡ ಪಾಪಾಂತ ಏಕೆ ಏಚನೆ ಮಾಡ್ದುಲ್ಲೆನೋ? ಸತ್ತೇ ಹೋನೇಂತೇಳಿಕಾಕನ ಹೆದ್ರಿಕೆಂದ ಹೇಂಗೋ ಕೈಕಾಲ್ ಬೊಡ್ಕಂಡ್ ಹಂಞ ಜನ ಈಜಿದ್ ಮೇಲೆ ಬಾತಿದ್ದೊ. ಸತ್ತ್ ಹೋಕೂಂತೇಳ್ವ ಇಚ್ಚೆಂದ ಸಾಯುವವರ್‌ಂದ ಈಜಿಕೆ ಗೊತ್ತಿಲ್ಲದೆ ಸಾಯವರ ಸಂಕೆ ದೊಡ್ಡದಿರ್ದು. ಅದ್ಕೆ ಈಜುದರ ಸಕ್ತಿ ಗೊತ್ತಿತ್ತ್. ಸರೀರಕ್ಕೆ ಮೊನ್ಸ್‌ಗೆ ಹೊಸ ಜನ್ಮ ಕೊಡುವ ಸಕ್ತಿ ಅದ್. ಈಜಿಕೆ ಗೊತ್ತಿಲ್ಲದವರ್ದ್‌ನೂ ಒಂದ್ ಬೊದ್‌ಕ್‌ನೋ? ಹಾಂಗೇಂತ ಹೇಳಿಕಂಡ್ ದಣ್ಕೆ ಬಾವವರೆಗೆ ಅಂಬೆ ಈಜಿತ್.

ಮನೆಗೆ ಬಾಕಾಕನ ಅದ್ಕೆ ಬಿಸಿಬಿಸಿಯಾದ ಅಡ್ಗೆ ಕಾದಿತ್ತ್. ಮಾಸದ ತುಂಡು ಇತ್ಲೆ. ಗಿರಿನಾಯಕ ಕಾರಣ ಹೇಳ್ತ್. "ನಿಮ್ಮ ಇಸ್ಟದ್ ಯಾವ್ದೂಂತ ಗೊತ್ತಾಗದಕ್ಕೆನೀವುಗೆ ಇಂದ್‌ಮಾಸ ಇಲ್ಲೆ. ನಾಳೆ ಕಾಡಿಗೆಹೋಕೆ ಏರ್ಪಾಡ್‌ಮಾಡ್ಯಳೆ. ಆಗನೀವ್ಗೆಬೇಕಾದರ ಅಡ್ಗೆ ಮಾಡೊಮೊ."

ಊಟ ಆದ ಮೇಲೆ ಹಂಞ ಹೊತ್ತ್ ಅಂಬೆ ಮೊಲ್ಗಿತ್. ಹಿಂಬೋತ್ ಮಕ್ಕಳ ಎಲ್ಲಾ ಒಟ್ಟಿಗೆ ಸೇರ್ಸಿ ಹೊಸ ಆಟನ ಹೇಳಿಕೊಟ್ಟಿತ್. ದಿನ ಹೋದೇ ಗೊತ್ತಾತ್ಲೆ. ಕತ್ತಲೆಗೆ ಸೇವಂತಿಂದ ಬಾಸೆನ ಕಲ್ತ್‌ಕಂಡ್, ಕಲ್ತ್‌ಕಂಡೇ ಹಾಂಗೇ ನಿದ್ದೆ ಹೋತ್.

ಮೊರ್ದಿನ ಅದ್ ಸೇವಂತಿ ಮತ್ತೆ ಅಲ್ಲಿನ ಮಕ್ಕಳ ಒಟ್ಟಿಗೆ ಮೂಡ್ ದಿಕ್ಕ್‌ಲಿ ಇದ್ದ ದೊಡ್ಡ ಕಾಡ್‌ಲಿ ಸುತ್ತಾಡ್ತ್. ಕೆನ್ನ ನಾಯಿಗ, ಕಿರ್‌ಬಗ, ಹುಲಿಗ, ಚಿರತೆಗ ಮತ್ತೆ ಆನೆಗಳ್‌ಂದ ತೊಂದರೆ ಆಕೆ ಬೊತ್ತ್‌ಂತ ಬಿಲ್ಲ್ ವಿದ್ಯೆಲಿ ಪಳ್ಗಿದ ಹೊಂತಗಾರರ ಗಿರಿನಾಯಕ ಅವರ ಒಟ್ಟಿಗೆ ಕಳ್ಸಿತ್. ಕಾಡ್ ತಿರ್ಗಿಕೆ ಹೊರ್ಡಿಕೆ ಮುಂದೆನೇ "ಕಾಡ್‌ನ ಯಾವಮುರ್ಗಗಳ ತಿಂಬಕೆನೀವ್ಗೆ ಆಸೆ ಆದೆ ರಾಜಕುಮಾರೀ,"– ಎಂತ ಗಿರಿನಾಯಕ ಅದರೊಟ್ಟಿಗೆ ಕೇಳ್ತ್. ಕಾಶಿಲಿ ಅದ್‌ಬೇಕ್‌ಂತೇಳಿಕನಮಾಸನ ತರ್ಸಿಕಂಬತಿತ್ತ್. ಆದರೆ ಇಲ್ಲಿ ಮಾಸಬೇಕೂಂತ ಅದ್ಕೆ ಅನ್ಸಿತ್ಲೆ. ಕಾಡ್, ಗುಡ್ಡ, ಕೆರೆಗಳ್‌ಲಿ ಇಸ್ಟಬಂದಾಂಗೆ ತಿರ್ಗ್‌ತಿದ್ದ ಹಕ್ಕಿ, ಮುರ್ಗಗಳ ಕೊಂದ್ ತಿಂದ್ ಸಂತೋಸಪಡಿಕೆ ಮೊನ್ಸ್‌ನೂ ಒಪ್ಪುತಿತ್ಲೆ. "ಯಾವ್ದುನೂ ಬೇಡ ಗಿರಿನಾಯಕಾ, ಅವುಗ ಸಾ ನಮ್ಮ ಹಾಂಗೆ ಜೂವ ಇದ್ದೋವು. ಅದರ ಜೂವನ ತೆಗ್ಯವ ಹಕ್ಕ್ ನಾವ್ಗೆ ಇಲ್ಲೆ. ಬೇಡ. ಕೊಲ್ಲಿಕೆ ಮೊನ್ಸ್ ಒಪ್ಪುದ್ಲೆ."

ಎಂತಹೇಳ್ತ್. ಅಂವ ಒತ್ತಾಯಮಾಡ್ತಿಲ್ಲೆ. ತನಿಗೆನಗರಲಿ ತುರ್ತು ಕೆಲ್ಸ ಉಟ್ಟೂಂತ, ಕತ್ತಲೆ ಆದರ ಒಳಗೆ ಬಂದನೇಂತ ಹೇಳಿ ಅಂವ ಹೊರ್ಟ್ಹೋತ್.

ಸೇವಂತಿ ಅದ್ಕೆ ಕಾಡ್‌ಲಿದ್ದ ದೈಗ, ಮರಗ, ಬೊಳ್ಳಿಗ ಎಲ್ಲದರ ಹೆಸ್ರ್‌ನ ಹೇಳಿ ಕೊಡ್ತಿತ್ತ್. ಅದ್ಕೆ ಕಾಡ್‌ನ ಬಗ್ಗೆ ಇರುವ ಜ್ಞಾನಕ್ಕೆ ಅಂಬೆನ ಬಾಯಿಂದ ಮಾತೇ ಹೊರ್ಟ್ತಿಲ್ಲೆ. ಕಾಡ್‌ನ ಒಳಗೆ ಹೊಗಿಕನ ಸೊರ್ಗಾಂತೇಳಿರೆ ಇದೇ ಇರೊಕೂಂತ ಅದ್ ಹೇಳಿಕಂಡತ್. ಇವರ ದಂಡ್‌ನ ನೋಡಿ ಠಣ್‌ಂತ ನೆಗ್ದಾಡುವ ಜಿಂಕೆಗ, ಸಾರಂಗಗ, ಮೊಲಗ ಹೆದ್ರಿಕೆಂದ ಓಡುವ ಪ್ರಾಣಿಗ ಇಚಿತ್ರ ಸೊರ ಹೊರ್ಡಿಸಿ ರೆಕ್ಕೆ ಬೊಡ್ಕಂಡ್ ಹಾರಿ ಹೋಗುವ ಕಾಡ್ ಕೋಳಿಗ ಇದರೆಲ್ಲಾ ನೋಡಿಕಾಕನ ಅಬ್ಯಾಸ ಬಲಂದ ಬಿಲ್ಗಾರರ್ ಗುರಿ ಇಸ್‌ತಿದ್ದೊ. ಕೂಡ್ಲೆ ಅದ್ ತಡ್ದ್‌ದ್ ಸನ್ನೆ ಮಾಡಿ ಬೇಡಾಂತ ಹೇಳ್ತಿತ್ತ್. ಯಾವ್ಯಾವುದೊ ಹಣ್ಣ್‌ಗಳ ಕಿತ್ತ್‌ದ್ ಮಕ್ಕ ಅದ್ಕೆ ಕೊಡ್ತಿದ್ದೊ. ಅಂತಾ ಹಣ್ಣ್‌ಗಳ ಅದ್ ಅಸ್ಟರಮುಟ್ಟ ತಿಂದೋಳೇ ಅಲ್ಲ. ಮರಂದ ಇಳ್ದ್‌ಕಂಡಿದ್ದ ಬಿಳಲ್‌ಗ ಸಿಕ್ಕಿಕಾಕನ ಮಕ್ಕ ಅದರ ಹಿಡ್ಕಂಡ್ ಉಜ್ಜಾಲ್ ಆಡ್ತಿದ್ದೊ. ಅಂಬೆ ಸಾ ಅವರೊಟ್ಟಿಗೆ ಸೇರಿಕಂಡ್ ಒಚ್ಚಿಕೆ ಹೋಕಾಕನ ಸುರುಲಿ ಕೈ ತೊಪ್ಪಿ ಬೀಳ್ತಿತ್ತ್. ಮಕ್ಕ 'ಹೋ' ಎಂತ ಎರ್ಡ್ ಕೈನ ಬೊಟ್ಟಿ ನೆಗಾಡಿಕನ ಸೇವಂತಿ ಅವರ ಹೆದ್ರ್‌ಸ್‌ತಿತ್ತ್. ಮತ್ತೆ ಅಂಬೆ ಉಜ್ಜಾಲ್ ಆಡ್ದರ ಕಲ್ತ್‌ಕಂಡತ್. ಆಗ ಸಾ ಮಕ್ಕ ನೆಗಾಡಿಕಂಡ್ ಗದ್ದಲ ಮಾಡ್ದೊ. ಸಣ್ಣ ಮರಗ ಇರ್ವ ತಟ್ಟ್ ಜಾಗೆಲಿ ಅವೆಲ್ಲಾ ಮಂಗಗಳಾಂಗೆ ಮರಹತ್ತಿ ಮರಕೋತಿ ಆಟ ಆಡ್ದೊ. ಬೇಗ ಮರ ಹತ್ತಿಕೆ ಆಗದೆ ಅಂಬೆ ಸುಲಬಲಿ ಸಿಕ್ಕಿ ಬೀಳ್ತಿತ್ತ್. ಮರದ ಮೇಲೆ ಇದ್ದದರ್‌ಂದ ಅದ್ ಕೆಳಗೆ ಇದ್ದದೇ ಹೆಚ್ಚ್! ಅವರವರ ಮನೆಂದ ಕಟ್ಟಿಕಂಡ್ ತಂದ ತಿನ್ಸ್‌ಗಳ ಒಟ್ಟುಲಿ ಕುದ್ದ್ ಹಂಚಿಕಂಡ್ ತಿಂದೊ. ಬೇರೆ ಬೇರೆ ತರದ ತಿನ್ಸ್‌ಗ ಅವು. ಸೇವಂತಿ ಅದರ ಹೆಸ್ರ್‌ನ ಎಲ್ಲಾ ಹೇಳಿಕೊಟ್ಟತ್. ಕೆಲವು ತಿನ್ಸ್‌ಗಳ ಅಂಬೆ ಇಸ್ಟರ ಮುಟ್ಟ ತಿಂದೋಳು ಅಲ್ಲ. ಅದ್ ಬಾರೀ ಕುಸಿಲಿ ಇತ್ತ್. ನೀರ್‌ನ ಜರಿಗ ಮೇಲೆಂದ ಬೀಳ್ದರ ನೋಡಿ, ಅದಕ್ಕೆ ತಲೆಕೊಟ್ಟ್ ಹಾರಿಕಂಡ್ ಕೊಣ್ತ್. ಇಸ್ಟರ ಮುಟ್ಟ ಪಡ್ಕಣದ ಅನ್ಬವಗಳ ಪಡ್ಕಂಡೆ ಇಲ್ಲಿನೇ ಇದ್ದರೆ ಏನಾದೂಂತ ತನ್ನಲ್ಲಿನೇ ಪ್ರಸ್ನೆ ಹಾಕಿಕಂಡತ್.

ಅಲ್ಲಿಂದ ತಿರ್ಗ ಗಿರಿನಾಯಕನ ಮನೆ ಮುಟ್ಟಿಕಾಕನ ಮಯ ಮಯ ಕತ್ತಲೆ ಆತ್. ಅಲ್ಲಿ ಗಿರಿನಾಯಕ ಅಂಬೆಗಾಗಿ ಕಾದ್‌ಕಂಡಿತ್ತ್. ಅಂವನ ಮೋರೆಲಿ ಆಯಾಸಂದ ಚಿಂತೆನೇ ಎದ್ದ್ ಕಾಂಬತಿತ್ತ್. ಅಂವನ ಎದ್‌ರ್‌ಗೆ ಒಂದ್ ಪೆಟ್ಟಿಗೆ ಇತ್ತ್. ಅದ್ ಕಾಶಿಂದ ಹಸ್ತಿನಾವತಿನವರೆಗೆ ಅವಳೊಟ್ಟಿಗೆ ಬಂದ ಅದರ ಪೆಟ್ಟಿಗೆ. ಅದರ ನೋಡಿ ಅಂಬೆನ ಮೋರೆ ಬೆಳ್ಚಿಕಂಡತ್. ಪೆಟ್ಟಿಗೆನ ತೋರ್ಸಿಕಂಡ್ ಗಿರಿನಾಯಕ ಹೇಳ್ತ್. "ನಿಮ್ಮ ಉಡ್ಪುಗ ಇದರ ಒಳ ಜೋಪಾನಲಿ ಉಟ್ಟು. ರಾಜಕುಮಾರೀ ನೀವು ನಮ್ಮ ಉಡ್ಪುನ ಹಾಕಂಡ್ ಸಂಕಟ ಪಡಕೂಂತ ಇಲ್ಲೆ."

ಅಂಬೆ ಮೊನ್ಸ್‌ಲಿನೇ ಸಂಕಟ ಪಟ್ಟಿತ್. ನಾ ಇಲ್ಲಿ ಒಳೇಂತ ಭೀಷ್ಮರಿಗೆ ತಿಳ್ಸಿಕೇಂತ ಬೊಳ್ಪುಗೆ ಇಂವ ಹೋದ್. ನನ್ನೊಟ್ಟಿಗೆ ಇಂವ ಹೊರಗೆ ಹೋವ ಉದ್ದೇಸ ತಿಳ್ಸ್‌ತಿದ್ದರೆ

ನಾ ಅಂವನ ಹೋಕೆ ಬುಡ್ತಿಲ್ಲೆ. ಅಲ್ಲಿ ಹಸ್ತಿನಾವತಿಲಿ ಏನೇನ್ ಮಾತ್ ಕತೆಗ ನಡ್ದತೋ? ತಾನ್ ರಾಜಕುಮಾರಿ ಎಂಬುದರ ತಾನ್ ಮರ್ತಿತ್ತ್. ಇವರೆಲ್ಲರ ಒಟ್ಟಿಗೆ ಬೆರ್ತ್ ಹೋಗಿದ್ದೆ. ಇವು ತಿಂಬೊದರ ತಿಂದಿದ್ದೆ. ಇವು ಹಾಕುವ ಬಟ್ಟೆನನೇ ತಾನ್ ಹಾಕಿದ್ದೆ. ಇಂದ್ ಕಾಡ್‌ಲಿ ಹೊಸ ಹೊಸ ಅನ್ಬವಗಳ ತಾನ್ ಪಡ್ಡಿದ್ದೆ. ನಂಗೆ ಹೊಸ ಜಲ್ಮ ಬಂದಾಂಗಾಗಿತ್ತ್. ಎಲ್ಲದರನೂ ಈ ಗಿರಿನಾಯಕ ಹಾಳ್ ಮಾಡಿ ಬುಟ್ಟತ್. ನಂಗೊಂದು ಮಾತ್‌ನ ಸಾ ಹೇಳದೆ ಹಸ್ತಿನಾವತಿಗೆ ಹೋಗಿ ನಾ ಮರ್‍ಯೋಕೂಂತೇಳ್ವ ಬೇನೆನ ಚರಿತ್ರೆನ ಹೀಂಗೆ ತಂದ್ ನನ್ನ ಎದ್ರ್ ಇಸಿಟು. ನಂಗೆ ಈ ಬೇನೆಂದ ಯಾಗೋಳುನೂ ಬುಡ್ಗಡೆ ಇಲ್ಲೇಂತ ಕಂಡದೆ.

ಅಡ್ಡಿ ಪಡ್ಸುವ ಸೊರಲಿ ಅಂಬೆ ಹೇಳ್ತ್. "ಗಿರಿನಾಯಕಾ ನಂಗೆ ಅದ್ ಬೇಕಿತ್ಲೆ. ನೀ ಅಗತ್ಯ ಇಲ್ಲದೆ ಈ ಅದಿಕಪ್ರಸಂಗನ ಮಾಡ್ದ. ನಿನ್ನ ಜನಂಗ ಮಾಡ್ದ ಉಡ್ಪುನ ಉಟ್ಟ್‌ದ್, ನಾ ಕುಸಿಲಿ ಇದ್ದರೆ ನೀ ಎಲ್ಲದರ ಹಾಳ್ ಮಾಡಿಬುಟ್ಟೆ. ನಿನ್ನೋವು ತಯಾರ್ ಮಾಡ್ದ ಉಡ್ಪುಗಳ ತಕಂಬಕೆ ನನ್ನ ಹಕ್ಕಲೆ ಚಿನ್ನದ ನಗಗ ಇದ್ದೊ. ನೀ ಇದರ ತಕಂಡ್ ಬಾಕಾದ ಅಗತ್ಯನೇ ಇತ್ಲೆ."

ಗಿರಿನಾಯಕ ಚಪ್ಪೆ ಆತ್. "ರಾಜಕುಮಾರೀ, ಇಂದ್ ಕಂದಾಯ ಕಟ್ಟುವದಿನ ಆಗಿತ್ತ್. ಹಸ್ತಿನಾವತಿನ ಕಂದಾಯ ಅಧಿಕಾರಿನ ಬೇಟಿ ಆಕನ ಅಂವ ನನ್ನಲ್ಲಿ "ಒಬ್ಬ ರಾಜಕುಮಾರಿ ನಿಮ್ಮಲ್ಲಿಗೆ ಬಂದುಟೋ"–ಎಂತ ಕೇಳ್ತ್. ನೀವು ಕೆರೆನ ಹಕ್ಕಲೆ ರಥಂದ ಇಳ್ದದರ ಪುರೋಯ್ತು ಹಸ್ತಿನಾವತಿಲಿ ಹೇಳದೆ ಇದ್ದದೆನೋ? ಇಲ್ಲೇಂತ ಸುಳ್ಳು ಹೇಳಿಕೆ ನನ್ನಂದಾತ್ಲೆ. ನಾ ಹೌದೂಂತ ಹೇಳಿಕಾಕನ ಅಂವ ನನ್ನನ ಭೀಷ್ಮನಲ್ಲಿಗೆ ಕಳ್ಸಿಕೊಟ್ಟತ್. ನೀವು ಗಿರಿನಗರಲಿ ಇರ್ದರ ನಾ ಹೇಳಲೇ ಬೇಕಾತ್. ಅಂವ ಸೇವಕರ್‌ಂದ ಪೆಟ್ಟಿಗೆನ ತರ್ಸಿ ಇದ್ ಅಂಬೆಗೆ ಸೇರ್ದ್. ಇದರ ಒಳಗೆ ಇರ್ದು ಅದ್ಕೆ ಬೇಕಾದು ಇದರ ತಕೊಂಡೋಗಿ ಅದ್ಕೆ ಕೊಡು. ಅದ್ ಗಿರಿನಗರಿಲಿ ಇರ್ದು ಒಳ್ಳದೇ. ಗಿರಿನಗರಿ ಹಸ್ತಿನಾವತಿಗೆ ಸೇರ್ದ ಜಾಗೆ. ಅದ್ ಅಲ್ಲಿ ಇರಿಕನ ಮುಟ್ಟ ಅದರ ಕಾಪಾಡ್ದು ಹಸ್ತಿನಾವತಿನ ಕೆಲ್ಸ–ಎಂತ ಹೇಳಿ ನನ್ನನ ಈ ಪೆಟ್ಟಿಗೆನೊಟ್ಟಿಗೆ ರಥಲಿ ಕಳ್ಸಿ ಕೊಟ್ಟತ್. ಈಗ ಹೇಳಿ ರಾಜಕುಮಾರೀ, ನಾ ಇದರ ಬುಟ್ಟು ಬಾಕೆ ಆದೆನೋ?"

ಅಂಬೆ ಮಾತ್ ಇಲ್ಲದೆ ಏಚನೆ ಮಾಡಿಕೆ ಸುರುಮಾಡ್ತ್. ಈಗ ಸಾತ್ ತಾನ್ ಹಸ್ತಿನಾವತಿನ ರಕ್ಷಣೆಲಿ ಇರ್ದು ಅದ್ಕೆ ಸಂತೋಸ ತಾವ ಸಂಗತಿ ಆಗಿತ್ಲೆ. ಹಸ್ತಿನಾವತಿನ ರಾಣಿ ಆದರ ಬುಟ್ಟ್ ಬಂದವ್‌ಳ್ ತಾನ್. ಈಗ ಈ ಭೀಷ್ಮರ ರಕ್ಷಣೆಲಿ ಇರ್ದು ಎಸ್ಟ್ ಸರೀಂತೇಳ್ವ ಪ್ರಸ್ನೆ ಅದರ ಕಾಡಿಕೆ ಸುರುಮಾಡ್ತ್. ಮುಂದೆ ಬಾಳ್ವೆ ಮಾಡುವ ದಾರಿನ ಕಾಣಕಾದ ಅಗತ್ಯನ ಅದ್ ತಿಳ್ಕಂಡತ್. ಏನ್ ಮಾಡ್ದೂಂತ ಏಚನೆಲಿ ಮುಣ್‌ಂಗಿತ್.

ಗಿರಿನಾಯಕ ಮಾತ್‌ನ ಮುಂದರ್ಸಿತ್. "ರಾಜಕುಮಾರೀ, ನಿಮ್ಮ ಕಡೆಂದನಾ ಭೀಷ್ಮರಲ್ಲಿ ತುಂಬಾ ತರ್ಕಮಾಡ್ದೆ. ಗೆದ್ದ್ ತಂದಂವನೇ ಹೆಣ್ಣ್‌ನ ಮೊದ್ವೆ ಆಕೂಂತ ಸಾಸ್ತ್ರಗಳ ಆಧಾರಂದ ವಾದ ಮಾಡ್ದೆ. ಆದರೆ ಮೊನ್ಸ್‌ನ ಕಟ್ಟಿ ಹಾಕುವಸ್ಟ್ ದೊಡ್ಡದ್ ಇನ್ನೊಂದಿಲ್ಲೇಂತ ಭೀಷ್ಮರ್ ಸ್ಲೋಕದ ಆಧಾರಂದ ಹೇಳ್ದೊ. ಈ ಹಿಂದೆ ಸಾ ಅಂವರೊಟ್ಟಿಗೆ

ಬೇರೆ ಬೇರೆ ಇಸಯಗಳ ಬಗ್ಗೆ ನಾ ವಾದ ಮಾಡ್ದಂವನೇ. ಆದರೆ ಪ್ರತಿ ಸಲನೂ ನಾ ಸೋಲ್ತಿದ್ದೆ. ಇಂದ್‌ನೂ ಹಾಂಗೇ ಆತ್. ನಾ ಗಳ್ಸಿದ ಜ್ಞಾನ ಭೀಷ್ಮರ ಸೋಲ್ಸಿಕೆ ಸಾಕಾತ್ಲೆ. ಅಕೇರಿಗೆ ಅವು ಒಂದ್ ಮಾತ್‌ನ ಹೇಳ್ದೊ. "ನೀ ಮೊದುವೆ ಆದಂವ. ನಾ ಬ್ರಹ್ಮಾಚಾರಿ. ಆದರೂ ಒಂದ್ ಮಾತ್‌ನ ಹೇಳ್ನೆ ಕೇಳ್. ಗಂಡ್‌ಹೆಣ್ಣ್ ಒಬ್ಬಂದೊಬ್ಬ ಗುಣ ಸಾದನೆನ ಮೆಚ್ಚಿಕಂಡ್ ಮೊದ್ವೆ. ಆದೇ ನಿಜವಾದ ಮೊದುವೆ. ಒಳ್ದ ಎಲ್ಲಾ ಮೊದುವೆಗ ಅರ್ತ ಇಲ್ಲದ ಮೊದುವೆಗ. ಆ ಕಾಶೀ ರಾಜ ಕುರು ಸಾಮ್ರಾಜ್ಯನ ಅಪಮಾನ ಮಾಡ್ತ್. ರಕ್ಷಕ ಆಗಿ, ಕುರು ಸಾಮ್ರಾಜ್ಯದ ಹೆಗ್ಗಳಿಕೆಗಾಗಿ ನಾ ಮುಂದೆ ಹೋವ ಅಗತ್ಯ ಆತ್. ಸೊಂಯಂವರಕ್ಕೆ ಸಕ್ತಿನ ಪಂತಾಂತ ಇಸಿದೇ ತೊಪ್ಪು. ಅಂಬೆನ ಇಸಯಲಿ ಅದರ ಅಪ್ಪ ಪ್ರತಾಪಸೇನಂದೇ ತೊಪ್ಪು. ಆದ್ ಆಗಿ ಹೋತ್. ಅಂಬೆ ಯಾರ್ನಾದರ್ ಮೊದುವೆ ಆಗಿ ಸುಕ ಪಡಲಿ. ಅದರ ಮೊದುವೆ ಆಕನ ಮುಟ್ಟ ಹಸ್ತಿನಾವತಿನ ಸಾಯ ಅದ್ಕೆ ಉಟ್ಟೂಂತ ಹೇಳ್ಂತ ಹೇಳ್ದೊ. ರಾಜಕುಮಾರೀ, ಆ ಭೀಷ್ಮ ಅವರ ಪ್ರತಿಜ್ಞೆಗಾಗಿ ಪ್ರಾಣನ ಬೇಕಾರೆ ಬುಡ್ದು. ಯಾಗ ಸಾ ತನ್ನ ಆಣೆನ ಮರ್‍ಯಕಿಲ್ಲೆ."

ಅದ್ ಅಂಬೆಗೆ ಗೊತ್ತಿತ್ತ್. ಆದರೆ ಗಿರಿನಾಯಕ ಸೊಬಾವದ ಬಗ್ಗೆ ಸಂಸಯ ಮೂಡ್ತ್. ಇಂವ ಕಂದಾಯ ಅದಿಕಾರಿನ ಮಾತ್‌ಗೆ ಬೆಲೆಕೊಟ್ಟ್ ಭೀಷ್ಮರ ನೋಡಿಕೆ ಹೋದೇಂತೇಳ್ದ್ ನಿಜ ಇರ್‍ದೋ? ಅಥವಾ ಭೀಷ್ಮ ಮಾಡ್ದ್ ತಪ್ಪೂಂತ ಅವ್ಕೆ ತೋರ್‍ಸಿಕೊಟ್ಟ್, ಅಂವನ ಪ್ರತಿಜ್ಞೆನ ಬಂಗ ಮಾಡಿ ಒಂದ್ ಹೆಣ್ಣ್‌ಗೆ ನ್ಯಾಯ ದೊರ್‍ಕಿಸಿ ಕೊಡೊಕೂಂತ ಹೋತೋ? ಇಂವ ಇಲ್ಲೇ ಇರ್‍ತಿದ್ದರೆ ಕಾಡ್‌ಗೆ ಎಲ್ಲರೊಟ್ಟಿಗೆ ಬಾತಿತ್ತ್. ಕಸ್ಟಲಿದ್ದ ಹೆಣ್ಣ್‌ಗೆ ಒಂದು ನೆಲೆನ ಮಾಡಿಕೊಡೊಕೂಂತ ಇಂವನ ಉದ್ದೇಸ ಆಗಿರೊಕು. ಹಾಂಗೇಂತ ಹೇಳಿಕಂಬಕೆ ಇಂವಂಗೆ ಅಳ್ಕ್. ಭೀಷ್ಮ ತರ್ಕಲಿ ಸೋತರೂ ಪರಿಸ್ತಿತಿ ಏನ್ ಬದ್ಲಾಗ್ತಿಲ್ಲೆ. ಅಂವ ಎಂದಿಗೂ ತನ್ನ ಪ್ರತಿಜ್ಞೆನ ಮರ್‍ಯತಿಲ್ಲೆ.

ಸಣ್ಣ ದನಿಲಿ ಅಂಬೆ ಹೇಳ್ತ್. "ಗಿರಿನಾಯಕಾ, ನಂಗೆ ಆ ಪೆಟ್ಟಿಗೆಲಿದ್ದ ಅರ್‍ವೆಗ ಬೇಡ. ಅದರ ಎಲ್ಲಾ ಸೇವಂತಿಗೆ ಮತ್ತೆ ಇಲ್ಲಿ ಇದ್ದ ಹೆಣ್ಮಕ್ಕಳ್‌ಗೆ ಹಂಚಿಬುಡು. ನಂಗೆ ನೀವು ತಯಾರ್‍ಸಿದ ಬಟ್ಟೆಗ ಇಸ್ಟ ಆಗುಟು. ಇದಕ್ಕೆ ಪ್ರತಿ ಆಗಿ ಪೆಟ್ಟಿಗೆಲಿದ್ದ ನಗಗಳ ನೀನೇ ಇಸಿಕ."

ಗಿರಿನಾಯಕನ ಮೋರೆ ಚಪ್ಪೆ ಆತ್. ತೊಪ್ಪು ಮಾಡ್ದ ದನಿಲಿ ಅಂವ ಹೇಳ್ತ್. "ಆ ಬಟ್ಟೆಗಳ ನಾ ಬದ್ಲಾಯ್ಸಿಕಾಗಿ ಕೊಟ್ಟದ್ ಅಲ್ಲ. ನೀವು ಎಸ್ಟ್ ಸಾ ಬಟ್ಟೆಗಳ ತಕಣಿ. ನಿಮ್ಮನ ನಮ್ಮ ಉಡ್ಪುಲಿ ನೋಡಿ ಇವೆಲ್ಲಾ ಎಸ್ಟ್ ಕುಸಿ ಪಟ್ಟವೆ. ನಾವು ತಯಾರ್ ಮಾಡ್ದ ಉಡ್ಪು ಉಪಯೋಗಕ್ಕೆ ಬಾತಲೇಂತ ಪಡುವ ಸಂತೋಸ ಅದ್. ನೀವುಗೆ ನಮ್ಮ ಉಡ್ಪು, ತಿನ್ಸ್, ಈ ಕೆರೆ, ಈ ಕಾಡ್–ಎಲ್ಲನೂ ಇಸ್ಟ ಆಗುಟು. ನೀವು ಏಕೆ ಇಲ್ಲಿನೇ ಇರಿಕೆ ಬೊತ್ತ್? ನೀವು ಕಲ್ತ ವಿದ್ಯೆನ ನಮ್ಮ ಜನಂಗಳಿಗೆ ಹೇಳಿ ಕೊಡಿ. ನೀವುಗೆ ನಿಮ್ಮ ಪೂಜೆ, ಜಪ, ತಪಕ್ಕೆ ಅನ್ಕೂಲ ಆಗುವಾಂಗೆ ಬೇರೆನೇ ಒಂದು ಸಣ್ಣ ಮನೆ ಮಾಡಿಕೊಟ್ಟನೆ. ನಿಮ್ಮ ಕೆಲ್ಸಕ್ಕೆ ಸೇವಂತಿ ಉಟ್ಟು. ನಿಮ್ಮಂದಾಗಿ ಈ ಗಿರಿದಾಮದ ಮುಂದೆನ ಜೀವನ ಬದ್ಲಾಗಲಿ. ನಾವು ನಿಮ್ಮ ನೆಮ್ಮದಿಗೆ ಬಂಗ ಬಾವಾಂಗೆ ಏನ್ ಸಾತ್ ಮಾಡ್ತುಲ್ಲೆ.

ಇರ್ಳ್ ಅಂಬೆಗೆ ತುಂಬಾ ಹೊತ್ತ್ ನಿದ್ದೆ ಬಾತ್ಲೆ. ಹಕ್ಕಲೆ ಸೇವಂತಿ ಮೈಮೇಲೆ ಗ್ಯಾನ ಇಲ್ಲದಾಂಗೆ ಮೊಲ್ಗಿಟು. ಅಂಬೆ ಏಚನೆ ಮಾಡಿಕೆ ಸುರುಮಾಡ್ತ್. ಇದ್ದ್ ಬುಡ್‌ದೋ? ನಾ ಇಲ್ಲಿನೇ ಇದ್ದ್ ಬುಡುದೋ? ಏಕೆ ಆಕೆ ಆಗದ್? ಇವರ್‌ಂದ ದರ್ಮಕೆ ಕೆಲ್ಸ ಮಾಡ್ಸಿಕೊಂಬೊದು ಬೇಡ. ನನ್ನಲ್ಲಿದ್ದ ಚಿನ್ನದ ನಗಗ ನನ್ನ ಇಡೀ ಜೂವಮಾನಕ್ಕೆ ಯಾವುದರ ಬೇಕರೂ ಪಡ್ಯಕೆ ಸಾಕ್. ಅವ್ಕೆ ವಿದ್ಯೆ ಹೇಳಿಕೊಟ್ಟ್. ಪೂಜೆ, ಜಪ, ತಪಲಿ ಜೂವಮಾನ ಇಡೀ ಇಲ್ಲಿ ಇರಿಕೆ ನನ್ನಂದ ಆದೋ?

ಇನ್ನೊಂದ್ ದಾರಿ ಉಟ್ಟು. ಅದ್ ಗಿರಿನಾಯಕನ ಮೊದುವೆ ಆದು. ಅಂವನ ಮೊನ್ಸ್‌ಲಿ ಈಗ ಅಂತಾ ಏಚನೆಗ ಇಲ್ಲದೆ ಇರ್ದು. ಪ್ರತಿದಿನ ನನ್ನ ಕಾಂಬಕಾಕನ ಈಗಲ್ಲರೆ ಮುಂದೆ ಒಂದ್ ದಿನ ಅಂತಾ ಏಚನೆ ಅಂವಂಗೆ ಮೂಡದೆ ಇರಿಕಿಲ್ಲೆ. ಈಗ ಸಾ ನನ್ನ ಕಾಂಬಕನ ಅಂವನ ಕಣ್ಣ್‌ಗ ಹೊಳ್ದವೆ. ನಂಗುನೂ ಈ ಒಂಟಿ ಬೊದ್ಕ್ ಚಪ್ಪೆ ಆಗಿ ಕಾಂಬಕೆ ಸಾಕ್. ಒಂದಲ್ಲ ಒಂದ್ ದಿನ ನಂಗೆ ಗಂಡ್‌ನ ಸುಕ ಬೇಕ್‌ಂತ ಕಾಂಬಕೆ ಸಾಕ್. ಗಿರಿನಾಯಕ ಒಳ್ಳೆಂವ ಅಂವಂಗೆ ಸರಿಕಂಡ ದಾರಿಲಿ ಹೋಗಿ ಭೀಷ್ಮರ ನೋಡಿ ಅವರಲ್ಲಿ ವಾದ ಮಾಡಿ ಸೋತ್ ಬಂದಂವ. ಈ ಗಿರಿನಾಯಕ ಹಸ್ತಿನಾವತಿನ ಆಸ್ರಯಲಿ ಇಂರಂವ. ಇಂವನ ಕೈ ಹಿಡ್ದರೆ ನಾ ಇಡೀ ಬೊದ್ಕ್‌ನ ಹಸ್ತಿನಾವತಿನ ಹಂಗ್‌ಲೇ ಕಳ್ಯಕಾದು. ರಾಣಿ ಆಗುವ ಯೋಗನ ಬುಟ್ಟ್ ಬಂದೋಳು ಅವರ ಹಂಗ್‌ಲಿ ಬೊದ್ಕಿಕಾದೆನೋ? ಅಂಬೆ ತುಂಬಾ ಹೊತ್ತ್ ಏಚನೆ ಮಾಡ್ಡೆ. ಅಕೆರಿಗೆ ಒಂದ್ ತೀರ್ಮಾನಕ್ಕೆ ಬಂದ ಮೇಲೆ ಅದರ ಮೊನ್ಸ್ ಹಗ್‌ರಾತ್. ನಿದ್ದೆ ಕುಟ್ಟಿ ಕುಟ್ಟಿ ಬಾತ್.

ಬೊಳ್ಪುಗೆ ಬೇಗ ಎದ್ದ್ ದಿನೋಳು ಮಾಡುವ ಕೆಲ್ಸನ ಮಾಡಿ ಮುಗ್ಸಿ ಅಂಬೆ ಗಿರಿನಾಯಕನ ಕರ್ದ್ ಹೇಳ್ತ್. "ಗಿರಿನಾಯಕಾ ಸುಮ್ಮಂಗೆ ಕೇಳ್ನೆ. ನಿಜ ಹೇಳೋಕು. ಯಾಗಾದರ್ ಹಸ್ತಿನಾವತಿಂದ ಬೇರೆ ಆಗಿ ಈ ಗಿರಿನಗರಿ ಸೊತಂತ್ರಲಿ ಇರ್ದೋ?"

ಗಿರಿನಾಯಕ ತಲೆ ಬೊಗ್ಗಿಸಿ ಉತ್ತರ ಹೇಳ್ತ್. "ಇದ್ ನಮ್ಮ ಹಿರಿಯರ್ ಇದ್ದ ಜಾಗೆ ರಾಜಕುಮಾರಿ. ಹಸ್ತಿನಾವತಿಗೆ ಕಂದಾಯ ಕಟ್ಟುದು ನಾವುಗೆ ಅಗತ್ಯ. ಅದರ ನಿಲ್ಸಿ ಬುಟ್ಟರೆ ಹಸ್ತಿನಾವತಿನ ದಂಡ್ ಬಂದ್ ನಾವ್ಗೆ ಮುತ್ತಿಗೆ ಹಾಕುದು. ನಮ್ಮಲ್ಲಿ ಬಿಲ್ಲ್ ವಿದ್ಯೆ ಕಲ್ತೋವು ಬಾಳ ಕಮ್ಮಿ ಜನ. ಕಾಳಗ ನಡ್ದರೆ ನಾವು ಬೇಗ ಸೋತ್ ಬುಡುವೊ. ಹಾಂಗಾಗಿ ನಾವು ಹಸ್ತಿನಾವತಿನ ಅಧಿಕಾರನ ಒಪ್ಪಿನೇ ಒಪ್ಪೋಕು."

ಹಿಂದೆನ ಇರ್ಳ್ ಅದ್ ತಕಂಡ ನಿರ್ದಾರಕ್ಕೆ ಈಗ ನಿಜರೂಪ ಸಿಕ್ಕಿತ್. ನಿದಾನಲಿ ತನ್ನ ಮಾತ್‌ನ ಅದ್ ಹೇಳ್ತ್. "ಗಿರಿನಾಯಕಾ, ನಾ ಎಲ್ಲಿ ಆದರೂ ರುಸಿಗಳ ಆಸ್ರಮ ಇದ್ದರೆ ಅವರೊಟ್ಟಿಗೆ ನನ್ನ ಮುಂದೆನ ಬೊದ್ಕ್‌ನ ಕಳ್ಯೋಕೂಂತ ತೀರ್ಮಾನ ಮಾಡ್ಯಳೆ. ನಂಗೆ ಆಯ್ದುಗಳ ಮತ್ತೆ ಸಾಸ್ತ್ರಗಳ ತಿಳ್ದ ಒಬ್ಬ ರುಸಿನ ತೋರ್ಸಿ ಕೊಟ್ಟಿಯನಾ?"

*****

## ಹೋಳು – 14

# ರೋಸಲಿ ಕುಡ್ತ್ ನೆತ್ತೆರ್‌ನ

ಶಲ್ಯ ಭೂಪತಿನ ಕರ್ಣನ ಸಾರತಿ ಮಾಡಿಕೆ ತನ್ನಂದ ಸಾದ್ಯ. ಆದಕ್ಕೆ ಭೀಷ್ಮರಿಗೆ ಬಾಳ ಕುಸಿ ಆತ್. ಎದೆ ಬೇನೆನ ಮರ್ತ್‌ದ್ ಇರ್ಳ್ ಪೊರ್ಲುಲಿ ನಿದ್ದೆ ಮಾಡಿಕೆ ಸಾದ್ಯ ಆತ್. ಕಾಳಗ ಹದಿನೇಳ್‌ನೇ ದಿನನ ಹೊಕ್ಕುಟು. ಇಂದ್ ಹಸ್ತಿನಾವತಿನ ಮುಂದೆನ ರಕ್ಷಣೆ ಮಾಡಂವ ಕರ್ಣನೋ ಅರ್ಜುನನೋ ಎಂತ ಹೇಳ್ದು ಗೊತ್ತಾದೆ. ಇಂದ್ ಕತ್ತಲೆ ಆಕನ ಕರ್ಣಾರ್ಜುನರ್ಲಿ ಇಬ್ಬೊರ್‌ಲಿ ಒಬ್ಬ ಇರ್ದುಲ್ಲೇಂತ ಅವರ ಮೊನ್ಸ್ ಹೇಳ್ತಿತ್ತ್. ಇಬ್ಬೋರ್ಲಿ ಯಾರ್ ಸತ್ತರ್ ಸಾ ಮತ್ತೆ ಕಾಳಗಲಿ ಮೊನ್ಸ್ ಇರಿಕಿಲ್ಲೇಂತ ಏಚನೆ ಮಾಡ್ದೊ. ಅಲ್ಲಿಗೆ ಕಾಳಗ ನಿತ್ತ ಹಾಂಗೆನೇ. ಇದರ ಏಚನೆ ಮಾಡಿಕಾಕನ ಅವರ ಮೊನ್ಸ್‌ನ ಉಲ್ಲಾಸ ಮಾಂಯ ಆತ್. ಇಸ್ಟರ ಮುಟ್ಟ ಕಾಣದ ಎದೆ ಬೇನೆ ಮತ್ತೆ ಕಾಂಬಕೆ ಸುರಾತ್. ಒಮ್ಮೆ ಎದೆಗೆ ಹೆಟ್ಟಿದ ಬಾಣ ಅದಾಗಿನೇ ಬಿದ್ದ್ ಹೋಕಾದ್ಲೆನೋ? ಹಸ್ತಿನಾವತಿನ ಕಾಪಾಡುವಂವ ಆತ್ಮಹತ್ಯೆ ಮಾಡಿಕಂಡತ್‌ಂತ ಲೋಕ ಅಪವಾದ ಹೊರ್ಸದಿದ್ದರೆ ಸಾಕಪ್ಪಾ–ಎಂತ ಅವು ಹೇಳಿಕೊಂಡೊ.

ಸಿಕಂಡಿನ ಬಾಣಂದಾಗಿ ಮಂಚಲಿ ಮೊಲ್ಗಿ ಏಳ್ ದಿನಂಗ ಆದೊ. ಎದ್ರಿಕೆ ಬೊತ್ತದೆ ಅದೇ ಸ್ತಿತಿಲಿ ಮೊಲ್ಗಿ ಮೊಲ್ಗಿ ಮೈ ಇಡೀ ಜಡ್ಡ್ ಕಟ್ಟಿ ಹೋಗಿತ್ತ್. ಕೆಲ್ಸದೊವು ಯಾವ್ದಕ್ಕೂ ಹೇಸಿಗೆ ಮಾಡದೆ ಸೇವೆ ಮಾಡ್ದು ಒಂದೇ ಅವ್ಕೆ ಸಮ್ದಾನ. ಬರೇ ಕುಡಿವ ತಿನ್ಸ್ ಮತ್ತೆ ಹಣ್ಣ್ ಹಂಪಲ್‌ಗ ಬುಟ್ಟರೆ ಅವ್ಕೆ ಬೇರೆ ಏನ್ ಸಾ ಬೇಕ್‌ಂತ ಅನ್ಸ್‌ತಿತ್ಲೆ. ವೈದ್ಯರ್ ರಾಜ ಸೇವೆ ಮಾಡಿವೆ. ಆದರೆ ಅದರ್‌ಂದ ಏನ್ ಸಾ ಉಪಯೋಗ ಇಲ್ಲೇಂತ ಅವ್ಕೆ ಅಂದೇ ಗೊತ್ತಾಗಿತ್ತ್. ಸಾವು ಯಾವ ಕ್ಷಣಲಿನೂ ಬಾದೂಂತ ಗೊತ್ತಿದ್ದರುನೂ ಮೊದ್ದು ಕೊಡ್ದರ ನಿಲ್ಸುವ ಹಾಂಗೆ ಇಲ್ಲೆ. ದುರ್ಯೋಧನನ ಮೊನ್ಸ್‌ನ ಸಾಂತಿಗಾದರ್ ಇದ್ ಮುಂದರ್ಯೋಕು. ಎಲ್ಲೋವೂ ಬೇನೆ ಇಲ್ಲದೆ ಸುಕಲಿ ಸಾಯೊಕೂಂತ ಬಯಸೋವೇ ಇರ್ದು. ಕಡೇ ದಿನಲಿ ನಾ ಎಲ್ಲೋವ್ಕೂ ಹೊರೆ ಆದನೇಂತ ಹೇಳುವ ಮೊನ್ಸ್ ಎದೆ ಬೇನೆಂದಲೂ ಹೆಚ್ಚಾಗಿ ಕಾಡಿಕೆ ಸುರುಮಾಡ್ತ್.

ಬೊಳ್ಪುನ ಕುಡಿವ ತಿನ್ಸ್‌ನ ಮುಗ್ಸಿಕನ ಕರ್ಣ ಬಾತ್. ಇಸ್ಟ್ ಹೊತ್ತ್‌ಗೆ ಇಸ್ಟರಮುಟ್ಟ ಯಾರ್ ಸಾ ಬಾತಿಲ್ಲೆ. ಭೀಷ್ಮರ್‌ಗೆ ಅಚ್ಚರಿ ಆದೆ. ಈಗ ಇಂವ ಏಕೆ ಬಾತ್? ಏನ್ ಹೇಳಿಕೆ ಬಂದಂವ?

ಕರ್ಣನ ಮೋರೆಲಿ ಎಂದ್‌ನ ಹುರ್ಪು ಇತ್ಲೆ. ಬಂದಂವನೇ ಇಸಯನ ನೇರಲಿ ಹೇಳ್ತ್. "ಅಜ್ಜಪ್ಪಾ, ನಿಮ್ಮಂದ ಉಪಕಾರ ಆತ್. ಎಂತಹೇಳಿಹೋಕೆಬಂದೆ. ನಿನ್ನೆಹೇಳಿಕೆ

ಆತ್ಲೆ. ಇಂದ್ ಕರ್ಣನಬೊರ್ದ್ಕಲಿಬಾಳ ದೊಡ್ಡದಿನ. ನಾ ಒಳ್ಳದನೆನೋ ಅಳ್ಳದನೆನೋ ನಂಗೇ ಗೊತ್ಲೆ. ಕೀಳ್ ಜಾತಿಯಂವನ ಮಂಜ ಆಗಿದ್ದ ನಂಗೆ ಕ್ಷತ್ರಿಯ ರಾಜ ಒಬ್ಬ ಕುರುಕ್ಷೇತ್ರ ಯುದ್ಧಲಿ ಸಾರಥಿ ಆಗಿ ರಥ ಓಡ್ಸುದು ಇಡೀ ದೇಸಲಿ ಎಂತಾ ಸಂದೇಸನ ನೀಡ್ದೇಂತ ನೆನ್ಸಿಕಂಡ್ ನಾ ಸಂತೋಸ ಪಟ್ಟನೆ. ಶಲ್ಯ ಭೂಪತಿನ ಸಾರಥಿ ಆಗಿ ಒಪ್ಪುಸಿಕೆ ಯಾರೊಬ್ಬರ್ಂದಳೂ ಆಕಿಲ್ಲೇಂತ ನಾ ನೆನ್ಸಿಕಂಡಿದ್ದೆ. ನಿಮ್ಮ ಮಾತ್‌ಗೆ ಹೇಂಗೆ ಬೆಲೆ ಕೊಟ್ಟತ್? ನೀವು ಬಾಳ ದೊಡ್ಡ ಮ್ಯೊಂಸ ಅಜ್ಜಪ್ಪಾ."

ಕರ್ಣ ಹೇಳ್ದರ ಕೇಳಿ ಭೀಷ್ಮರ ಮೋರೆ ಅರ್ಳಿತ್. "ಕೂಸೂ, ಶಲ್ಯಭೂಪತಿ ನನ್ನ ಮಾನ ಒಳ್ಸಿತ್. ಒಮ್ಮೆ ಅಂವ ಕರ್ಣನ ಸಾರತಿ ಆದ್ಲೇಂತ ಹೇಳ್ತಿದ್ದರೆನಾ ಏನ್ ಮಾಡಿಕೆ ಆಗ್‌ತಿತ್ತ್? ಶಲ್ಯ ಏನೋ ಒಪ್ಪಿತ್. ಹಿರ್‍ಯರಮಾತ್‌ಗೆ ಗೌರವ ಕೊಡೋಕೂಂತ ಹೇಳ್ವ ಸಂಸ್ಕಾರಲಿ ಬೆಳ್ದನಡೋಳ್ಕೆ ಅಂವಂದ್. ಆದರೆನಮ್ಮ ದುರ್ಯೋಧನನ ನೋಡು. ನನ್ನ ಒಂದೇ ಒಂದ್ ಮಾತ್‌ನ ಅಂವ ಕೇಳ್ತಾ? ಅಂವನ ಹಕ್ಕಲೆ ಶಲ್ಯ ಭೂಪತಿನಸ್ಟ್ ಒಳ್ಳೆ ಬುದ್ಧಿ ಇರ್ತಿದ್ದರೆ ಈ ಯುದ್ಧನೇ ನಡ್ಯತಿತ್ಲೆ. ಹೋಗಲಿ ಬುಡು. ಈಗ ಇದರ ಎಲ್ಲಾ ಮಾತಾಡಿ ಪ್ರೋಜನ ಏನ್? ಆದರೆ ನಿನ್ನನ ಒಂದ್ ಪ್ರಸ್ನೆ ಕೇಳೊಕೂಂತ ಒಳೆ. ಶಲ್ಯ ಭೂಪತಿ ನಿನ್ನ ಸಾರತಿ ಆಕೆ ಒಪ್ಪದೆ ಇರ್ತಿದ್ದರೆ ನೀ ಏನ್ ಮಾಡ್ತಿದ್ದ ಕೂಸು?"

ನಿರಾಸೆನ ಸೊರಲಿ ಕರ್ಣ ಹೇಳ್ತ್. "ಬೇರೆ ಏನ್‌ಮಾಡಿಕೆ ಆದೆ ಅಜ್ಜಪ್ಪಾ? ಬೇರೆ ಸಾರತಿನನಾ ಒಪ್ಪ್‌ತಿದ್ದೆ. ಶಲ್ಯಭೂಪತಿ ಒಪ್ಪದೆ ಇರ್ತಿದ್ದರೆ ಇಂದ್‌ನ ಕಾಳಗನ ಪಲ್ತಾಂಸ ಕೇಳುವ ಅಗತ್ಯನೇ ಇರ್ತಿತ್ಲೆ." ಕರ್ಣನಸೊರಲಿ ಈಗಹುರ್ಪು ಕಂಡತ್. "ಈಗನೋಡಿನಿ ಅಜ್ಜಪ್ಪಾ. ಇಂದ್‌ನೀವು ಕರ್ಣ ಗೆದ್ದತ್‌ಂತೇಳ್ವ ಸುದ್ದಿನ ಕೇಳಿರೆ, ನಂಗೆ ಈಗ ಹೊಸ ಸಕ್ತಿ ಬಂದಾಂಗಾಗುಟ್ಟು. ಆ ಅರ್ಜುನನ ಕತೆನ ಮುಗ್ಸಿದ್‌ನೇ ನಾ ನಿಮ್ಮ ತಿರ್ಗ ನೋಡ್ದು."

ಭೀಷ್ಮರ್‌ಗೆ ಕರ್ಣನ ಮೇಲೆ ಕನಿಕರ ಮೂಡ್‌ತ್. ಬೊರ್ದ್ಕಲಿ ಇಂವಂಗೆ ಇಂತಾ ಕುಸಿನ ಕ್ಷಣಗ ಹೆಚ್ಚ್ ಸಿಕ್ಕಿರಿಕಿತ್ಲೇನೋ? ಶಲ್ಯ ಭೂಪತಿ ಸಾಯ ಮಾಡಿರೆ ಇಂವ ಇಂದ್ ಅರ್ಜುನನ ಕೊಲ್ಲಿಕೆ ಆದು. ಆಗ ತಾನ್ ಇಂವನ ಹುಟ್ಟ್‌ನ ದುರ್ಯೋಧನಂಗೆ ಹೇಳಕಾದೆ. ಕರ್ಣಂಗೆ ಹಸ್ತಿನಾವತಿನ ಸಿಂಹಾಸನನ ಹತ್ತುವ ಸೌಭಾಗ್ಯ ಸಿಕ್ಕಿದೆ. ಅದರ ಬದ್ಲ್ ಇಂದ್‌ನ ಕಾಳಗಲಿ ಕರ್ಣನೇ ಸತ್ತ್ ಹೋದರೆ ಯುಧಿಷ್ಠಿರ ಪಟ್ಟ ಏರಿದೆ. ಏನ್ ಆದರು ಸಾ ದುರ್ಯೋಧನಂಗೆ ಪಟ್ಟ ಸಿಕ್ಕುವ ಬಾಗ್ಯ ಇಲ್ಲೆ.

ಸಮ್ಮಾನ ಮಾಡುವ ಸೊರಲಿ ಭೀಷ್ಮರ್ ಹೇಳ್ದೊ. "ಕುಂಞೀ ನಿನ್ನ ಆಸೆ ಈಡೇರ್‌ಲಿ. ಬೊರ್ದ್ಕಲಿ ನಿಂಗೂ ಸಂತೋಸಪಡುವ ಕಾಲ ಬರ್ಲಿಂತ ಹಾರ್‍ಯಸಂವ ನಾ. ಆದರೆ ಕುಂಞೀ, ಅರ್ಜುನನ ಅಸ್ಟ್ ಸುಲಬಲಿ ಕೊಲ್ಲಿಕೆ ಆದೆನೋ? ನಿನ್ನ ಮೊನ್ಸ್‌ಲಿ ಇದ್ದದರ ಹೇಳ್."

ಕರ್ಣ ಹೇಳ್ತ್. "ಯುದ್ಧಾಂತೇಳಿರೆ ಸೋಲಿಕು ಸಾ ರೆಡಿಯಾಗಿರೊಕು. ಇಂದ್ ನಾ ಸೋತರೆ ಅದ್ ಬರೀ ಸೋಲು ಅಲ್ಲ. ಸಾವು. ಸೋತ ಕರ್ಣನ ನೀವು ಜೂವಲಿ ನೋಡಿಕಿಲ್ಲೆ ಅಜ್ಜಪ್ಪಾ. ಎಲ್ಲಾ ಸಿದ್ದತೆನ ಮಾಡಿಕಂಡ್ ನೀವ್ಗೆ ಒಂದ್ ಮಾತ್‌ನ ಹೇಳಿ ಹೋಗೊಮೋಂತ ಬಂದೆ."

ಕರ್ಣನ ಇದ್ದದರ ಇದ್ದ ಹಾಂಗೆ ಹೇಳ್ದ ಸೊಬಾವ ಭೀಷ್ಮರ್‌ಗೆ ಇಸ್ಟ ಆತ್. ಪ್ರೀತಿಂದ ಅವು ಪ್ರಸ್ನೆ ಕೇಳ್ದೊ. "ಹೇಳ್ ಕುಂಞೀ, ಏನ್ ಅದ್?"

ಕರ್ಣ ಭೀಷ್ಮರ ಹಕ್ಕಲೆ ಬೊಗ್ಗಿ ಸಣ್ಣ ಸೊರಲಿ ಹೇಳ್ತ್. "ಅಜ್ಜಪ್ಪಾ ಹುಟ್ಟ್‌ಲಿ ಯಾವ ಸಂತೋಸನ ಸಾ ಪಡ್ಯಕೆ ಆಗದಂವ ನಾ. ಈಗ ಸಾಯುದರ್ಲಿ ಸಂತೋಸನ ಪಡ್ದನೆ. ನನ್ನ ಪ್ರೀತಿನ ಸ್ನೇಹಿತಂಗಾಗಿ ಜೂವ ಒಪ್ಪುಸುದು ಬಾಳ ದೊಡ್ಡ ಸಂತೋಸ ಅದ್. ನಾ ಸತ್ತ ಮೇಲೆ ದುರ್ಯೋಧನ ಬೊದ್ಕಿ ಉಳ್ಯಕಿಲ್ಲೆ. ಹುಟ್ಟಿಕನ ನದಿಗೆ ಬಿಸಾಡ್‌ದ ಈ ಸರೀರ ಪ್ರಾಣ ಹೋದ ಮೇಲೆ ವಾರಾಸ್ದಾರರಿಲ್ಲದ ಹೆಣ ಆಗಿ ನರಿ, ನಾಯಿಗಳ ಪಾಲ್ ಆಕೆ ಬೊತ್ತ್. ನನ್ನ ಶವಸಂಸ್ಕಾರ ಸರಿಯಾಗಿರೊಕು ಅಜ್ಜಪ್ಪಾ. ದಯಮಾಡಿ ಈ ಸರೀರಕ್ಕೆ ಪಾಂಡೋವು ಕೊಳ್ಳಿ ಇಸದಾಂಗೆ ನೋಡಿಕಣಿ. ಇದೇ ನನ್ನ ಅಕೇರಿನ ಆಸೆ."

ಭೀಷ್ಮರ್‌ಗೆ ಬಾಳ ಅಚ್ಚರಿ ಆದೆ. ಕರ್ಣನ ಮೋರೆಲಿ ಸಂತೋಷ ಇರ್ದರ ಅವು ನೋಡಿದೊ. ಅದ್ ಅಂವನ ಸಾಂಕಿದ ಒಡೆಯ ದುರ್ಯೋಧನಂಗಾಗಿ ಜೂವ ಕೊಡುವ ಹೆಮ್ಮೆನ ಮೊನ್ಸ್. ಇಸ್ಟರ ಮುಟ್ಟ ಗೆಲ್ಲುದರ ಬಗ್ಗೆ ಕನ್ಸ್ ಕಾಂಬತಿದ್ದ ಕರ್ಣ ಇದ್ದಕ್ಕಿದ್ದ ಹಾಂಗೆ ಸಾವುಗೆ ಮುಟ್ಟಿಟು. ಏನಾಗುಟು ಇಂವಂಗೇ? ಯುದ್ದ ಮಾಡಿಕೆ ಮುಂದೇನೇ ಆತ್ಮ ಇಸ್ವಾಸ ಕಳ್ಕಂಡರೆ ಇಂವ ಏನ್ ಸಾದುಸುದು?"

ಆತಂಕಲಿ ಭೀಷ್ಮರ್ ಪ್ರಸ್ನೆ ಮಾಡ್ದೊ, "ಇದೇನ್ ಕುಂಞಿ, ಇದ್ದಕ್ಕಿದ್ದ ಹಾಂಗೆ ನಿನ್ನ ಮೊನ್ಸ್ ಹೀಂಗೆ ಬದ್ಲಾಯಿಸಿತ್? ನಿಂಗೆ ಶಲ್ಯ ಭೂಪತಿ ಸಾರತಿ ಆಗಿ ಸಿಕ್ಕಿದ ಮೇಲೆನೂ ಗೆಲ್ಲುವ ಬರವಸೆ ಇಲ್ಲೆನೋ?"

ಕರ್ಣ ವಿಷಾದಂದ ನೆಗಾಡ್ತ್. "ಇದ್ ಗೆಲ್ಲಿಕಾಗಿ ನನ್ನದ್ ಒಂದ್ ಪ್ರಯತ್ನ ಅಜ್ಜಪ್ಪಾ. ನಿಜ ಹೇಳೊಕೂಂತೇಳ್ರೆ ನಂಗೆ ಗೆಲ್ಲುವ ಬರವಸೆ ಇಲ್ಲೆ. ನಿಮ್ಮಂದ, ಗುರು ದ್ರೋಣಾಚಾರ್ಯರ್‌ಂದ ಮಾಡಿಕಾಗದರ ನಾ ಮಾಡಿನೇಂತೇಳ್ರೆ ಅದ್ ಹಂಕಾರ. ಆದರುನೂ ದುರ್ಯೋಧನಂಗಾಗಿ ಒಂದು ಪ್ರಯತ್ನ ಮಾಡಿನೆ."

ಭೀಷ್ಮರ್‌ಗೆ ಇದಕ್ಕೆ ಏನ್ ಹೇಳೋಕೂಂತ ಗೊತ್ತಾತ್ಲೆ. ಮಾತ್ ಎಲ್ಲಿಂದ ಎಲ್ಲಗೋ ಹೋತ್‌ಂತ ಅವು ಗ್ರೇಸಿ ಹೇಳ್ದೊ, "ಕೂಸು, ಎಲ್ಲೋವೂ ಒಂದಲ್ಲ ಒಂದ್ ದಿನ ಸಾಯಕೇ ಬೇಕ್. ಆದರೆ ಪಾಂಡೋವು ನಿನ್ನ ಹೆಣನ ಮುಟ್ಟಿ ಕಾರ್ಯಕ್ರಮ ಮಾಡಿಕೆ ಆಗದ್‌ಂತ ಹೇಳ್ದಲ್ಲಾ? ಏಕೇಂತ ಕೇಳಕೋ?"

ಕರ್ಣ ಯಾವ್ದೇ ಮೊನ್ಸ್‌ಲಿ ಇಸಿಕಣದೆ ಹೇಳ್ದ್. "ಅಜ್ಜಪ್ಪಾ, ಈಗ ಸಾ ನಾ ಯಾರ್‌ಂತ ಪಾಂಡೋವುಕೆ ಗೊತ್ತಿಲ್ಲೆ. ನಾ ಸತ್ತ ಮೇಲೆ ಕುಂತಿದೇವಿ ಸತ್ಯ ಸಂಗತಿ ಹೇಳದೆ ಇರಿಕಿಲ್ಲೆ. ಆಗ ಪಾಂಡೋವು ನನ್ನ ಅಂತ್ಯ ಸಂಸ್ಕಾರನ ಮಾಡದೆ ಇರಿಕೆ ಅವ್ಕೆ ಆದ್ಲೆ. ನಂಗೆ ಪಾಂಡೋವರ ನನ್ನ ತಮ್ಮಂದರ್‌ಂತ ಒಪ್ಪಿಕಂಬಕೆ ಆದ್ಲೆ. ಇನ್ನ್ ಅವ್ವ ಹೇಳ್ತ್‌ಂತ ಪಾಂಡೋವು ನನ್ನ ಅಣ್ಣಾಂತ ಗೌರವ ಕೊಡಿಕೆ ಅವ್ಕೆ ಆದನೋ? ಲೋಕನ ಮೆಚ್ಚಿಸಿಕಾಗಿ, ಮೊನ್ಸ್‌ಗೆ ಒಪ್ಪದ ಕೆಲ್ಸ್‌ನ ಅವರ್‌ಂದ ಮಾಡ್ಸಿಕೆ ನನ್ನ ಮೊನ್ಸ್ ಒಪ್ಪುದುಲ್ಲೆ. ನನ್ನ ಮಂಜ ಉಟ್ಟು ವೃಷಕೇತು. ಸಣ್ಣಂವಾಂತ ಅಂವನ ನಾ ರಣರಂಗಕ್ಕೆ ಇಳ್ಸಿತ್ಲೆ.

ಅಲ್ಲದೆ ಅಜ್ಜಪ್ಪಾ, ಈ ಮಹಾಯುದ್ದಲಿ ಕೌರವ, ಪಾಂಡವರ್ ಎಲ್ಲೋವುನೂ ಸತ್ತ್ ಹೋದರೆ ಕೊಳ್ಳಿ ಇಸಿಕೆ ಒಬ್ಬ ಆದರೂ ಬೇಕಲೆ? ಅಂವಂದಳೇ ನನ್ನ ಅಂತ್ಯಸಂಸ್ಕಾರ ಮಾಡ್ಲೋಕು ಅಜ್ಜಪ್ಪಾ."

ಈ ಮಾತ್‌ಗೆ ಏನ್ ಹೇಳೊಕೂಂತ ಭೀಷ್ಮರ್‌ಗೆ ಗೊತ್ತಾತ್ಲೆ. ಅವು ಮೊನ್ಸ್‌ಲೇ ಏಚನೆ ಮಾಡಿಕೆ ಸುರುಮಾಡಿದೊ. ಯಾರ್ ಮುಂದೆ ಸತ್ತವೇಂತ ಯಾರಿಗೆ ಗೊತ್ತ್? ಕರ್ಣ ಬೊದ್ಕುದು. ಅಂವಂದ ಮುಂದೆ ನಾನೇ ಸತ್ತ್ ಹೋದರೆ ನನ್ನ ಅಂತ್ಯಸಂಸ್ಕಾರ ಮಾಡೋವು ಯಾರ್? ಇಸ್ಟಕ್ಕೂ ಸರಿಯಾಗಿ ಬಾಳಿ ಬೊದ್‌ಕ್‌ಕೆ ಸಾದ್ಯ ಆಗದ ನಾನ್ ಆಗಲೀ, ಕರ್ಣ ಆಗಲೀ ಸತ್ತ ಮೇಲೆ ಈ ಸರೀರಕ್ಕೆ ಸರಿಯಾದ ಕ್ರಮಲಿ ಬೊಜ್ಜ ಮಾಡೊಕೂಂತ ಏಕೆ ಏಚನೆ ಮಾಡೊಕು? ಉಸ್ರು ಹೋದ ಹಾಳ್ ಸರೀರಕ್ಕೆ ಏನಾದರೆ ಏನ್?

ಆದರೆ ಕರ್ಣ ಒಂದ್ ಒಳ್ಳೆ ಕೆಲ್ಸನ ಮಾಡಿಟು. ಮಂಜ ವೃಷಕೇತು ಯುದ್ಧರಂಗಕ್ಕೆ ಇಳ್ಯದಾಂಗೆ ನೋಡಿಕೊಂಡುಟು. ಅಭಿಮನ್ಯು ಸತ್ತರೆ ಏನಾತ್? ಇಡೀ ಪಾಂಡವೊರ್, ಕೌರವೊರ್ ಸತ್ತ್ ಹೋದರ್ ಸಾ ಏನಾತ್? ಒಬ್ಬ ವೃಷಕೇತು ಇದ್ದದೆ. ಅಂವ ಒಬ್ಬ ಸಾಕ್, ಕುರು ಸಾಮ್ರಾಜ್ಯನ ರಕ್ಷಣೆ ಮಾಡಿಕೆ. ಕರ್ಣನ ಈ ಕೆಲ್ಸ ಸ್ವಾರ್ತದ್‌ಂತ ಕಾಂಬೊದ್. ಆದರೆ ಕರ್ಣ ತುಂಬಾ ಏಚನೆ ಮಾಡಿಟು. ಮುಂದಾಲೋಚನೆ ಮಾಡ್ದರ್‌ಂದ ಕುರು ಸಾಮ್ರಾಜ್ಯಕ್ಕೆ ಒಬ್ಬ ವಾರಾಸ್ದಾರನ ಕೊಟ್ಟುಟು. ಇದೇ ಇಂವನ ದೊಡ್ಡ ಸಾದನೆ.

ಅಂವನ ಮೇಲೆ ಹೆಮ್ಮೆ ಪಟ್ಟ್‌ಕಂಡ್ ಭೀಷ್ಮರ್ ಹೇಳ್ದೊ. "ಕೂಸು ನೀ ಯಾದ್ದರ ಬಗ್ಗೆನೂ ಚಿಂತೆ ಮಾಡ್ಬಡ. ನಿನ್ನ ಇಚ್ಚೆನ ನಾ ನೆರವೇರ್ಸಿನೆ. ನೀ ಚಿಂತೆ ಮಾಡದೆ ನಿನ್ನ ಉದ್ದೇಸ ಸಾದನೆಗೆ ಬೇಕಾಗಿ ಹೋರಾಟ ಮಾಡ್. ಕುರು ಸಾಮ್ರಾಜ್ಯನ ರಕ್ಷಣೆ ಮಾಡ್ದಂವಾಂತ ಮುಂದೆ ನಿನ್ನ ಹೆಸ್ರ್ ಜನಂಗಳ ಮೊನ್ಸ್‌ಲಿ ನಿತ್ತದೆ."

ಕರ್ಣ ತನ್ನ ಮುಂಡನ ಭೀಷ್ಮರ್ ಪಾದಕ್ಕೆ ಮುಟ್ಟಿಸಿತ್. ಅಂವನ ಕಣ್ಣ್‌ಂದ ಇಳ್ದ ಕಣನೀರ್ ಭೀಷ್ಮರ್ ಪಾದಕ್ಕೆ ಸೋಂಕಿಕನ ಅವು ಮೊರ್ಗ್ಗಿದೊ. ಕೈ ಸನ್ನೆಂದ ಕರ್ಣನ ಹಕ್ಕಲೆ ಕರ್ದ ಭೀಷ್ಮರ್ ತಲೆ ಬೊಗ್ಗಿಸಿಕೆ ಸನ್ನೆ ಮಾಡ್ದೊ. ಕರ್ಣನ ತಲೆನ ಪೂಜೆ, ಪ್ರೀತಿಂದ ಒತ್ತಿದೊ. ಕರ್ಣ ಕಣನೀರ್‌ನ ಒರ್ಸಿಕಂಡತ್. ಹೆಬ್ಬಾಗಿಲ್‌ನ ಹೊರಗೆ ಕಾಲ್ ಇಸಿಕೆ ಮುಂದೆ ಎರ್ಡ್‌ಸಲ ಭೀಷ್ಮರ ತಿರ್‌ಗ್ಗಿ ತಿರ್‌ಗ್ಗಿ ನೋಡ್ತ್. ಅವರ ಕಣ್ಣ್ ತುಂಬಾ ನೋಡಿಕಂಡ್ ಉದ್ದದ ಉಸ್ರ್ ಬುಟ್ಟ್‌ಕಂಡ್ ಮೆಲ್ಲಂಗೆ ದೂರ ನಡ್ತ್. ಬೂಮಿ ಮೇಲೆ ಇರುವ ಎಲ್ಲಾ ಬಂದನಗಳ್‌ಂದ ಬುಡ್ಸಿಕಂಬ ಹಾಂಗೆ.

ನೊಡು ಮದ್ಯಾನದ ಹೊತ್ತ್‌ಗೆ ಯಾರೋ ದುಡು ದುಡು ಓಡಿ ಬರುವ ಹೆಜ್ಜೆನ ಸಪ್ಪಳ ಕೇಳಿ ಅರೆ ನಿದ್ದೆಲಿದ್ದ ಭೀಷ್ಮರ್‌ಗೆ ಎಚ್ಚರ ಆತ್. ಬಂದಂವ ಅವರ ಕಾಲ್‌ಗಳ ಗಟ್ಟಿಲಿ ಹಿಡ್ಕಂಡತ್. ಬಂದಂವ ದುರ್ಯೋಧನ. ಅಂವನ ಸರೀರ ಇಡೀ ನಡ್ಗ್‌ತಿತ್ತ್. ಯಾವುದೋ ಬೀಕರ ಸಂಗತಿನ ನೋಡ್ದಂವನಾಂಗೆ ಅಂವನ ಕಣ್ಣ್‌ಲಿ ಹೆದ್ರಿಕೆ ತುಂಬಿತ್ತ್. ಯಮ ತನ್ನ ಅಟ್ಟಿಸಿಕಂಡ್ ಬಂದ ಹಾಂಗೆ, ಜೂವದ ಹೆದ್ರಿಕೆಂದ ಅಂವನ ಮೋರೆಲಿ

ಬಯ ಎದ್ದ್ ಕಾಂಬತಿತ್ತ್. ಅಂವನ ಸಮ್ಮಾನ ಮಾಡುವ ಹಾಂಗೆ ಭೀಷ್ಮರ್ ಹೇಳ್ದೊ, "ಕುದ್ರ್ ಕುಂಞೀ. ಏನೋ ಕೆಟ್ಟದರ ನೋಡ್ಯಳ. ಕೆಟ್ಟ ಸುದ್ದಿನ ತಂದಳಾಂತ ನಿನ್ನ ನೋಡಿಕನನೇ ಗೊತ್ತಾದೆ. ಬೊಳ್ಪುಗೆ ಕರ್ಣ ಬಂದಿತ್ತ್. ಈಗ ನಿನ್ನನ ಯಾವುದೋ ಬಯ ಇಲ್ಲಿಗೆ ಮುಟ್ಟ ಕರ್ದ್ ತಂದುಟು. ಹೇಳಿ ಬುಡು ಕುಸೂ. ಈ ಹೊತ್ತ್‌ಲಿ ಯಾಗೋಳೂ ಬಾರದಂವ ಇಂದ್ ಏಕೆ ಬಂದ?"

ದುರ್ಯೋಧನಂಗೆ ಹೇಂಗೆ ಹೇಳೊಕೂಂತಳೇ ಗೊತ್ತಾತ್ಲೆ. ಮಾತ್‌ನ ರೂಪ ಕೊಡಿಕೆ ಅಂವ ಹೆಣ್ಗಾಟ ಮಾಡ್‌ತಿತ್ತ್. ಬಿಡಾರದ ಸುತ್ತೋಳೂ ಒಮ್ಮೆ ನೋಡ್ತ್. ಅಲ್ಲಿ ಇಸಿದ್ದ ನೀರ್‌ನ ಒಮ್ಮೆನೇ ಗಟಗಟಾಂತ ಕುಡ್ತ್. ಹೆದ್ರಿಕೆ ತುಂಬಿದ ಸೊರಲಿ ಬೇಗ ಬೇಗ ಹೇಳ್ತ್. "ಅಜ್ಜಪ್ಪಾ, ದುಶ್ಯಾಸನನ ಮಾತ್‌ನ ಕೇಳಿ ಇರ್ಳ್ ಕಾಳಗ ಕೊಡಿಕಾಗದಿತ್ತ್‌ಂತ ನಂಗೆ ಈಗ ಗೊತ್ತಾದೆ. ಈ ಕಾಳಗ ನಡ್ಯದಿರ್‌ತಿದ್ದರೆ ಇಂದ್‌ನ ಬಯಂಕರ ಗಟನೆ ನಡ್ಯತಿತ್ಲೆ." ಅಂವನ ಉದ್ವೇಗ ಹೆಚ್ಚ್‌ದ್ ಅಂವಂಗೆ ಮುಂದೆ ಮಾತಾಡಿಕೆ ಆತ್ಲೆ. ದುರ್ಯೋಧನ ಮಾತ್ ನಿಲ್ಲಿಸಿತ್.

ಭೀಷ್ಮರ್ ಏಚನೆ ಮಾಡಿಕೆ ಸುರುಮಾಡ್ದೊ. ದುಯೋಧನನೇ ಬಯಂಕರ ಗಟನೇಂತ ಹೇಳಕಾದರೆ ಅಲ್ಲಿ ಏನ್ ನಡ್ದುಟೋ? ಕುರುಸಾಮ್ರಾಜ್ಯನ ಆಳುವ ಒಂದೊಂದೇ ನಕ್ಷತ್ರಗ ಉದುರಿ ಬಿದ್ದವೆ. ಇನ್ ಸಾಯಕೆ ಹಕ್ಕಲೆ ಆದ ಹಿರ್‍ಯರ್ ಹಂಞ ಬೇಗ ಸತ್ತರೆ ಏನ್? ಆದರೆ ಇಂವಂಗೆ ಬಾಯಿಬುಟ್ಟ್ ಹೇಳಿಕೆ ಕಸ್ಟ ಆವ ಆ ಸಂಗತಿ ಯಾವುದು ಅದ್?"

"ಕುಂಞೀ, ಕುರುಕ್ಷೇತ್ರನ ದರ್ಮಕ್ಷೇತ್ರಾಂತ ಮೊರ್‍ಯಾದೆ ಕೊಟ್ಟ್ ನಾವು ಯುದ್ಧನ ಸುರು ಮಾಡಿದೊ. ದರ್ಮನ ಒಳ್ಸಿಕೆ ಯಾರ್ ಪ್ರಯತ್ನಪಟ್ಟೊ ಹೇಳ್? ಇರ್ಳ್‌ನ ಕಾಳಗ ಮಾತ್ರ ದರ್ಮ ಅಲ್ಲದ್ದ್‌ಂತ ಬೇರೆ ಹೇಳ್ಬಡ. ದ್ರೌಪದಿ ಸೊಂಯಂವರದ ಮೇಲೆ ಪಾಂಡೋವುಕೆ ಇಂದ್ರ ಪ್ರಸ್ಥನ ಬುಟ್ಟ್ ಕೊಡಿಕನ ಕುರು ಸಾಮ್ರಾಜ್ಯಲಿ ಅವು ಪಾಲ್ದಾರರ್ ಎಂತ ಆದುಲ್ಲೆನೋ? ಪಾಂಡೋವರ್ ಕಾಡ್‌ಲಿ ವಾಸಮಾಡ್ದ್, ತಲೆ ಮರ್ಸಿಕಂಡ್ ಇದ್ದದ್ ಇದರ ಮೇಲೆ ನೀ ಅವರ ಹುಟ್ಟ್‌ನ ಬಗ್ಗೆ ಹೇಳಿ ಪಾಂಡೋವ್ಕೆ ಬೂಮಿ ದಕ್ಕದಾಂಗೆ ಮಾಡ್ದ. ಈ ದೊಡ್ಡ ಕಾಳಗಕ್ಕೆ ಸಾ ಕಾರ್ಣ ಆದೆ. ಈಗ ಬೇರೆವೊರ ಮೇಲೆ ಅಪವಾದ ಹೊರ್ಸಿ ಏನ್ ಪ್ರೋಜನ ಉಟ್ಟು? ಅದಿರ್ಲಿ, ಈಗ ಏನ್ ನಡ್ತ್? ಎಂತ ಹೇಳ್. ದರ್ಮ, ಅದರ್ಮದ ಮಾತ್ ಬೇಡ."

ದುರ್ಯೋಧನನ ಮೊನ್ಸ್ ಹಂಞ ಸರಿ ಆಗಿ ಅಂವ ಹೇಳ್ತ್. "ಅಜ್ಜಪ್ಪಾ, ಇಂದ್ ಬೊಳ್ಪುಂದ ಭೀಮ ರಣರಂಗಲಿ ದುಶ್ಯಾಸನನ ಹುಡ್ಕ್‌ತಿತ್ತ್. ಇರ್ಳ್‌ನ ಕಾಳಗಕ್ಕೆ ಅಂವನೇ ಕಾರ್ಣಾಂತ ಗೂಡಾಚಾರರ್‌ಂದ ತಿಳ್ದ್‌ದ್, ಘುಟೋತ್ಕಚನ ಸಾವುಗೆ ಪ್ರತಿಕಾರ ಮಾಡ್ದು ಅಂವನ ಉದ್ದೇಸ ಆಗಿತ್ತ್. ರಂಗರಂಗಲಿ ದುಶ್ಯಾನಂಗೆ ಅರ್ಜುನ ಎದ್‌ರಾತ್. ಅವರೊಳಗೆ ನಡ್ದ ಕಾಳಗ ದುಶ್ಯಾಸನನ ಸೋಲ್‌ಲಿ ಮುಗ್ತ್. ಆಗ ಅರ್ಜುನ "ಯುದ್ದ ಮಾಡ್ದು ದ್ರೌಪದಿನ ಸೀರೆ ಎಳ್ದಾಂಗೆ ಅಲ್ಲ. ನಿನ್ನ ನಾ ಕೊಲ್ಲುದುಲ್ಲೆ. ಅಣ್ಣ ಭೀಮಸೇನಂದ ಸಾಯಕನ ಮುಟ್ಟ ನೀ ಬೊದ್ಕಿಕಂತ ಸದ್ಯಕ್ಕೆ ಜೂವ ತೆಗ್ಯದೆ ಬುಟ್ಟ್‌ತ್. ಭೀಮನ ಹೆಸ್ರ್

ಕೇಳ್ದ ಕೂಡ್ಲೆ ಮೋರೆ ಬೆಳ್ಚಿಕಂಡ ದುಶ್ಯಾಸನ ರಣರಂಗಂದ ಓಡಿಕೆ ಸುರು ಮಾಡ್ತ್. ಆಗ ಅಂವ, ಅದ್ ಎಲ್ಲಿ ಇತ್ತೋ ಆ ಭೀಮ? ಓಡಿ ಹೋವ ದುಶ್ಯಾಸನನ ಬೆನ್ನ್ ಹಿಡ್ದ್ ನೆಲಕ್ಕೆ ಕುಕ್ಕಿತ್. ದುಶ್ಯಾಸನ ಜೂವದ ಹೆದ್ರಿಕೆಂದ ಕಿರ್ಚಿಕೆ ಸುರುಮಾಡ್ತ್".

ಗಂಟ್ಲ್ ಕಟ್ಟಿದಂಗಾಗಿ ದುರ್ಯೋಧನ ಮಾತ್‌ನ ನಿಲ್ಸಿತ್. ಭೀಷ್ಮರ್ ಮೊನ್ಸ್‌ನೊಳಗೆ ಏಚನೆ ಮಾಡ್ದೊ. ನೆಲಕ್ಕೆ ಬೀಳ್ಸಿದ ಮೇಲೆ ಭೀಮ ಬುಟ್ಟದೆನೋ? ದುಶ್ಯಾಸನನ ಕತೆ ಮುಗ್ದ್ ಹೋಗುಟು. ಸುರುನ ಸಲ ಅಂವ ಮೊನ್ನೆ ನನ್ನ ಕಾಂಬಕೆ ಬಂದಿತ್ತ್. ಇರ್‍ಳ್ ಕಾಳಗ ಕೊಡ್ದು ಅಂವನ ಮೊನ್ಸ್‌ಲಿ ಬಂದ ಕೂಸು. ಆದರೆ ಆ ಉದ್ದೇಸ ಮಾತ್ರ ಈಡೇರ್ತಿಲ್ಲೆ. ಪಾಂಡವೊರ್ ಐದ್ ಜನರ್‌ಲಿ ಒಬ್ಬನ ಸಾತ್ ಕೊಲ್ಲಿಕಾತ್ಲೆ. ಕುರು ಸಾಮ್ರಾಜ್ಯನ ಆಳಕಾಗಿ ಇದ್ದ ಘಟೋತ್ಕಚ ಸತ್ತತ್. ಅದ್ಕೆ ಭೀಮ ಸೇಡ್ ತೀರ್ಸಿ ಕಂಡತ್‌ಂತ ಇಂವ ಸಾದಿಸಿದೆ. ಇಂವನ ಕಾಡುದು ಏನ್? ಸಾಯುವ ಹೆದ್ರಿಕೆನೇ? ಇಲ್ಲರೆ ಪಾಪ ಮಾಡ್ದೇಂತೇಳ್ವ ಹೆದ್ರಿಕೆನೇ?.

ಭೀಷ್ಮರ್ ದುಶ್ಯಾಸನನ ನೆಂಪಿಸಿಕೊಂಡೊ. ಅಂವ ಅಂತಾ ದೊಡ್ಡ ವೀರ ಏನ್ ಅಲ್ಲ. ಆದರೆ ಅಂವನ ಕಂಡರೆ ಹಸ್ತಿನಾವತಿ ನಡ್ಗ್‌ತಿತ್ತ್. ದೊಡ್ಡ ಮಿಾಸೆನ, ದೊಡ್ಡ ಕಣ್ಣ್‌ನ. ಅಗಲದ ಮುಂಡನ ರಾಕ್ಷಸರಾಂಗೆ ಇರುವ ಸರೀರದಂವ ಅಂವ. ಮೂಂಕುನ ಮೇಲೆನ ಕೊಡಿಂದ ಸುರುಮಾಡಿ ಮುಂಡದ ಉದಾಕೂ ಅಂವ ಕುಂಕುಮದ ನಾಮನ ಹಾಕಿ, ಕೈಲಿ ಬಾಳ್ಕತ್ತಿ ಹಿಡ್ದ್ ಹೊರ್ಟತ್‌ಂತೇಳ್ರೆ ಕಾಳಿದೇವಿಗೆ ಕೋಣನ ಬಲಿ ಕೊಡಿಕೆ ಹೊರ್ಟ ಕಟುಕನಾಂಗೆ ಕಾಂಬತಿತ್ತ್. ದುರ್ಯೋಧನನ ತಮ್ಮ ಆಗಿ ಅಂವ ಯಾವುದೇ ಕೆಟ್ಟ ಕೆಲ್ಸ ಮಾಡ್ರು ಸಾ ದಕ್ಕಿ ಹೋತಿತ್ತ್. ಆದರೆ ಅಂವ ಪೀಟದ ದುರುಪಯೋಗ ಯಾಗೋಳೂ ಮಾಡ್ತಿಲ್ಲೆ.

ದುರ್ಯೋಧನನ ಮೊನ್ಸಿಗೆ ಹಕ್ಕಲೆ ಆದವರ್‌ಲಿ ಕರ್ಣ, ಶಕುನಿ, ಮತ್ತೆ ಜಯದ್ರತರ್‌ಲಿ ಅಂವ ಸಾ ಒಬ್ಬ ಆಗಿತ್ತ್ ಕುರ್ಡ್ ರಾಜ ದೃತರಾಷ್ಟ್ರಂಗೆ ರಾಜ್ಯಬಾರ ಮಾಡ್ದರ್‌ಂದ ರಾಣಿಯವರೊಟ್ಟಿಗೆ ಕಾಲ ಕಳ್ಯೋದು ಕುಸಿನ ಕೆಲ್ಸ ಆಗಿತ್ತ್. ದುರ್ಯೋಧನ ಅಪ್ಪನ ಹೆಸ್ರ್‌ಲಿ ಅಧಿಕಾರ ಚಲಾಯ್ಸ್‌ತಿತ್ತ್. ದುಶ್ಯಾಸನ ಯಾಗೋಳೂ ಸೊಂತ ಬುದ್ದಿವೊಂತಿಕೆ ಉಪಯೋಗಿಸಿದಂವ ಅಲ್ಲ. ರಾಜ್ಯ ಸಭೆಲಿ ಸಲಹೆಗಳ ಹೇಳ್ದಂವ ಅಲ್ಲ. ಅಂವನ ತಲೆಲಿ ಹೊಳ್ದರೆ ಅಲ್ಲನೋ ಹೇಳ್ದು? ಅಣ್ಣ ಹೇಳ್ದರ ಒಂದು ಚೂರುನೂ ತೊಪ್ಪದೆ ಮಾಡ್ದು ಮಾತ್ರ ತನ್ನ ಕೆಲ್ಸಾಂತ ನೆನ್ಸಿಕಂಡಂವ ಸುರುನ ಸಲ ಅಂವ ಇರ್‍ಳ್ ಕಾಳಗ ಮಾಡೊಮೋಂತ ಹೇಳ್ತ್. ಅದೇ ಅಂವನ ಕಸ್ಟಕ್ಕೆ ಕಾರ್ಣಾಂತ ದುರ್ಯೋಧನ ಸಾಧಿಸಿಕೆ ಪ್ರಯತ್ನ ಮಾಡ್ದೆ.

ದುರ್ಯೋಧನ ತನ್ನ ತಾನೇ ಸಮ್ದಾನ ಮಾಡಿ ಕಂಡ್ ಮಾತ್‌ನ ಮುಂದರ್ಸಿದೆ. "ಹೇಂಗೆ ಹೇಳೋ ಕೂಂತೇಳಿನೇ ಕಾಂಬೋದುಲ್ಲೆ ಅಜ್ಜಪ್ಪಾ. ಬಿದ್ದಕಂಡ್ ಇದ್ದ ದುಶ್ಯಾಸನನ ಎರ್ಡ್ ಕಡೆ ಕಾಲ್ ನೀಂಡಿ ಭೀಮ ಕುದ್ದತ್. ಜೂವ ಹೋದ ಹೆದ್ರಿಕೆಂದ ಮೊರ್ಟ್‌ಕಂಡ್ ಕಿರ್ಚಿತಿದ್ದ ದುಶ್ಯಾಸನ ಇಂವನ ಆನೆ ಬಾರಕ್ಕೆ ನಲ್ಗಿ ಹೋತ್. ಸತ್ತನೇಂತ

ಬೊಬ್ಬೆ ಹಾಕ್‌ತಿದ್ದ ದುಶ್ಯಾಸನನ ಹೊಟ್ಟೆನ ಸೀಳಿಕನ ಕಾರಂಜಿ ಹಾಂಗೆ ರೆಟ್ಟಿದ ನೆತ್ತರ್‌ನ ಭೀಮ ಎರ್ಡ್ ಅಂಗೈ ಜೋಡ್ಸಿ ಬೊಗಸೆಲಿ ನೆತ್ತರ್‌ನ ತುಂಬುಸಿ ಕುಡ್ತ್. "ನಿನ್ನ ಆತ್ಮಕ್ಕೆ ಸಾಂತಿ ನೀಡಿನೆ ಮಂಜ ಎಂತ ಆಕಾಸನ ನೋಡಿ ಹೇಳ್ತ್. ದುಶ್ಯಾಸನನ ಕರ್ಳ್‌ನ ಎಳ್ದ್, ಎಳ್ದ್‌ದ್ ತೆಗ್‌ತ್. ಆಗ 'ಇದ್ ದ್ರೌಪದಿನ ಸೀರೆ ಎಳ್ದದಕ್ಕೆ ಸಮ್ಮಾನ' ಎಂತ ಹೇಳ್ತಿತ್ತ್. ಎಳ್ದ್ ತೆಗ್ದ ಕರ್ಳ್‌ನ ಹಾಂಗೆನೇ ಕೈಲಿ ಹಿಡ್ಕಂಡ್ "ನನ್ನ ರಾಣಿ ಬಾ. ನಿಂಗಾಗಿ ಮಾಡ್ದ ಪ್ರತಿಜ್ಞೆನ ಈಡೇರ್ಸಿದೆ. ನಿನ್ನ ಬಿಚ್ಚಿದ ಕೂದಲ್‌ನ ಅಂಬಟೆ ಸೂಡಿ ಕಟ್ಟಿಕ. ಇಂದಾ ನಿನ್ನ ತಲೆ ಕಟ್ಟನ ಸಿಂಗಾರ ಮಾಡಿಕೆ ಹೂವುನ ತಕಂಡ್ ಬನ್ನೆ. –ಎಂತ ಹೇಳಿ ಕಂಡ್ ಅಂವನ ಬಿಡಾರದ ಕಡೆಗೆ ನಡ್ಕಂಡ್ ಹೋತ್ ಅಜ್ಜಪ್ಪಾ. ಎಂತಾ ಬಯಂಕರ ನೋಟ ಅದ್?"

ದುರ್ಯೋಧನ ನಡ್‌ಗ್‌ತಿತ್ತ್. ಭೀಷ್ಮರ್ ಆ ದೃಸ್ಯನ ಕಲ್ಪನೆ ಮಾಡಿಕೊಂಡೊ. ವಿದ್ಯೆ ಬುದ್ಧಿ ಕಲ್ತೋವು ಮ್ಯೊಂಸರ ರಕ್ತ ಕುಡ್ಯೋದುಲ್ಲೆ. ಭೀಮ ಕುಡ್ದುಟು. ಅದ್ ದುಶ್ಯಾಸನನ ಮೇಲೆ ಅಂವಂಗೆ ಇದ್ದ ಸಿಟ್ಟ್‌ನ ಪರ್ಣಾಮ. ಮ್ಯೊಂಸ ಮುರ್ಗ ಆಗದಾಂಗೆ ತಡ್ಯೋದು ಅಂವನ ಒಳ್ಳೆ ಬುದ್ಧಿ. ಬಾವನೆಗ ವಿವೇಕದ ಮೇಲೆ ಜಯಗಳ್ಸಿಕನ ಅನಾಹುತಗ ಆದವೆ. ಮುಟ್ಟಾಗಿದ್ದ ದ್ರೌಪದಿನ ದುಶ್ಯಾಸನ ಕರುಣೆಂದ ಕಾಣಕಾಗಿತ್ತ್. ಅಣ್ಣನ ಅಪ್ಪಣೆನ ಮುಂದೆ ಅಂವಂಗೆ ದ್ರೌಪದಿನ ಸರೀರದ ಸ್ತಿತಿ ಆಗಲೀ, ಮಾನ ಮೊರ್ಯಾದೆ ಆಗಲೀ ದೊಡ್ಡದ್‌ಂತ ಕಂಡತ್ಲೆ. ದುರ್ಯೋಧನ ಮತ್ತೆ ಅಂವನ ಬಳಗದ ಸಾವುನ ಬರಹ ಸುರಾದೇ ಅಂದ್‌ಂದ. ರಣರಂಗಲಿ ನೆಲಕ್ಕೆ ಬಿದ್ದ್ ಮೂರ್ಛೆ ಹೋದ ಅಭಿಮನ್ಯುನ ದುಸ್ಯಾಸನನ ಮಂಜ ಕೊಂದತ್. ದುಶ್ಯಾಸನನ ಜೂವಮಾನಲಿ ಸುರುನ ಸಲ ತೋರ್ಸಿಕೆಹೊರ್ಟ ಬುದ್ಧಿವೊಂತಿಕೆ ಇರ್ಳನ ಕಾಳಗಲಿ ಘಟೋತ್ಕಚನ ಸಾವುಗೆ ಕಾರ್ಣಕರ್ತ ಆತ್. ಅಂವ ಅಂವನ ಬುದ್ಧಿವೊಂತಿಕೆನ ಅಣ್ಣಂಗೆ ಅಡವು ಇಸದೆ ಇರ್ತಿದ್ದರೆ ದ್ರೌಪದಿನ ಸೀರೆ ಎಳೆವ ಪ್ರಸಂಗ ಬಾತಿತ್ಲೆ. ಭೀಮ ಅಂದ್ ಪ್ರತಿಜ್ಞೆ ಮಾಡಿ, ಇಂದ್ ಹೀಂಗೆ ಸೇಡ್ ತೀರ್ಸಿಕಂಬತಿತ್ಲೆ. ದುಶ್ಯಾಸನ ತನ್ನ ಸಾವುನ ಬರಹಕ್ಕೆ ತಾನೇ ರುಜು ಹಾಕಿ ಕಂಡ ಬುದ್ಧಿ ಹೀನ.

ಭೀಷ್ಮರ್ ಹೇಳ್ದೊ. "ದುರ್ಯೋಧನಾ, ನಿಮ್ಮ ಎಲ್ಲರ ಕಣ್ಣ್‌ನ ಎದ್ರ್ ಇಸ್ಟ್ ದೊಡ್ಡ ಸಂಗತಿ ನಡ್ಯಕಾಕನ ನಿಮ್ಮಂದ ಏನ್ ಸಾ ಮಾಡಿಕೆ ಆತ್ಲೆ. ಇದ್ ಸಾಜ ನಡಿವಂತದ್ ಕುಂಞೀ. ನಾವು ಮಾಡುವ ಕೆಟ್ಟ ಕೆಲ್ಸಕ್ಕೆ ನಮ್ಮ ಜೂವಮಾನಲೇ ಅದರ ಪ್ರತಿಫಲನ ನಾವು ಉಣ್ಣಕಾದೆ. ಈಗ ನೋಡ್ ನಾವು ಎಲ್ಲೋವೂ ಎಂತಾ ಮೊಸ್ಸ್‌ನ ಬೇನೆನ ಅನ್ಬವಿಸೊಕು. ಈಗಾಗಲೇ ಯುದ್ಧಲಿ ಸತ್ತೋವು ಬಾಗ್ಯವೊಂತರ್. ಸಾಯಕೆನೂ ಆಗದೆ ಬೊದ್ಕಿಕೆನೂ ಆಗದೆ ಇರ್ವ ನಾವು ಇನ್ ಎಂತೆಂತ ಕೆಟ್ಟ ಸುದ್ದಿಗಳ ಕೇಳ ಬೇಕಾದೆನೋ?"

ದುರ್ಯೋಧನ ಕೇಳ್ತ್. "ಆದರೆ ಅಜ್ಜಪ್ಪಾ ದುಶ್ಯಾಸನ ಏನ್ ಪಾಪ ಮಾಡಿಟು? ನನ್ನ ಆಜ್ಞೆಗಳ ಪಾಲಿಸೋಕಾದ್ ಅಂವನ ದರ್ಮ ಅಲ್ಲನೋ?"

ಭೀಷ್ಮರ್ ದೃಡಸೊರಲಿ ಹೇಳ್ದೊ. "ತಮ್ಮ ಆಗಿ ಅಂವ ನಿನ್ನ ಆಜ್ಞೆನ ಪಾಲಿಸುದು ದರ್ಮಾಂತ ನೀ ಗ್ರೇಸಿಯ. ನಿನ್ನ ಆಜ್ಞೆಗ್ಗಳ ಅಂವ ಏಕೆ ಇದ್ ದರ್ಮನೋ, ಅದರ್ಮನೋಂತ ಏಚನೆ ಮಾಡ್ತಿಲ್ಲೇ? ಅಂವ ನಿನ್ನ ತೊಪ್ಪುನ ಒಮ್ಮೆನೂ ಪ್ರಸ್ನೆ ಮಾಡ್ತಿಲ್ಲೆ. ದರ್ಮಕ್ಕೆ ಇರೋದದ ಕೆಲಸ ಒಂದು ಆಕನ ಸುಮ್ಮಂಗೆ ಇರುವವಂಗೆ ಪಾಪಲಿ ಪಾಲ್ ಸಂದಾಯ ಆದೆ. ತೆಪ್ಪು ಕೆಲ್ಸಗಳ ಇದ್ ತೊಪ್ಪೂಂತ ಹೇಳದೊವು ದೊಡ್ಡ ಪಾಪಿಗ. ದುಶ್ಯಾಸನ ನ್ಯಾಯ, ದರ್ಮಗಳ ಆಲೋಚನೆ ಮಾಡದೆ, ಅಣ್ಣನ ಆಜ್ಞೇಂತ ಎಂತದ್ ಮಾಡಿಟೊ, ಅಂತಾ ಕೆಟ್ಟ ಕೆಲ್ಸನ ಇಸ್ಟರ ಮುಟ್ಟ ಈ ರಾಜ್ಯಲಿ ಯಾರ್ ಸಾ ಮಾಡ್ತಿಲ್ಲೆ. ಆಗ ನಾವು ಎಲ್ಲೋವೂ ಮಾತ್ ಇಲ್ಲದೆ ನೋಡ್ದೊ ಅಲ್ಲ? ಅದ್ಕೆ ನಂಗೆ ಇಂದ್ ಈ ಸ್ತಿತಿ ಬಂದುಟು. ಯಾವ ರೀತಿಂದ ನೋಡ್ರುನೂ ದುಶ್ಯಾಸನ ದೊಡ್ಡ ಪಾಪ ಮಾಡ್ದಂವ. ಆದರೆ ಕುಂಞೀ, ಇಸ್ಟರ ಮುಟ್ಟ ನಡ್ದ, ಮುಂದೆ ನಡ್ಯೋಕಾದ ಎಲ್ಲಾ ಅನಾಹುತಕ್ಕೆ ಕಾರ್ಣ ನೀನೇ. ಅದರ ಒಪ್ಪಿಕ. ಇರ್‍ಳ್ನ ಕಾಳಗಲಿ ಘುಟೋತ್ಕಚ ಸತ್ತ ಕಾರಣಂದಾಗಿ ಭೀಮ ದುಶ್ಯಾಸನನ ಕೊಂದತ್‌ಂತ ಯಾರ ಒಪ್ಪುಸಿಕೆ ನೀ ವಾದ ಮಾಡಿಯಾ?"

ದುರ್ಯೋಧನ ತಾನ್ ಮಾಡ್ದ ತಪ್ಪುನ ತಿಳ್ದ್‌ದ್ ಬಿಳಿಚಿ ಹೋತ್. ಅಂವನ ಕೈಕಾಲ್‌ಗ ಗಡಗಡ ನಡ್ಗಿಕೆ ಸುರಾತ್. ಅಂವನ ಹಕ್ಕಲೆ ಕರ್ದ್ ಕೈ ಹಿಡ್ಕಂಡ್ ಭೀಷ್ಮರ್ ಹೇಳ್ದೊ. "ಕೂಸೂ, ನಿಂಗೆ ನಿನ್ನ ಪಾಪಗಳ ಅರಿವು ಆಗದೆ ಇರ್‌ತಿದ್ದರೆ, ಹೀಂಗೆ ನೀ ಈ ಮದ್ಯಾನ ನನ್ನ ಹಕ್ಕಲೆ ಓಡಿ ಬಾಕಿಲ್ಲೆ. ಕಾಲ ಚಕ್ರ ಹಿಂದೆಗೆ ಹೋದುಲ್ಲೆ. ಕೂಸೂ ಅಲ್ಲಿ ಕುರುಕ್ಷೇತ್ರಲಿ ನೀ ಗೆಲ್ಲೋಕೂಂತ ಕರ್ಣ ಒಬ್ಬನೇ ಆಗಿ ಹೋರಾಟ ಮಾಡ್ದೆ. ಹೋಗು ಅಂವಂಗೆ ದೈರ್ಯ ಹೇಳ್. ಬಾವುದರ ಎಲ್ಲಾ ನಾವು ಎಲ್ಲೋವೂ ಒಟ್ಟ್‌ಲಿ ಎದ್ರ್‌ಸೊಮೊ."

ದುರ್ಯೋಧನ ಮತ್ತಸ್ಟ್ ನೀರ್ನ ಕುಡ್ದ್ ಹೊರ್‍ಟೋತ್. ಭೀಷ್ಮರ್ ಏಚನೆ ಮಾಡಿಕೆ ಸುರುಮಾಡ್ದೊ. ಅಭಿಮನ್ಯು ಘುಟೋತ್ಕಚ, ದ್ರೋಣರ್, ದುಶ್ಯಾಸನ, ಮುಂದೆನ ಸರದಿ ಯಾರ್ದ್? ಎದೆಗೆ ಹೆಟ್ಟಿದ ಈ ಬಾಣ ಇಂದೇ ಬಿದ್ದ್ ಹೋದರೆ? ತನ್ನದ್ ಕಡೆಗುನೂ ಆ ಸಿಕಂಡಿಂದ ಸಾಯುವ ಹಾಂಗೆ ಆತಲೇ? ಆಗ ಆ ಮಾತ್‌ಗ ಅವರ ಕೆಬಿಗೆ ಅಪ್ಪಳಿಸಿತ್. ...ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ...

*****

# ಹೋಳು – 15

## ಕಣ್ಣ್‌ಲಿ ಪಿರೀತಿ ಎದ್ ಕಂಡತ್

ಗಿರಿನಾಯಕ ತೋರ್ಸಿ ಕೊಟ್ಟದ್ ಪರಸುರಾಮರ. ಬೊದ್ಕಿರಿಕಾಕನನೇ ಕತೆ ಆದೊವು ಅವು. ಅಂಬೆ ಸಣ್ಣದಿರಿಕಾಕನ, ಅದರ ಅಪ್ಪ ಪರಸುರಾಮರ ಕತೆಗಳ ಏಸ್ಟೋ ಸಲ ಹೇಳ್ದ್ ಉಟ್ಟು. ಅಪ್ಪ ಅವರ ಕ್ಷತ್ರಿಯರ ದ್ವೇಸ ಮಾಡೋವೂಂತ ಬಣ್ಣಿಸ್‌ತಿತ್ತ್. ಕ್ಷತ್ರಿಯ ಹೆಣ್ಣ್‌ನ ಹೊಟ್ಟೆಲಿ ಹುಟ್ಟಿದ ಅವು ಕ್ಷತ್ರಿಯ ದ್ವೇಸಿ ಆಕೆ ಕಾರಣ ಏನ್‌ಂತ ಆಗ ಅದ್ಕೆ ಹೊಳ್ತಿಲ್ಲೆ. ಭೀಷ್ಮರ್‌ಂದ ಸಾಲ್ವಂದ ತಿರಸ್ಕಾರಕ್ಕೆ ಒಳಗಾದ ಮೇಲೆ ಅದ್ಕೆ ಗೊತ್ತಿಲ್ಲದೇನೇ ಕ್ಷತ್ರಿಯ ದ್ವೇಸ ಹುಟ್ಟಿಕಂಡತ್. ಅದೇ ತಾನ್ ಗಿರಿನಾಯಕಂಗೆ ಹಕ್ಕಲೆ ಆಕೆ ಕಾರ್ಣ ಆತೋ ಏನೋ ಏಂತ ಅದ್ ತನಿಗೆ ತಾನೇ ಪ್ರಸ್ನೆ ಹಾಕಿಕಂಡತ್. ಗಿರಿನಾಯಕನೂ ಒಳಗೆಂದ ಒಳಗೆ ಕ್ಷತ್ರಿಯರ್‌ನ ದ್ವೇಸ ಮಾಡ್ತಿರ್‍ದೋ? ಅದಕ್ಕಾಗಿನೇ ಅಂವ ಪರಶುರಾಮರ ತೋರ್ಸಿ ಕೊಟ್ಟತಾ?

ಅದ್ಕೆ ಅಪ್ಪ ಹೇಳ್ತಿದ್ದ ಕತೆಗ ನೆಂಪಾದೊ. ಪರಶುರಾಮರ್ ಜಮದಗ್ನಿ ರುಸಿಗೆ ರೇಣುಕೆಲಿ ಹುಟ್ಟಿದೊವು. ರೇಣುಕೆನ ಅಪ್ಪ ಸಣ್ಣ ರಾಜ್ಯ ಒಂದರ ದೊರೆ ಆಗಿತ್ತ್. ರುಸಿ, ಮುನಿಗ ಜಾತಿನ ಚೌಕಟ್ಟಿನ ಮಿರಿದ್ ಬೆಳ್ದೋವು. ಅವರ ಮೂಲನ ಪ್ರಸ್ನೆ ಮಾಡ್ದು ತಪ್ಪೂಂತ ಅಪ್ಪ ಹೇಳ್ತಿದ್ದೊ. ಜಮದಗ್ನಿ ತಾನಾಗಿ ಯಾರ ತಂಟೆಗೆ ಸಾ ಹೋಗ್ತಿಲ್ಲೆ. ರುಸಿ ಆದರ್ ಸಿಟ್ಟ್‌ನ ಗೆಲ್ಲಿಕಾಗದೆ ಒದ್ದಾಟ ಮಾಡ್ತಿತ್ತ್. ಒಮ್ಮೆ ಕಾರ್ತವೀರ್‍ಯಾರ್ಜುನ ಎಂಬ ಸೌರ್‍ಯವಂತ ಅರ್ಸು ಜಮದಗ್ನಿನ ಆಸ್ರಮಕ್ಕೆ ಬಂದಿತ್ತ್. ರುಸಿ ಸಾಕಿಕಂಡಿದ್ದ ದನಗಳ ಗುಂಪುಲಿ ಇದ್ದ ನಂದಿನಿ ಎಂತ ಹೆಸ್ರ್ ಇದ್ದ ಅಪ್ರೂಪದ ಹಸ್‌ನ ತನಿಗೆ ಕೊಡೂಂತ ಕೇಳ್ತ್. ರುಸಿ ಕೊಡಿಕೆ ಒಪ್ಪದರ್‌ಂದ ನಂದಿನಿನ ಎಳ್ಕಂಡ್ ಹೋಗಿತ್ತ್.

ಪರಶುರಾಮರ್‌ಗೆ ಈ ಇಸಯ ಗೊತ್ತಾಗಿ ಸಿಟ್ಟ್‌ಂದ ಹಾರ್‍ಯಾಡಿ ಕಾರ್ತ ವೀರ್‍ಯಾರ್ಜುನನ ಏದ್‌ರ್‌ಸಿತ್. ಆಗ ನಡ್ದ ಕಾಳಗಲಿ ಕಾರ್ತವೀರ್‍ಯ ಸತ್ತತ್. ನಂದಿನಿ ಜಮದಗ್ನಿನ ಆಸ್ರಮಕ್ಕೆ ತಿರ್‍ಗ ಬಾತ್. ಪರಶುರಾಮ ಇಲ್ಲದಿರಿಕನ ಕಾರ್ತವೀರ್‍ಯನ ಮಕ್ಕ ಜಮದಗ್ನಿನ ತಲೆನ ಕಡ್ದ್‌ದ್ ನಂದಿನಿನ ಎಳ್ಕಂಡ್ ಹೋಗಿದ್ದೊ. ಮುಂಡೆ ಮುಚ್ಚಿದ ಅಯ್ಯೆ ರೇಣುಕೆ ಪರಶುರಾಮರ್‌ಗಾಗಿ ಅಲ್ದ್, ಅಲ್ದ್, ಅವು ಸಿಕ್ಕಿಕನ ನಡ್ದ ದುರಂತನ ಹೇಳ್ತ್. ಸಿಟ್ಟ್‌ಗೆದ್ದ ಪರಶುರಾಮರ್ ಕಾರ್ತವೀರ್‍ಯನ ಮಕ್ಕಳ ಯುದ್ದಲಿ ಹೆಸ್ರ್ ಇಲ್ಲದಾಂಗೆ ಕೊಂದ್ ಹಾಕಿದೊ. ಶಸ್ತ್ರ ವಿದ್ಯೆಲಿ ಅವರಸ್ಟ್ ಪಳ್ಗಿದೊವು ಇಡೀ ಆರ್ಯಾವರ್ತಲಿ ಯಾರೂ ಸಾ ಇತ್ಲೇಂತ ಅಪ್ಪ ಹೇಳ್ತಿದ್ದದ್ ನೆಂಪಾತ್.

ಅವರ ಗುಣ, ಇಸೇಸಗಳನೂ ಅಪ್ಪ ಹೇಳ್ತಿತ್ತ್. ಅವರ್‍ದ್ ಕಸ್ಟಕ್ಕೆ ಸಿಕ್ಕಿ ಹಾಕಂಡೋವ್ಕೆ

ಸಾಯ ಮಾಡುವ ಗುಣ. ಮದ ತುಂಬಿದ ಕ್ಷತ್ರಿಯರ ಎದ್‌ರ್ ಹಾಕಂಡ್ ಯುದ್ದಲಿ ಕೊಂದ್ ಬುಡ್ತಿದ್ದೊ. ಇಡೀ ದೇಸಲಿ ನಡ್ಯೆವ ಅಧರ್ಮ, ಕೆಟ್ಟ ಕೆಲ್ಸಗಳ್‌ಗೆ ಕ್ಷತ್ರಿಯರೇ ಕಾರ್ಣಾಂತ ಅವು ಹೇಳ್ತಿದ್ದೊ. ಹಾಂಗಾಗಿನೇ ಕ್ಷತ್ರಿಯರಿಗೆ ಶಸ್ತ್ರ ವಿದ್ಯೆನ ಹೇಳಿಕೊಡ್ದುಲ್ಲೇಂತ ಅವು ಸಂಕಲ್ಪ ಮಾಡಿದ್ದೊ. ಇಡೀ ದೇಸಲಿ ಹೆಣ್ಮಕ್ಕ ವಿದ್ಯೆ ಕಲ್ಯೋಕೂಂತ ಹೇಳ್ತಿದ್ದೋವು ಅವು ಒಬ್ಬನೇ. ತಾನ್ ಬಿಲ್ವದ್ಯೆ ಮತ್ತೆ ಸಾಸ್ತ್ರನ ಅಬ್ಯಾಸ ಮಾಡಿಕಾಕನ ಹೆಣ್ಮಕ್ಕಳಿಗೆ ವಿದ್ಯೆ ಕಲ್ಸುದರ ಪಾಪನ ಪರಿಯಾರ ಮಾಡಿಕಾಗಿ ಹೋಮ ಮಾಡುವ ಪುರೋಯ್ತರಲ್ಲಿ ಈ ಇಸಯ ಹೇಳಿಕಾಕನ ಅಂವ ತಿರಸ್ಕಾರಂದ, "ದೊಡ್ಡೋವು ಏನ್ ಮಾಡ್ರು ಸಾಲೋಕಮಾಪು ಮಾಡ್ದೆ. ಇಸ್ಟಕ್ಕೂ ಅವು ಏನ್‌ನಮ್ಮ ಹಾಂಗೇ ಸುದ್ದ ಬ್ರಾಂಬ್‌ರಾ?" ಎಂತ ಕೇಳ್ದ್ ಅಂಬೆಗೆ ನೆಂಪಾದೆ. ವ್ಯವಸ್ಥೇನ ಬದ್ಲಾಯ್ಸಿಕೆ ಆಳೋವು ಮತ್ತೆ ಪುರೋಯ್ತರ್ ಒಪ್ಪಿ ಕೊಂಬೋದುಲ್ಲೇಂತ ಅದ್ಕೆ ಆಗ ಅರ್ತ ಆಗಿತ್ತ್. ಪರಶುರಾಮರ್‌ನನೇ ಗುರು ಆಗಿ ತೋರಿಸಿಕೊಟ್ಟ ಗಿರಿನಾಯಕನ ಮೋಸ್ಲ್‌ಲೇ ಅದ್ ಮೆಚ್ಚಿಕಂಡತ್. ಗುರುಗ ಬರೀ ಪಾಟನ ಹೇಳಿ ಕೊಟ್ಟರೆ ಯಾವ ಪುರ್ಸಾರ್ತ ಸಾದನೆ ಆದುಲ್ಲೆ. ಸೋಸಣೆಗೆ ಒಳಗಾದೊವು ಮತ್ತೆ ಹೆಣ್ಮಕ್ಕಳ ಪರ ನಿತ್ತಂವನೇ ನಿಜಲಿ ಗುರು ಆದೆ. ಅಂತಂವ ಇದ್ದದರ ಬದ್ಲಾಯ್ಸುದೂಂತ ಹೇಳುವ ವಿಸ್ವಾಸ ಅದರ್ಲಿ ಮೂಡತ್.

ಬೊಳ್ಪುಗೆ ಅಂಬೆ ಬೇಗ ಎದ್ದ್ ತಾನ್ ದಿನಾ ಮಾಡುವ ಕೆಲ್ಸನ ಎಲ್ಲಾ ಮುಗ್ಸಿ ಹೊರ್‌ಟ್ ನಿತ್ತ್‌ತ್. ಕಾಶಿಂದ ಹಸ್ತಿನಾವತಿಗೆ ಬಂದ್ ಅಕೇರಿಗೆ ಗಿರಿನಗರಿನ ಸೇರಿದ ಅದರ ಪೆಟ್ಟಿಗೆನ ಅದ್ ಮುಟ್ಟಿನೂ ನೋಡ್ತಿಲ್ಲೆ. ಗಿರಿ ನಗರಿನ ಜನ ತಯಾರ್ಸಿದ ಉಡ್ಪುಗ ಅದರ ಪೊರ್ಲುನ ಇನ್ನಸ್ಟ್ ಹೆಚ್ಚಿಸಿತ್. ಅದ್ ಸೌಭಕ್ಕೆ ಹೋಕಾಕನ ಉಟ್ಟ್ ಕಂಡಿದ್ದ ಅರ್ವೆಗಳ ಎಲ್ಲ ಒಗ್ದ್‌ದ್ ಮಡಿಮಾಡಿ, ಒಣ್ಗ್‌ಸಿ ಸೇವಂತಿ ತಂದ್ ಕೊಡಿಕನ "ಅದ್‌ನಿಂಗೇ ಇರ್ಲಿ" – ಎಂತ ಹೇಳಿತ್ತ್. ಎದೆ ಮೇಲೆ ಹೊಳ್ಯತಿದ್ದ ಎರ್ಡ್ ಚಿನ್ನದ ಸರಗಳ, ಕೈಲಿದ್ದ ನಾಕ್ ಚಿನ್ನದ ಬಳೆಗಳ ಕೆಬಿಲಿದ್ದ ಚಿನ್ನದ ಬೆಂಡ್‌ಗಳ ಮತ್ತೆ ಮೂಂಕುಲಿದ್ದ ಮೂಂಕುತಿ ಇದಿಸ್ಟರ ಒಳ್ಸಿಕಂಡ್ ಒಳ್ದದರ ಎಲ್ಲದರನೂ ಸೇವಂತಿಗೆ ಕೊಟ್ಟ್ ಬುಟ್ಟ್‌ತ್. ಗಿರಿನಗರಿಯ ಜನಂಗ ಮಾಡ್ದ ಉಡ್ಪುಲಿ ಒಂದ್ ಹಂಞನ ತಕಂಡ್ ದೊಡ್ಡ ಚೀಲ ಒಂದಕ್ಕೆ ತುಂಬುಸಿಕಂಡತ್.

ಅದ್ ಹೊರ್ಟ್ ನಿಲ್ಲಿಕಾಕನ ಗಿರಿನಾಯಕನ ಅಪ್ಪ-ಅವ್ವ ಮೊರ್‍ಟೊ. ಅದ್ಕುನೂ ತಡ್ಯಕೆ ಆತ್ಲೆ. ಮೋಸ, ಮರೆ, ಕೊಂಕು, ದೊಡ್ಡಸ್ತಿಕೆ ಇಲ್ಲದೆ ತಮ್ಮದೇ ಲೋಕಲಿ ಬೊದ್ಕ್‌ತಿದ್ದ ತಿಳಿವಳಿಕೆ ಇಲ್ಲದ ಜನಂಗ ಅವು. ಇನ್ನ್ ಮುಂದೆ ಇವರ ಜೂವಮಾನಲಿ ಇನ್ನೊಮ್ಮೆ ಕಾಂಬಕೆ ಆದೆನೋ? ಇಲ್ಲೆನೋ? ಕಾಶಿಂದ ಹಸ್ತಿನಾವತಿಗೆ ರಥ ಹತ್ತಿ ಹೊರ್ಡಿಕನ ಆಗದ ಬಾವನೆಗ ಈಗ ಅದರ ಹಿಂಡಿದೆ. ಆಗ ಅಪ್ಪ-ಅವ್ವನ ಆಸೀರ್ವಾದ ಪಡ್ಯೋಕೂಂತ ಎನ್ನಿಸಿತ್ಲೆ. ಇಲ್ಲಿ ಈ ಮುದಿ ದಂಪತಿಗಳ ಆಸೀರ್ವಾದ ಪಡ್ಯೋಕೂಂತ ಆತ್. ಅಂಬೆ ಹೋಗಿ ಅವರ ಕಾಲಿಗೆ ಅಡ್ಡ ಬೀಳಿಕನ ಅವು ಹಾವುನ ಮೆಟ್ಟಿದವರಾಂಗೆ ಹಿಂದೆಗೆ ಹಾರಿದೊ. ಅವರ ಮೋರೆಲಿ ಗದ್‌ರ್ಸುವ ಹಾಂಗೆ ಕಾಂಬತಿತ್ತ್. ಕಾಶಿನ

ರಾಜಕುಮಾರಿಂದ ಕಾಲ್ ಮುಟ್ಟಿಸಿ ಕಂಬೊದೋ? ಅವು ಅದರ ಕೈ ಹಿಡ್ದ್ ಎತ್ತಿ ಗಟ್ಟಿಲಿ ತೊಬ್ಬಿಕೊಂಡೊ. ಈ ಗಳ್ಗೆ ಹೀಂಗೆನೇ ಇರಿಕಾಗದೋಂತ ಅಂಬೆ ಹೇಳಿಕಂಡತ್. ನಿದಾನಲಿ ಅವರ ತೊಬ್ಬಟಂದ ಬುಡ್ಸಿಕಂಡತ್. ಅವರ ಕಣ್ಣ್‌ಲಿ ನೀರ್ ಇತ್ತ್. ಸೇವಂತಿನ ಕಣ್ಣ್‌ಗಳ್‌ಂದ ದಾರೆನಾಂಗೆ ನೀರ್ ಇಳ್ಯತಿತ್ತ್. ಎರ್ಡ್ ದಿನದ ಹಿಂದೆ ಅಂಬೆ ಅವರ ನೋಡಿಕನ ಮೊನ್ಸ್ ಬಿಚ್ಚಿ ನೆಗಾಡಿತ್ತ್. ಆದರೆ ಈಗ ನೆಗೆ ಬಾತಿಲ್ಲೆ.

ಇಂತ ಸಮಯಲಿ ಗಿರಿರಾಜ ಮಾತಾಡಿಕೆ ಸುರುಮಾಡ್ತ್. "ಬೇಕರೆ ನಿಮ್ಮ ಆಸ್ರಮಕ್ಕೆ ಬುಟ್ಟುದ್ ಬಾಂವೆ ರಾಜಕುಮಾರೀ. ಇಲ್ಲಿಂದ ಹಂಞ ದೂರ ಉಟ್ಟು. ಅದರ ಬದರಿಕಾಸ್ರಮಾಂತ ಕರ್ದವೆ. ಸೌಭಂದ ಹಸ್ತಿನಾವತಿಗೆ ಹೋಗುವ ದಾರಿಲಿ ನೀವು ಅಲ್ಲಿ ಇಳ್ದರಿ ಅಲ್ಲಾ? ಅದೇ ದಾರಿಲಿ, ಹಂಞ ಮುಂದೆಗೆ ಹೋಗಿ ಎಡಮುಡೆಗೆ ತಿರ್ಗಿರೆ ಸಿಕ್ಕಿದೆ. ರಥಲಿ ಹೋವ ಸರಿಯಾದ ದಾರಿ ಒಂದು ಅಲ್ಲಿ ಉಟ್ಟು. ಬೇಕ್‌ಂತ ಹೇಳಿಕನ ಗುರುಗಳ ಆಸ್ರಮಕ್ಕೆ ಹೋಕೆ ಭೀಷ್ಮರ್ ಮಾಡ್ದ ದಾರಿ ಅದ್. ಎಡ-ಬಲ ಎಲ್ಲನೂ ಕವಲು ದಾರಿ ಇಲ್ಲದೆ ನೇರಲಿ ಅದ್ ನಿಮ್ಮನ ಆಸ್ರಮಕ್ಕೆ ಮುಟ್ಟುಸುದು. ಭೀಷ್ಮರ್‌ಂದಾಗಿ ಕುರುಸಾಮ್ರಾಜ್ಯಲಿ ಕಳ್ಳಕಾಕರ ಬಯ ಇಲ್ಲೆ. ಆದರೆ ಇಲ್ಲಿ ಅಪಾಯದ ಕಾಡ್ ಮುರ್ಗಗ ಒಳೊ. ಅದ್ಕೆಂತಳೇ ಜೊತೆಲಿ ಬರಕೋಂತ ಕೇಳ್ದೆ. ನನ್ನದ್ ಒಂದ್ ಕುದುರೆ ಗಾಡಿ ಉಟ್ಟು. ಮಾರ್ಗಲಿ ಆಯಾಸ ಆಗದಾಂಗೆ ನಿಮ್ಮ ಅಲ್ಲಿಗೆ ಮುಟ್ಟಿಸಿನೆ."

ಅಂಬೆ ಮೊನ್ಸ್‌ಲೇ ಏಚನೆ ಮಾಡ್ದೆ. ನಾ ಇಲ್ಲಿ ಇದ್ದ ಮೂರ್ ದಿನ ಮೊನ್ಸ್‌ಗೆ ಕುಸಿಕೊಡುವವರ ಹಕ್ಕಲೆ ಇದ್ದಾಂಗೆ ಆಗ್ತಿತ್ತ್. ಬಾಸೆ ಗೊತ್ತಿಲ್ಲದವರೊಟ್ಟಿಗೆ ಸೇರ್ದ ಮೊನ್ಸ್ ಅದ್. ಗಿರಿನಾಯಕನೊಟ್ಟಿಗೆ ನಾ ಮೊನ್ಸ್ ಬಿಚ್ಚಿದ್ ಮಾತಾಡ್ದೆ. ಇಂವ ಸಾಲ್ವಂದ, ಭೀಷ್ಮರ್‌ಂದ ಒಳ್ಳೇಂವ. ಮೋಸ, ವಂಚನೆ, ಕಪಟ, ದೊಡ್ಡಸ್ತಿಕೆ ಇಲ್ಲದಂವ. ಈ ಗಿರಿನಗರಿಲಿ ಬುದ್ದಿವಂತರ ಸ್ನೇಹಕ್ಕಾಗಿ ಹಂಬಲ ಪಡಂವ. ನನ್ನ ಹಕ್ಕಲೆ ಇಂವ ಒಬ್ಬ ಒಳ್ಳೇ ಸಿನೇಯಿತನ ಹುಡ್ಕಿಕೆ ಹೊರ್ಟಿತ್ತ್. ಪ್ರಾಯಲಿ ಸಣ್ಣಂವ ಆದ ನನ್ನನ ಹೋಗಿ, ಬನ್ನೀಂತ ಗೌರವಲಿ ಮಾತಾಡ್ಸ್‌ತಿತ್ತ್. ನಾ ಮಾತ್ರ ಇಂವನ ಸಲೀಸಾಗಿ ಹೋಗು-ಬಾಂತೇಳಿನೇ ಮಾತಾಡ್ಸ್‌ತಿದ್ದೆ. ನಂಗೆ ಗೊತ್ತಿಲ್ಲದಾಂಗೆ ನನ್ನ ಮೊನ್ಸ್‌ಗೆ ಅಂವ ಹಕ್ಕಲೆ ಆತ್. ಆದರೆ ಒಬ್ಬ ಸಾಲ್ವ ಭೂಪತಿ ನನ್ನ ಮೊನ್ಸ್‌ನ ಕದ್ದದ್ ನಿಜ. ಇದೇ ಸಾಕ್. ಇನ್ನ್ ಯಾರ್ ಸಾ ನನ್ನ ಜೂವನಲಿ ಬಾದು ಬೇಡ. ನನ್ನ ಮೊನ್ಸ್‌ಲಿ ಸಾಲ್ವ ಭೂಪತಿ ಇಲ್ಲದೆ ಕಾಲಿ ಆಗುಟ್ಟು. ಆದರ್ ಸಾತ್ ಬೇರೆ ಒಬ್ಬನ ಅಲ್ಲಿ ಇರ್ಸಿಕೆ ಮೊನ್ಸ್ ಬಾದುಲ್ಲೆ. ಅದಕ್ಕೇಂತೇಳಿನೇ ಗಿರಿನಾಯಕಂದ ದೂರ ಇದ್ದದ್. ಅಂವಂಗೆ ಹೋಗು, ಬಾಂತ ಕರ್ದದ್. ಅಂವಂಗೆ ಆಸ್ರಮಕ್ಕೆ ಮುಟ್ಟ ನನ್ನೊಟ್ಟಿಗೆ ಬಾವ ಆಸೆ. ಇನ್ನ್ ಯಾಗೋಳೂ ನಾವು ಒಬ್ಬರ್‌ಂದ ಒಬ್ಬ ನೋಡಿಕಿಲ್ಲೇಂತ ಅಂವ ತಿಳ್ಕಂಡುಟ್ಟೋ ಏನೋ?

ಗಿರಿನಾಯಕನ ಗಾಡಿ ಆಸ್ರಮದ ಕಡೆ ಹೋಕನ ಅದರ ಮೊನ್ಸ್ ಏರ್ ಪೇರಾತ್. ಬಿಕ್ಕಿ ಬಿಕ್ಕಿ ಮೊರ್ದುವ ಸೇವಂತಿನ ತಲೆ ಪೂಜಿತ್. ಆ ನಿಮ್ಸಲೂ ಅಂಬೆಗೆ ತಾನ್ ರಾಜಕುಮಾರ ಆಗಿರ್ತಿದ್ದರೆ ಅದರ ಕಣ್ಣ್ ಮುಚ್ಚಿ ರಾಣಿ ವಾಸಕ್ಕೆ ಸೇರ್ಸಿ ಬುಡ್ತಿದ್ದೆಂತ

ನೆನ್ಸಿತ್. ಗಿರಿನಗರ ಹಸ್ತಿನಾವತಿನ ಹಂಗ್‌ಲಿ ಇರದಿರ್ತಿದ್ದರೆ ತಾನ್ ಇನ್ನ್ ಸಾ ಹಂಞಾ ದಿನ ಅಲ್ಲೇ ಇದ್ದ್ ಬುಡೊಕಾಗಿತ್ತ್. ಅದ್ ಭೀಷ್ಮರ ರಕ್ಷಣೆಲಿ ಇರ್ದೂಂತ ತಿಳ್ದ ಮೇಲೆ ಹಸ್ತಿನಾವತಿನ ಹಂಗ್‌ನ ಬೊದ್‌ಕ್ ಅದ್ಕೆ ಬೇಡಾಂತ ಎನ್ಸಿತ್. ಬೀಷ್ಮರ ಮೇಲೆ ಇದ್ದ ಗೌರವ ಹೋಗಿ ಸಿಟ್ಟ್ ಬಾತ್. ಇನ್ನ್ ಅಂವಂಗೆ ಹೋಗಿ, ಬನ್ನೀಂತ ಹೇಳ್ವ ಅಗತ್ಯ ಇಲ್ಲೇಂತ ಅದ್ ತಿಳ್ದ್ ಕಂಡತ್. ಕಾಶೀರಾಜ ಪ್ರತಾಪ ಸೇನನ ಪಂತನೇ ಈ ಎಲ್ಲಾ ಅವಾಂತರಕ್ಕೆ ಕಾರಣಾಂತ ಹೇಳಿ ಅಂವ ಇಡೀ ಪ್ರಕರಣಕ್ಕೆ ತಪ್ಪು ಒಕ್ಕಣೆ ಕೊಟ್ಟುಟು. ತನ್ನ ಜೂವನಲಿ ಗೊತ್ತಿಲ್ಲದೆ ನಡ್ದ ಎಲ್ಲಾ ಸಂಗತಿಗಳಿಗೆ ಕಾರ್‍ಣ ಆದ ಭೀಷ್ಮಂಗೆ ಮರ್‍ಯಕಾಗದ ಪಾಟ ಒಂದರ ಕಲ್ಸುವ ಅವ್ಕಾಸ ತನಿಗೆ ಸಿಕ್ಕಲೀಂತ ಅದ್ ಮೊನ್ಸ್‌ಲೇ ಹಾರೈಸಿತ್.

ಏನ್ ಸಾ ಮಾತಾಡದೆ ಗಾಡಿನ ಓಡ್ಸ್‌ತಿದ್ದ ಗಿರಿನಾಯಕ ಏಚನೆ ಮಾಡ್ತಿತ್ತ್. ಬೊಳ್ಪುಗೆ ಅದರನೋಡಿಕಾಕನ ಅಂಬೆ ಕುರುಸಾಮ್ರಾಜ್ಯಂದಸೊತಂತ್ರ ಆಗಿ ಇರಿಕೆ ಗಿರಿಜನಂಗಳ್ಗೆ ಆದೋಂತ ಕೇಳ್ತಲೇ? ಅದರಮೊನ್ಸ್‌ಲಿ ಏನ್ ಇದ್ದಿರ್ದು? ಗಿರಿನಗರಿ ಸೊತಂತ್ರ ಆದರೆ ತಾನ್ ಒಬ್ಬ ರಾಜ ಆಗಿ ಬುಟ್ಟನೆ. ಹಾಂಗಾಕೆ ಸಾದ್ಯ ಆಗ್ತಿದ್ದರೆ ಅಂಬೆ ಗಿರಿನಗರಿಲಿ ಇದ್ದ್ ಬುಡ್ತಿತ್ತೋ? ಅದರ ಮೊನ್ಸ್‌ಲಿ ಅಂತಾ ಒಂದು ಬಾವನೆ ಇದ್ದಿರ್‍ದೋ? ಅದ್ ಇದ್ದ ಮೂರು ದಿನ ಅದೆಸ್ಟ್ ಸಂತೋಸಲಿ ಇತ್ತ್. ಅದ್ ಕಾಶಿಲಿ ಸಿಕ್ಕದ ಅನ್ಬವಗ ಇಲ್ಲಿ ಸಿಕ್ಕಿದಕ್ಕಾಗಿ ಆಗಿರ್‍ದೋ? ಅಲ್ಲರೆ ಭೀಷ್ಮಂದ ಮತ್ತೆ ಸಾಲ್ವಂದ ಆದ ಅಪಮಾನನ ಸದ್ಯಕ್ಕೆ ಮರ್‍ಯಕೆ ಆದದಕ್ಕೆ ಆಗಿರ್ದು ಏನೋ? ನಾ ಎಲ್ಲಿ? ಅದ್ ಎಲ್ಲಿ? ನನ್ನನ ಗಂಡ ಆಗಿ ಯಾಗೋಳೂ ಅದ್ ಒಪ್ಪಿಕಿಲ್ಲೆ. ನನ್ನ ಒಣ್ಗಿ ಹೋದ ಈ ಜೂವನಲಿ ಅದ್ ಕುಸಿನ ಹರ್‍ಸಿತ್. ಮೂರೇ ಮೂರ್ ದಿನ ಆದರುನೂ ಚಿಂತೆ ಇಲ್ಲೆ. ಹೊಸ ಹುರ್‍ಪು ಮೂಡಿಸಿತ್. ಅಸ್ಟ್ ಸಾಕ್. ಈಗ ಪರಸುರಾಮರಲ್ಲಿಗೆ ಹೋದೆ. ಅದರ ಸಮಸ್ಯೆಗೆ ಯಾವ ಪರ್‍ಯಾರ ಯಾರ್‌ಂದ ಸಿಕ್ಕಿದೆನೋ?

ಗಿರಿನಾಯಕ ಹೇಳ್ತ್, "ರಾಜಕುಮಾರಿ, ಅಧಿಕಪ್ರಸಂಗಾಂತ ನೀವು ತಿಳ್ಯದಿದ್ದರೆ ನಾ ಒಂದ್ ಪ್ರಸ್ನೆ ಕೇಳ್ನೆ. ಪರಶುರಾಮರಲ್ಲಿಗೆ ಹೋಗಿ ನೀವು ಮಾಡ್ದಾದರ್ ಏನ್?"

ಏನ್‌ಂತ ಅದ್ ಇನ್ನ್ ಸಾ ನಿರ್ದಾರ ಮಾಡ್ತಿಲ್ಲೆ. ಪರಶುರಾಮರಲ್ಲಿ ಇನ್ನ್ ಹೆಚ್ಚಿನ ಬಲ್ವಿದ್ಯೆ ಮತ್ತೆ ಸಾಸ್ತ್ರ ಪುರಾಣಗಳ ಕಲ್ತ್‌ದ್ ಕಾಶಿಗೆ ಹೋಗಿ ಸಿಂಹಾಸನ ಹತ್ತಿರೆ ಏನಾದು? ಅಪ್ಪ ಮತ್ತೆ ಅವ್ವ ಬೇಡಾಂತ ಹೇಳಿಕಿಲ್ಲೆ. ಆದರೆ ಇಡೀ ಆರ್ಯಾವರ್ತಲಿ ಎಲ್ಲಿನೂ ಒಬ್ಬ ಹೆಣ್ಣ್ ಮಗಳ್ ಸಿಂಹಾಸಲಿ ಕುದ್ದ್‌ದ್ ರಾಜ್ಯದ ಆಡಳ್ತೆ ಮಾಡ್ತಿತ್ತ್ಲೆ. ಕಾಶೀ ರಾಜ್ಯನ ಒಂದ್ ಹೆಣ್ಣ್ ಹೆಂಗ್‌ಸ್ ಆಳ್ದರ ಆರ್ಯಕುಲದ ಕ್ಷತ್ರಿಯರ್ ಸೈಸಿಕಿಲ್ಲೆ. ಅದಲ್ಲದೆ ಇನ್ನ್ ಒಂದ್ ಸಮಸ್ಯೆ ಎದ್‌ರಾದು. ಅಪ್ಪನ ಪಂತಂದಾಗಿ ಕಾಶೀ ರಾಜ್ಯ ಈಗ ಹಸ್ತಿನಾವತಿಗೆ ಸೇರಿ ಹೋವುಟು. ಹೆಣ್ಣ ಹೆಂಗ್‌ಸ್ ಕಾಶಿನ ಆಳ್ದರ ಕ್ಷತ್ರಿಯರ್ ಒಪ್ಪಿ ಕೊಂಡರುನೂ, ಕಾಶಿನ ಸಿಂಹಾಸನಲಿ ಇರೋವು ಹಸ್ತಿನಾವತಿನ ಸಾಮಂತರ್ ಆದವೆ. ಸಾಲ್ವ ಭೂಪತಿನನೇ ಗೆದ್ದ ಭೀಷ್ಮರ್‌ನ ತನ್ನಿಂದ ಸೋಲ್ಸಿಕೆ ಆಕಿಲ್ಲೆ. ಆದ್ದರ್‌ಂದ ತಾನ್ ಕಾಶಿಗೆ ಸಾ ಹೋಕಾದ್ಲೇಂತ ಅಂಬೆ ನೆನ್ಸಿಕಂಡತ್.

ಗಿರಿನಾಯಕನ ಪ್ರಸ್ನೆಗೆ ಉತ್ತರ ಆಗಿ ಅಂಬೆ ಹೇಳ್ತ್, "ಏನ್ ಮಾಡ್ಲೂಂತ ನಂಗೆ ಈಗ ಗೊತ್ತಾದ್ಲೆ. ಮುಂದೆನ ಜೂವನದ ಬಗ್ಗೆ ನಾ ಏನ್ ಸಾ ಏಚನೆ ಮಾಡ್ತ್‌ಲ್ಲೆ. ಇನ್ನ್ ಮುಂದೆ ಏನಾದೆನೋ? ಯಾರಿಗೆ ಗೊತ್ತ್?"

ಗಿರಿನಾಯಕಂಗೆ ಬೇರೆ ಏನೂ ಮಾತಾಡಿಕೆ ಆತ್ಲೆ. ಮಾತ್ ಕತೆ ಇಲ್ಲದೆ ದಾರಿ ಸಾಗಿತ್. ಆಸ್ರಮ ಕಾಂಬಕಾನ ಅಂವ ಗಾಡಿ ನಿಲ್ಲಿಸಿ ಹೇಳ್ತ್, "ನಾವು ಈಗ ಆಸ್ರಮದಹಕ್ಕಲೆ ಒಳೊ. ರಾಜಕುಮಾರೀ ಇಳ್ಯನಿ. ನಾ ಇನ್ನ್‌ನಿಮ್ಮೊಟ್ಟಿಗೆಬಾದುಲ್ಲೆ. ಮುಂದೆನ ದಾರಿನ ನೀವೇ ನೋಡಿನಿ."

ಅರ್ರ್ವ ತುಂಬಿದ ಚೀಲದೊಟ್ಟಿಗೆ ಅಂಬೆ ಕೆಳಗಿಳ್ತ್. ಸಿಂಯಿ ಸೊರಲಿ ಅಂಬೆ ಹೇಳ್ತ್. "ಗಿರಿನಾಯಕ, ನನ್ನ ಜೂವನಲಿ ಒಬ್ಬ ಸಿನೇಯಿತ ಆಗಿ ಒಳ್ದಂದಂತೇಳ್ರೆ ನೀ ಒಬ್ಬನೆ. ಮೂರು ದಿನ ನನ್ನನ ಹೂವುನಾಂಗೆ ನೋಡಿಕಂಡಳ. ನಿನ್ನದ್ ದೊಡ್ಡಮೊನ್ಸ್. ಗಿರಿನಗರಲಿ ನೀ ಒಬ್ಬನೇ ಇದ್ಯೆ ಕಲ್ತಂವ ಓದು, ಬುದ್ದಿವಂತಿಕೆ ಇಲ್ಲದೆ ಯಾರ್ ಸಾ ಮುಂದೆಹೋಕಿಲ್ಲೆ. ನಿನ್ನ ಜನಂಗಳಿಗೆ ಇದ್ಯೆ ಹೇಳಿಕೊಡು. ನಿನ್ನ ಹಾಂಗೆ ಇರುವ ನಾಯಕನ ಹುಟ್ಟ್ ಹಾಕ್. ಅದ್ಕಾಗಿ ನೀ ಮೊದುವೆ ಆಕು. ಸೇವಂತಿನ ಮೊದುವೆ ಆಗಿ ಗಿರಿನಗರಿಗೆ ಒಬ್ಬ ನಾಯಕನ ಕೊಟ್ಟ್ ನಿನ್ನ್ ಬಾಳ್‌ನ ಸಾರ್ತಕ ಪಡ್ಸಿಕ. ಕುರುಸಾಮ್ರಾಜ್ಯಕ್ಕೆ ಎದ್ರ್ ನಿಲ್ಲುವ ಸೊತಂತ್ರ ರಾಜ್ಯ ಒಂದರ ಮಾಡಿಕೆ ಅಂವಂದಾದರೂ ಆದು."

ಗಿರಿನಾಯಕ ಮೆತ್ತನೆ ಸೊರಲಿ ಹೇಳ್ತ್, "ರಾಜ್ಯ ಕಟ್ಟುವ, ಸಾಮ್ರಾಜ್ಯಕ್ಕೆ ಎದ್ರ್ ಆಗಿ ನಿತ್ತ್ ನೆತ್ತರ್ ಹರ್ಸುವ ಮಾತ್ ಒಂದು ಕಡೆ ಇರ್ಲಿ ರಾಜಕುಮಾರಿ, ನೀವ್ಗೆ ಪರಶುರಾಮರ ಆಸ್ರಮ ಹಿಡ್ಸಿತ್ಲೆರೆ ಗಿರಿನಗರಿಗೆ ಹಿಂದೆ ಬಂದು ಬುಡಿ. ನಾ ಹಸ್ತಿನಾವತಿಗೆ ಕಂದಾಯ ಕೊಡಂವ. ಹಸ್ತಿನಾವತಿ ನನ್ನಂತವರ ಹಂಗ್‌ಲಿ ಇದೇಂತ ನೀವು ಏಕೆ ತಿಳ್ಕಂಬೊದ್ಲೆ? ನಾ ಏನ್ ಹಸ್ತಿನಾವತಿಂದಾಗಿ ಬೊದ್ಕುದುಲ್ಲೆ. ಹಸ್ತಿನಾವತಿ ನಮ್ಮಂದಾಗಿ ಬೊದ್ಕಿದೆ. ತೊಪ್ಪು ತಿಳ್ಯಬೋಡಿ. ನೀವುಗೆ ಯಾರುನೂ ಬಂದುಗ ಇಲ್ಲೇಂತ ಗ್ರೇಸ್ ಬೊಡಿ. ನಾ ಒಳೆ. ಇಡೀ ಗಿರಿನಗರಿನೊವು ಒಳೊ."

ಈ ಮಾತ್‌ಂದ ಅಂಬೆನ ಎದೆ ತುಂಬಿ ಬಾತ್. ಗಿರಿನಾಯಕ ಗಾಡಿ ತಿರ್ಗಿಸಿತ್. ಅಕೇರಿಗೆ ಒಮ್ಮೆ ಅದರ ಕಣ್ತುಂಬಾ ನೋಡ್ತ್. ಅಂವ ಮೊನ್ಸ್‌ಲೇ ಹೇಳಿಕಂಡತ್. ಎಲ್ಲಿಂದ ಬಂದ ನೀ? ಎಲ್ಲಿಂದ ಅವ್ತಾರ ಮಾಡಿ ನನ್ನ ಮೊನ್ಸಲಿ ಜೇನ್ ತುಂಬಿದಾಂಗೆ ಆಕೆ ಕಾರ್‍ಣ ಆದ? ನನ್ನ ಬಾಳ್‌ಲಿ ಮೂರುದಿನ ತುಂಬಿದ ನದಿ ಆಗಿ ಮಾಯ ಆದ. ಸಂತೋಸಂತ ಹೇಳ್ದು ಹೆಚ್ಚ್ ಸಮಯ ಇರ್ದುಲ್ಲೆ. ನನ್ನ ಬಾಳ್‌ನ ನದಿ ಮತ್ತೆ ಒಣ್‌ಂಗಿ ಹೋವುಟು. ಗಿರಿನಗರಲಿ ಹೊಸ್ತ್ ಏನ್ ಸಾ ಇಲ್ಲದೆ ಮುಂದೆನಾಂಗೆ ಆದೆ. ಬಂದ್ ಬುಡು ರಾಜ ಕುಮಾರೀ ಮತ್ತೆ ಗಿರಿನಗರಿಗೆ ಬಂದ್ ಬುಡು. ನನ್ನ ಬಾಳ್‌ಲಿ ಯಾಗೋಳೂ ಹುರ್ಪು ತುಂಬು.

ತನ್ನ ಕಣ್ಣ್‌ಲಿ ಬಂದ ಹಾಂಗೆ ಅದರ ಕಣ್ಣ್‌ಲಿ ಸಾ ನೀರ ಹನಿ ಬಾವುದರ ಅಂವ ನೋಡ್ತ್. ಅದ್ಕೆ ಕೈ ಜೋಡ್ಸಿ ನಮಸ್ಕಾರ ಮಾಡಿ, ಗಾಡಿ ಹತ್ತಿ ರಬಸಲಿ ಬಂದ ದಾರಿಲಿ

ಹಿಂತಿರ್‌ಗಿತ್. ಅಂಬೆ ಆಸ್ರಮದ ಕಡೆಗೆ ಹೆಜ್ಜೆ ಹಾಕಿತ್.

ಆಸ್ರಮ ದೊಡ್ಡದಾಗಿತ್ತ್. ಎದ್ರ್‌ಲಿ ಒಂದ್ ಕೆರೆ ಇತ್ತ್. ಅದ್ ತಾವರೆ ಹೂಗಳ್‌ಂದ ತುಂಬಿ ಹೋಗಿ ಕಪ್ಪೆಗ ಅಲ್ಲದೆ ಬೇರೆ ಯಾವುದು ಸಾ ನೀರ್‌ಲಿ ಇರುವ ಪ್ರಾಣಿಗ ಕಣ್ಣ್‌ಗೆ ಬೀತ್ಲೆ. ಕೆರೆನ ಎರ್ಡ್ ಪುಡೆಲಿ ಪೊರ್ಲುನ ಹೂತೋಟ ಇತ್ತ್. ಕುದ್ರಿಕೆ ಅಲ್ಲಲ್ಲಿ ಕಲ್ಲ್‌ನ ಹಾಸ್‌ಗ ಇದ್ದೊ. ಹೊಂತಗಾರ ಹೈದಂಗಳ ಎರ್ಡ್ ಗುಂಪು ಯಾವುದೊ ಒಂದು ದೊಡ್ಡ ಇಸಯದ ಬಗ್ಗೆ ಚರ್ಚೆ ನಡ್ಯತಿತ್ತ್. ಅದರ ನೋಡಿನೂ ಯಾರೊಬ್ಬರೂ ಎದ್ದ್ ಬಾತ್ಲೆ. ಏನ್ ಮಾಡ್ದೂಂತ ಅದ್ ಏಚನೆ ಮಾಡಿಕನ ಪ್ರಾಯ ಹೋದ ಒಬ್ಬ ರುಸಿ ಕಾಣ್ಸಿಕಂಡ್ ಅದರ ಪರ್ಚಯ ಮತ್ತ್ ಬಂದ ಕಾರ್ಣನ ಕೇಳ್ತ್. ಪರ್ಚಯ ಹೇಳಿಕೆ ಸಮಸ್ಯೆ ಏನ್ ಇತ್ಲೆ. ಕಾರ್ಣ ಯಾವೂಂತ ಕಾಂಬೊದುಲ್ಲೆ. "ಆಚಾರ್ಯ ಪರಶುರಾಮರ ಕಾಣಕಾಗಿತ್ತ್"– ಎಂತ ಮಾತ್ರ ಹೇಳ್ತ್. ಒಳಗೆ ಹೋದ ರುಸಿ ಹಂಞ ಹೊತ್ತ್‌ಲಿ ಮತ್ತೆ ಬಂದತ್. "ಇದ್ ಆಚಾರ್ಯರ್ ಹೈದಂಗಳಿಗೆ ಸಾಸ್ತ್ರ ಹೇಳಿ ಕೊಡುವ ಸಮಯ. ಆಸ್ರಮಕ್ಕೆ ಒಂಟಿ ಆಗಿ ಹೆಣ್ ಮಗ ಬಾಕೆ ಆಗದ್‌ಂತ ಕಟ್ಟಳೆ ಉಟ್ಟು. ನೀ ಒಬ್ಬಳೇ ಬಂದದರ ತಿಳ್ದ್ ಸಮಸ್ಯೆ ಗಂಬೀರದ್ದ್ ಆಗಿರೋಕೂಂತ ಈ ಕೂಡ್ಲೇ ನಿನ್ನ ಒಳಗೆ ಬಾಕೆ ಹೇಳ್ಯೊಳೊ. ಆ ಬಾಕಿಲ್‌ಂದ ಒಳಗೆ ಹೋದರೆ ಸುರು ಸಿಕ್ಕುದ್ದು ಸಾದನೆ ಮಾಡುವ ಜಾಗೆ. ಅಲ್ಲಿ ಆಚಾರ್ಯರ್ ಒಬ್ಬನೇ ಒಳೊ. ದೈರ್ಯಂದ ಹೋಗ್. ಯಾವ್ದರ ಸಾ ಅಣ್ಣ್‌ಂಗ್‌ಸದೆ ಎಲ್ಲಾ ಇಸಯನನೂ ಅವರ ಮುಂದೆ ಹೇಳಿ ಪರ್ಹಾರ ಪಡ್ಕ."

ಅದ್ ಆಸ್ರಮ ಒಂದರ ನೋಡ್ದು ಇದೇ ಸುರು. ಇಡೀ ದೇಸಲಿ ಇರುವ ಬಾಳ ದೊಡ್ಡ ಆಚಾರ್ಯರ ಆಸ್ರಮದ ಗಂಭೀರತೆ ಅದರ್‌ಲಿ ಅಳ್ಕ ಉಂಟ್ ಮಾಡ್ತ್. ಗಿರಿನಗರಿ ಸಾ ದೂರಕ್ಕೆ ಗಂಬೀರಲಿ ಕಾಂಬತಿತ್ತ್. ಆದರೆ ಅಲ್ಲಿನ ಮಕ್ಕ. ಹೆಣ್ಮಕ್ಕ, ಹೊಂತಗಾರ ಹೈದಂಗ ಅಲ್ಲಿನ ಕಾಡ್‌ಗೆ ಜೂವ ತುಂಬುಸಿದ್ದೊ. ಇಲ್ಲಿ ಹಾಂಗೆ ಅಲ್ಲ. ತಾನ್ ಏನ್ ಮಾತಾಡ್ರೆ, ಎಲ್ಲಿ ತೊಪ್ಪಾದನೋ ಎಂತ ನೆಂದ್ ಅದ್ ಹೆದ್ರಿ ಹೋಗಿತ್ತ್. ಪರಶುರಾಮರ ಬಗ್ಗೆ ಅಪ್ಪ ಹೇಳ್ತಿದ್ದದರ ಅದ್ ನೆನ್ಸಿ ಕಂಡತ್. ಬಾಳ ಬೇಗ ಕೋಪ ಬಾವ ಮ್ಯೊಂಸ. ಇಡೀ ಆರ್ಯಾವರ್ತದ ಎಲ್ಲಾ ಕಷ್ಟಕ್ಕೆ ದರ್ಪ, ಹಣ ಮತ್ತೆ ತನ್ನ ತೋಳ್ ಬಲಂದ ಕೊಬ್ಬಿದ್ದ ಕ್ಷತ್ರಿಯರೇ ಕಾರಣಾಂತ ತಿಳ್ದ್‌ಕೊಂಡೊವು. ಅನ್ಯಾಯಕ್ಕೆ ಬಲಿ ಆದವರ ಪರ ಅವು ನ್ಯಾಯಕ್ಕಾಗಿ ಹೋರಾಟ ಮಾಡುವ ದೊಡ್ಡ ಮ್ಯೊಂಸ.

ಈಗ ಅದ್ಕೆ ದೈರ್ಯ ಬಾತ್. ಆಚಾರ್ಯರ್ ತನಿಗೆ ಒಂದು ದಾರಿನ ತೋರಿಸಿಯೇ ತೋರ್ಸುವೋಂತ ನಂಬಿಕೆಂದ ಅದ್ ಒಳಗೆ ಹೋತ್. ಪರಶುರಾಮರ್ ಈಚಲ್ ಮೊಂದ್ರಿಲಿ ದರ್ಬೆಗಳ ಹರ್‌ಂಡಿ ನೇರಲಿ ದ್ಯಾನ ಮಾಡುವವರಾಂಗೆ ಕುದ್ದಿದ್ದೊ ಉದ್ದದ ಬಿಳಿ ಗಡ್ಡ, ಬಿಳಿ ಜುಟ್ಟು, ಮೋರೇಲಿ ಹೊಳ್ಪುನ ತೇಜಸ್ಸ್ ಇತ್ತ್. ಮ್ಯೊಂಸಂಗೆ ಬಣ್ಣ ಮತ್ತೆ ಜಾತಿ ಅಗತ್ಯನೇ ಇಲ್ಲೇಂತ ಇಡೀ ಜಗತ್ತ್‌ಗೆ ತೋರ್ಸಿಕೊಟ್ಟ ದೊಡ್ಡ ಮ್ಯೊಂಸ ಅವು. ದನ ಸಾಂಕಿಕಂಡ್ ಊರ್‌ಂದ ಊರ್‌ಗೆ ತಿರ್ಗಿಕಂಡ್ ಬೊದ್ಕ್ ಮಾಡ್ತಿದ್ದ ಆರ್ಯರ ಬೂಮಿಲಿ ಸಾಗುವಳಿ ಮಾಡ್ದರ್‌ಂದ ಜೂವನ ಸಾಗ್ಸಕಂತ ಹೇಳಿ

ಕೊಟ್ಟೋವು ಅವು. ಇಡೀ ದೇಸನ ಎಲ್ಲಾ ಕಡೆಗೆ ಕಾಲ್ ನಡ್ಗೆಲಿನೇ ನಡ್ದ್, ತುಂಬಾ ಲೋಕದ ಅನ್ಬವನ ಪಡ್ದೋವು ಅವು. ಇಡೀ ದೇಸದ ಅಸ್ಟ್ ರಾಜರ್‌ಗೆನೂ ಬುದ್ಧಿ ಹೇಳಿಕೆ, ಅಗತ್ಯ ಬಿದ್ದರೆ ಬುದ್ದಿ ಕಲ್ಸಿಕೆ ಸಾಮರ್ತ್ಯ ಇದ್ದೋವು ಅವು. ಇಂತಾವರ ಶಿಷ್ಯೆ ಆಕೆ ಪುಣ್ಯ ಮಾಡಿರೋಕೂಂತ ನೆನ್ಸಿಕಂಡ್ ಅಂಬೆ ಅವ್ಕೆ ಉದ್ದಾಂಡ ನಮಸ್ಕಾರ ಮಾಡ್ತ್.

ಪರಶುರಾಮರ್ ಕಣ್ಣ್ ಬುಟ್ರೊ. ಅಂಬೆನ ತಲೆಂದ ಕಾಲ್ನ ಮುಟ್ಟ ನೋಡಿ ಗಂಬೀರ ಸೊರಲಿ ಹೇಳ್ದೊ "ಕಾಶಿ ರಾಜಕುಮಾರಿ ಅಂಬೆಬಂದುಟುಂತ ರುಸಿ ತಿಳ್ಸಿತ್. ಒಬ್ಬಳೇಬಂದಳಗಡ. ಕುದ್ರು. ಬಂದ ಕಾರ್ಣನ ಅಳ್ಕ್ ಇಲ್ಲದೆಹೇಳ್.

ಅಂಬೆ ಅಲ್ಲಿನೇ ನೆಲಲಿ ಕುದ್ದ್ ಕಂಡತ್. ಮರ್‍ಯೋಕೂಂತ ಗ್ರೇಸಿದ ತನ್ನ ಕಳ್ದ ಕತೆನ ಆಚಾರ್ಯರ ಎದ್‌ರ್ ಹೇಳಿಕಂಡೇ ಹೋತ್. ಅಪ್ಪ ಪ್ರತಾಪಸೇನ ಮಹಾರಾಜ ಸಕ್ತಿನ ಪಂತಕ್ಕೆ ಇಸಿ ಸೊಂಯಂವರ ಏರ್ಪಾಡ್ ಮಾಡ್ದ್. ಅಕಸ್ಮತ್ತಾಗಿ ಅದ್ ಕಾಶಿನ ಉಪವನಲಿ ಸಾಲ್ವ ಭೂಪತಿನ ಕಂಡದ್, ಸೊಂಯಂವರಕ್ಕೆ ಕರ್‍ಯದೆ ಬಂದ್ ಭೀಷ್ಮ ಮಂಟಮೆಗೆ ನುಗ್ಗಿ ಸಾಲ್ವ ಭೂಪತಿನ ಸೋಲ್ಸಿ, ಹಸ್ತಿನಾವತಿಗೆ ಕರ್ಕಂಡ್ ಬಂದದ್, ಅಲ್ಲಿಂದ ಸೌಭಕ್ಕೆ ಹೋಗಿ ಸಾಲ್ವ ಭೂಪತಿಂದ ತಿರಸ್ಕಾರ ಆದ್ದ್, ಗಿರಿನಗರಿಲಿ ಅದರ ಜೂವಮಾನದ ಮೂರು ದಿನದ ಬಾಳ ಕುಸಿನ ದಿನಗಳ ಕಳ್ದದ್, ಇನ್ನ್ ಮುಂದೆ ಸನ್ನೇಸಿ ಆಗಿ ಆಸ್ರಮಲಿ ಇರೋಕೂಂತ ನಿಚ್ಚಯ ಮಾಡ್ದ್, ಶಸ್ತ್ರ ಮತ್ತೆ ಸಾಸ್ತ್ರನ ಆಚಾರ್ಯರ್‌ಂದ ಕಲ್ಯೋಕೂಂತ ತಾನೇ ತೀರ್ಮಾನ ಮಾಡ್ದ್ ಎಲ್ಲದರ ಸಾ ಹೇಳ್ತ್.

ಅದರ ಕತೆನ ಕೇಳಿ ಅವರ ಹುಬ್ಬುಗ ಮೇಲೆ ಏರ್ತ್. ಸಮ್ದಾನ ಮಾಡ್ವ ಸೊರಲಿ ಅವು ಹೇಳ್ದೊ. "ನಿಂಗೆ ತುಂಬಾ ಅನ್ನೇಯ ಆಗುಟ್ಟುಮಗಳೇ. ಆದರೆನಿನ್ನನಿರ್ಣಯಸರಿ ಅಲ್ಲ. ನನ್ನ ಅವ್ವ ರೇಣುಕೆ ರಾಜಕುಮಾರಿ ಆಗಿ ಇದ್ದೋಳು. ಆಸ್ರಮಲಿ ಅದರಬೊದ್‌ಕ್ ಕುಸಿಲಿ ಇತ್ತೆ. ಜಾತಿ, ಬಣ್ಣ, ಹೆಚ್ಚ್ ಏಕೆ ಇಡೀಲೋಕನನೇ ಗೆದ್ದ್ ಕೊಂಡೊವೂಂತ ಹೇಳಿಕೊಂಡಿದ್ದ ರುಸಿ, ಮುನಿಗ, ಕಾಮನ, ಸಿಟ್ಟ್‌ನ ಗೆದ್ದಿರ್ದುಲ್ಲೆ. ಅದರ ನಿಜದ ಅರ್ತ ಬ್ರಹ್ಮಚರ್ಯ ವ್ರತ ಮಾಡಿಕೆ ಯಾರ್‌ಂದಲೂ ಸಾದ್ಯ ಆದುಲ್ಲೆ. ಬ್ರಹ್ಮಚಾರಿಗಾಂತ ಕರ್ಸಿಕೊಂಬೊವು ಮೊಸ್ಸ್‌ನ ಹರ್‍ಯಕೆ ಬುಟ್ಟವೆ. ಸಂಸಾರಿ ಆಗಿ ಇದ್ದರೂ ನನ್ನ ಅಪ್ಪ ಜಮದಗ್ನಿ ಉರಿವ ಕೊಳ್ಳಿ ಆಗಿದ್ದೊ"

ನಾವುನೂ ಮ್ಯೊಂಸರೇ, ನೀ ಈಗ ನನ್ನ ಕೈ ಕೆಳಗೆ ಕಲ್ಯಕೆ ಬಂದಳ. ಇಸ್ಟರ ಮುಟ್ಟ ನಾ ಹೆಣ್ಮಕ್ಕಳ್‌ಗೆ ವಿದ್ಯೆ ಹೇಳಿ ಕೊಟ್ಟಂವ ಅಲ್ಲ. ಕಲ್ಸಿಕೆ ಬೊತ್ತ್‌ಂತ ಏನ್ ಸರ್ತ ನನ್ನಲ್ಲಿಲ್ಲೆ. ಆದರೆ ಸಸ್ತ್ರ ಮತ್ತೆ ಸಾಸ್ತ್ರ ಕಲ್ಯೋದರ್‌ಂದ ನಿಂಗಾದ ಅನ್ನೇಯನ ಸರಿಪಡ್ಸಿಕೆ ಆದುಲ್ಲೆ. ಕ್ಷತ್ರಿಯಾಂತೇಳುವ ಹಂಕಾರಂದ ನಿನ್ನ ಅಪ್ಪ ಸಕ್ತಿನ ಪಂತಕ್ಕೆ ಒಡ್ಡಿತ್. ತಮ್ಮ ದೊಡ್ಡಸ್ತಿಕೆಗೆ ಪೆಟ್ಟ್ ಬೀತ್‌ಂತ ಸಾಲ್ವ ಮತ್ತೆ ಭೀಷ್ಮ ಸೊಂಯಂವರಕ್ಕೆ ಬಾವ ಹಾಂಗಾತ್. ಸಮಸ್ಯೆನ ಹುಟ್ಟು ಹಾಕಿದೊವು ಇವು. ಈಗ ನೀ ಇವರ್ಲಿ ಒಬ್ಬನ ಆರ್ರೊಸು. ಸೊತ ನಾನೇ ನಿನ್ನೊಟ್ಟಿಗೆ ಬನ್ನೆ. ನೀ ಯಾರ ಒಪ್ಪಿಯನೋ ಅವರೊಟ್ಟಿಗೆ ನಿನ್ನ ಮೊದುವೆ ಮಾಡ್ಸಿನೆ.

ಬೇರೆ ಏಚನೆ ಮಾಡ್ದರ ಬುಟ್ಟ್ ಬುಡು. ನನ್ನ ಮಾತ್‌ನ ಮೀರ್‌ವ ಎದೆಗಾರಿಕೆ ಇಡೀ ಆರ್ಯಾವರ್ತಲಿ ಯಾರಿಗೆ ಸಾ ಇಲ್ಲೆ. ಏಚನೆ ಮಾಡ್"– ಎಂತ ಹೇಳಿ ದ್ಯಾನ ಮಾಡಿಕೆ ಸುರು ಮಾಡ್ದೊ.

ಅಂಬೆನ ಮೊನ್ಸ್ ಗೊಂದಲದ ಗೂಡಾತ್. ಅದ್ ಏಚನೆ ಮಾಡಿಕೆ ಸುರುಮಾಡ್ತ್. ಸಮಸ್ಯೆನ ಪರ್ಯ್ಹಾರ ಮಾಡಿಕೇಂತ ನಾ ಇಲ್ಲಿಗೆ ಬಂದರೆ ಆಚಾರ್ಯರ್ ಹೊಸ ಸಮಸ್ಯೆನ ಹುಟ್ಟು ಹಾಕುವೆ. ನನ್ನನ ತಿರಸ್ಕಾರ ಮಾಡ್ದ ಸಾಲ್ವ ಭೂಪತಿನ ಇಲ್ಲರೆ ಭೀಷ್ಮನ ನಾ ಆಯ್ಕೆ ಮಾಡೋಕು. ಸಾಲ್ವ ಭೂಪತಿ ನನ್ನ ಮೊನ್ಸ್‌ನ ಕದ್ದಂವ. ಅಂವನನೇ ಹೇಳಿ ಪರಶುರಾಮರ ದಯೆಂದ ನಾ ಸುಕಲಿ ಇದ್ದ್ ಬುಡೊಮೊ. ಆದರೆ ಅಂವ ತನ್ನ ದೊಡ್ಡಸ್ತಿಕೆಗಾಗಿ ಪ್ರೀತಿನ ಬಲಿಕೊಟ್ಟ ಮೂರ್ಕ. ಆಚಾರ್ಯರ್ ಹೇಳ್ರೆ ನನ್ನನ ಅಂವ ಹೆದ್ರಿ ಒಪ್ಪಿಕಂಡ್ ಮೊದುವೆ ಆದು. ಅದ್ ಒತ್ತಾಯದ ಮೊದುವೆ ಆದೆ. ಮೊನ್ಸ್ ಮುರ್ದ್ ಹೋದ ಮೇಲೆ ಮೊದುವೆ ಆಗಿ ಏನ್ ಸುಕ? ನಂಗೆನೂ ಅಸ್ಟೆ. ಅಂವನ ಮೇಲೆ ಮುಂದೆನ ಪ್ರೀತಿ ಒಳ್ದತ್ಲೆ. ಅಂವನ ನೆಂಪಾಕನ ಹುರ್ಪು ಬಾದ್ಲೆ. ಮೊನ್ಸ್ ಕೊಣ್ಯೋದುಲ್ಲೆ. ಪ್ರೀತಿ ಇಲ್ಲದ ಮೊದುವೆಗೆ ಅರ್ತ ಉಟ್ಟೋ? ಪ್ರೀತಿಗಾಗಿ ದೊಡ್ಡಸ್ತಿಕೆನ ಬುಡದಂವ ಒಬ್ಬ ಗಂಡ್‌ಸೇ?

ಒಂದ್ ಸಮಯ ಸಾಲ್ವ ಭೂಪತಿನ ಒಟ್ಟಿಗೆ ನನ್ನ ಮೊದುವೆ ಆದರೆ ಅಂವ ದಿನೋಳೂ ನನ್ನ ಹಂಗುಸುದು. ಭೀಷ್ಮನ ರಥ ಹತ್ತಿದೋಳು, ಹಸ್ತಿನಾವತಿನ ಭಿಕ್ಷೇಂತ ಹೇಳಿ ನನ್ನ ಅಂವ ಮಾತ್ ಮಾತ್‌ಗೂ ಚುಚ್ಚುದು. ಸೊಂಯಂವರ ಮಂಟಮೆಲಿ ಆದ ಅಪಮಾನನ ಅಂವ ಜೂವ ಮಾನ ಇಡೀ ನೆಂಪುಲಿ ಇಸಿಕಂಡದೆ. ಅಂವನ ಅಸ್ಟ್ ಜನ ಸಭೆಲಿ ಇದ್ದವೊರಲ್ಲಿ ಒಬ್ಬನೇ ಒಬ್ಬ ನನ್ನ ಪರ ಒಂದೇ ಒಂದ್ ಮಾತ್‌ನ ಹೇಳ್ತಿಲ್ಲೆ. ಮೂರ್ಕ ದೊರೆನ ದೊಡ್ಡ ಮೂರ್ಕ ಪ್ರಜೆಗ! ಅಂವ ನನ್ನ ಕೈ ಹಿಡ್ದಿದ್ದರೆ ಇಡೀ ಆರ್ಯಾವರ್ತಲಿ ನಡ್ಯತಿದ್ದ ಆಚರ್ಣೆನ ಬದ್ಲಾಯ್ಸಿಕೆ ಆಗ್ತಿತ್ತ್. ಇನ್ನ್ ಅಂವನ ಜೂವಮಾನ ಇಡೀ ಕೊರೆದು ಅಪಮಾನ ಮತ್ತೆ ಬುಟ್ಟಿರಕಾದ ಬೇನೆ ಬೇಡ, ಒತ್ತಾಯದ ಮೊದುವೆ ಬೇಡ. ಅಂವಂದ ಗಿರಿನಾಯಕ ಸಾವಿರ ಪಾಲ್ ಒಳ್ಳೆಂವ. ಗಿರಿನಾಯಕನಕ್ಕಲೆ ಬೇನೆಗೆ ಕರ್‍ಗುವ ಕರ್ಳ್ ಉಟ್ಟು. ಮತ್ತೆ ನಾ ಗಿರಿನಗರಕ್ಕೆ ಹೋದರೆ ಎದೆ ತುಂಬಿ ನನ್ನ ಕರ್ಕಂಬೊದು. ಸಾಲ್ವ ಭೂಪತಿಲಿ ರೂಪ ಉಟ್ಟು, ಯೌವ್ವನ ಉಟ್ಟು, ಎದೆಗಾರಿಕೆ ಉಟ್ಟು, ಹಣ ಉಟ್ಟು, ವಿದ್ಯೆ ಉಟ್ಟು. ಆದರೆ ಏನ್ ಸಾ ಮಾಡಿಕೆ ಬೊತ್ತದ ಹೆಣ್ಣ್‌ನ ಬೇನೆನ ತಿಳ್ಯುವ ಹೃದಯ ಇಲ್ಲೆ. ಅಂತಂವನ ನಾ ಗಂಡ್‌ಂತ ಒಪ್ಪಿಕಿಲ್ಲೆ. ನನ್ನ ಗಂಡಂತ ತಿಳ್ಯಕೆ ನಂಗೆ ಆಕಿಲ್ಲೆ.

ಹಾಂಗಾದರೆ ನಂಗೆ ಬೇಕಾದಂವ ಭೀಷ್ಮ! ಗುರುಗಳ ಮಾತ್‌ನ ಗೌರವಂದ ಕಂಡ್ ಬ್ರಹ್ಮಚರ್ಯನ ಬುಟ್ಟ್ ಅಂವ ನನ್ನನ ಮೊದುವೆ ಆದೋ? ಸಾದ್ಯನೇ ಇಲ್ಲೆ. ನಾ ಏಕೆ ಭೀಷ್ಮನ ಒಪ್ಪೋಕು? ಪರಶುರಾಮರ ಮಾತ್‌ನ ಏಕೆ ಕೇಳೋಕು? ಕಾಶಿಂದ ಭೀಷ್ಮನ ರಥ ಏರಿ ಹಸ್ತಿನಾವತಿಗೆ ನಾ ಹೊರ್ಡಿಕಾಕನ ನಂಗೆ ಭೀಷ್ಮನ ಮೇಲೆ ತುಂಬಾ

ಗೌರವ ಇತ್ತ್. ಸಾಲ್ವ ಭೂಪತಿಂದ ತಿರಸ್ಕಾರ ಪಡ್ದ ಮೇಲೂ ಆ ಗೌರವ ಹಾಂಗೆನೇ ಇತ್ತ್. ಮತ್ತೆ ಅದ್ ಮಾಯ ಆತ್. ಗೌರವದ ಸ್ತಾನಲಿ ಈಗ ಇರ್ದು ಸೇಡ್. ಈ ಭೀಷ್ಮ ಸೊಂಯಂವರ ಕಣಕ್ಕೆ ಬಾರದೆ ಇರ್ತಿದ್ದರೆ ನಾ ಸಾಲ್ವ ಭೂಪತಿನ ರಾಣಿ ಆಗಿ ಇರ್ತಿದ್ದೆ. ಭೀಷ್ಮ ನನ್ನ ಬಾಳ್‌ನ ಹಾಳ್ ಮಾಡ್ತ್. ಕುರು ಸಾಮ್ರಾಜ್ಯದ ಪೊಳ್ಳು ಪ್ರತಿಸ್ಟೆ ಮತ್ತೆ ಹೆಗ್ಗಳಿಕೆಗಾಗಿ ಒಳ್ಸಿ ಕಂಡ ನಿಸ್ಟೆನ ಎದ್‌ರ್ ಹೆಣ್ಣ್ ಒಂದರ ಮುಂದೆನ ಜೀವನ ಏನೇನ್ ಸಾ ಅಂವಂಗೆ ಅಲ್ಲ. ಅಂವಂದಾಗಿ ಏನ್ ಮಾಡಿಕೆ ಬೊತ್ತದ ಹೆಣ್ಣ್‌ನ ಜೀವನ ಹಾಳಾದರೆ ಅಂವಂಗೆ ಬೇನೆ ಆದುಲ್ಲೆ. ಅಂವ ಅದ್ಕಾಗಿ ಬೇಜಾರ ಮಾಡ್ದುಲ್ಲೆ. ಅಂವಂದ್ ದೊಡ್ಡ ಸಂಕಲ್ಪ. ಭೀಷ್ಮನೇ ಹೆಣ್ಣ್ ಮಕ್ಕಳ ಹೀಂಗೆ ನಡ್ಸಿಕಂಡದೆ ಎಂತ ಆದರೆ ಇಡೀ ದೇಸಲಿ ಹೆಣ್ಮಕ್ಕ ಸುಕಲಿ ಇರಿಕೆ ಸಾಧ್ಯನೇ ಆಕಿಲ್ಲೆ. ಅಂವಂಗೊಂದು ಪಾಟ ಕಲ್ಸೋಕು ಅದ್ ಆಚಾರ್ಯ ಪರಶುರಾಮರ್‌ಂದ ಮಾತ್ರ ಆದು.

ಹಂಞ ಹೊತ್ತ್‌ಂದ ಮೇಲೆ ಆಚಾರ್ಯರ್ ಕಣ್ಣ್ ಬುಟ್ಟ್ ಪ್ರೀತಿಂದ ಕೇಳ್ದೊ. "ಯಾವನಿರ್ದಾರಕ್ಕೆಬಂದಳಮಗಾ?"

ಅಂಬೆ ಮೆತ್ತಂಗೆ ಹೇಳ್ತ್, "ಪೂಜ್ಯರೇ, ನಂಗೆ ಈಗಸಾಲ್ವಭೂಪತಿನ ಆಗಲೀ ಭೀಷ್ಮರ ಆಗಲೀ ಮೊದುವೆ ಆಕೆ ಇಚ್ಚೆ ಇಲ್ಲೆ. ಯಾಂವನೋ ಒಬ್ಬಂಗೆ ಈ ಸರೀರನ ಕೊಟ್ಟ್ ಅಂವನಮೂರ್ಕತನಗಳಸೈಸಿಕಂಡ್ ಜೀವಮಾನ ಇಡೀ ಅಂವನ ದಾಸಿ ಆಗಿ ಪತಿವ್ರತೇಂತ ಕರ್ಸಿಕಂಬ ಇಚ್ಚೆ ನಂಗೆ ಇಲ್ಲೆ. ಮೊದುವೆನ ಬಂದನಂದ ದೂರ ಆಗಿ ಇಡೀ ದೇಸಕ್ಕೆ ದಾರಿ ತೋರ್ಸಿದೊವು ನೀವು. ಕಾಶಿಲಿ ನಾ ಹಂಞ ಸಾಸ್ತ್ರ ಅಬ್ಬೆಸ ಮಾಡಿಯಳೆ. ನಂಗೆ ಓದೊಕೂಂತ ಆಸೆ ಉಟ್ಟು. ನಿಮ್ಮಂದ ಸಾಸ್ತ್ರನ ಕಲ್ಯೊಕೂಂತ ನಂಗೆ ಆಸೆ. ಇಡೀ ಆರ್ಯಾವರ್ತದ ಹೆಣ್ಮಕ್ಕಳ್‌ಗೆ ಹೊಸ ದಾರಿ ತೋರ್ಸುವ ಹಂಬಲ ನಂಗೆ. ಅದರ ಈಡೇರ್ಸಿಕೆ ದಾರಿ ತೋರ್ಸಿರೆನಾ?"

ಪರಶುರಾಮರ ಮೋರೆಲಿ ಕುಸಿ ಕಂಡದೆ. "ನಿನ್ನ ಇಚ್ಚೆ ಒಳ್ಳೆದ್ ಮಗಳೇ. ಆದರೆ ನಿಂಗೆ ಆದ ಅನ್ನೆಯನ ನಿನ್ನ ಒಬ್ಬನ ದೃಷ್ಟಿಲಿ ನಾ ನೋಡ್ದುಲ್ಲೆ. ಸಮಸ್ಯೆನ ಎಲ್ಲರ ದೃಷ್ಟಿಲಿ ನೋಡಂವ ನಾ. ಒಬ್ಬ ಅಂಬೆಗೆ ಅನ್ನೆಯ ಆಕನ ಈ ದೊಡ್ಡ ಆರ್ಯಾವರ್ತಲಿ ಅದರ ಇರೋದ ಮಾಡಂವ ಒಬ್ಬ ಸಾತ್ ಇಲ್ಲೆಲೇಂತ ನಂಗೆ ಬೇಜಾರ. ಹಾಂಗಾರೆ ಹೆಣ್ಮಕ್ಕಳ್‌ಗೆ ಆಗುವ ಅನ್ನೆಯ ಹೆಚ್ಚಾದು. ನೀ ಕಲ್ಯೋದರ ಬಗ್ಗೆ ಆ ಮೇಲೆ ಏಚನೆ ಮಾಡೊಮೊ. ಭೀಷ್ಮ ಮತ್ತೆ ಸಾಲ್ವರ್‌ಲಿ ಯಾರ್ನ ಆಯ್ಕೆ ಮಾಡ್ಯ?"

ಕೂಡ್ಲೇ ಅಂಬೆ ಹೇಳ್ತ್. "ಭೀಷ್ಮನ ಪೂಜ್ಯರೇ, ನನ್ನ ಬಾಳ್‌ನ ಹಾಳ್ ಮಾಡ್ದಂವ ಅಂವ. ಸರಿಮಾಡಕಾದಂವನೂ ಅಂವನೇ."

ಪರಶುರಾಮರ್ ಒಪ್ಪಿದೊ "ಇದ್ ಈಗ ಸರಿಯಾದ ಮಾತ್. ಆಸ್ರಮದ ಉಪಯೋಗಕ್ಕೆಂತ ಒಂದು ರಥ ನಮ್ಮಲ್ಲಿ ಉಟ್ಟು. ನಾಕ್ ಕುದ್ರೆಗ ಸಾ ಒಳೊ. ನಾಳೆ ನಾವು ಹಸ್ತಿನಾವತಿಗೆ ಹೋಕೆ ತಯಾರಾಗ್. ನಿನ್ನ ಇಸ್ಟರಮುಟ್ಟದ ಕಸ್ಟಕ್ಕೆ ನಾಳೆ ಬುಡ್ಗಡೆ ಸಿಕ್ಕಿದೆ."

ಮತ್ತೆ ಹಸ್ತಿನಾವತಿಗೆ! ಗಾಬರಿಂದ ಅಂಬೆ ಹೇಳ್ತ್, "ಪೂಜ್ಯರೇ, ಹಸ್ತಿನಾವತಿಗೆ ಹೋಕೆ ಮೊನ್ಸ್ ಒಪ್ಪುದುಲ್ಲೆ. ಭೀಷ್ಮರ ಇಲ್ಲಿಗೆ ಕರ್ಸಿಕೆ ಆದುಲ್ಲೆನಾ?"

ಪರಶುರಾಮರ್ ತಲೆ ಹಂದಾಡ್ಸಿದೊ. "ಆದೆ. ಆದರೆ ಇದಕ್ಕೆ ತುಂಬಾ ಸಮಯ ಬೇಕಾದು. ಅಂವ ಇಲ್ಲಿಗೆ ಬರೊಕರೆ ನಾ ಸುದ್ದಿ ಕಳ್ಸಿ, ಕಾರಣ ಹೇಳಕಾದೆ. ಅಂವ ರಾಜಕಾರಣದ ನೆಪ ಹೇಳಿ ಬೇಕೆಂತಳೇ ತಡಮಾಡ್ದು, ನನ್ನ ಮಾತ್‌ಗೆ ಗೌರವ ಕೊಟ್ಟ್‌ದ್ ಬಂದರುನೂ ಈ ಆಸ್ರಮದ ಸಾಂತತೆಲಿ ಈ ಬ್ರಹ್ಮಚಾರಿಗಳ ಎದ್‌ರ್‌ಲಿ ಏನೇನೋ ಮಾತ್‌ಗ ಬಾದು ನಂಗೆ ಇಸ್ಟ ಇಲ್ಲೆ. ನಾಳೆನೇ ನಾವು ಹಸ್ತಿನಾವತಿಗೆ ಹೋಗಿ ಬುಟ್ಟರೆ ಅಂವಂಗೆ ಏಚನೆ ಮಾಡಿಕೆ ಸಮಯ ಇರ್ದುಲ್ಲೆ. ನಿನ್ನ ಪರ ನಿತ್ತ್ ನಾ ಮಾತಾಡಿಕನ ಅಂವನ ದೈರ್ಯ ಕುಗ್ಗಿದೆ. ಅಂವನ ಮಾತ್‌ಗ ಅರ್ತನ ಕಳ್ಕಂಡವೆ. ಗುರುನ ಮಾತ್‌ನ ಅಂವ ಮಿರಿಕಿಲ್ಲೆ. ನಂಗೆ ಎದ್ರ್ ಮಾತಾಡ್ರೆ ಅಂವನ ಸೊಕ್ಕುನ ಮುರ್ದ್‌ದೇ ನಾ ಬಾದು. ಇನ್ನ್ ಚರ್ಚೆ ಬೇಡ. ಈ ರುಸಿ ನಿನ್ನನ ಅಂವನ ಕುಟೀರಕ್ಕೆ ಕರ್ಕಂಡ್ ಹೋದೆ. ಅಂವ ಸಂಸಾರಸ್ಥ. ಬೊಳ್ಪುಗೆ ಕೋಳಿ ಕೂಂಗಿಕನನೇ ಎದ್ದ್ ಬುಡು. ಎಸ್ಟ್ ಬೇಗ ಆದೋ ಅಸ್ಟ್ ಬೇಗ ಹಸ್ತಿನಾವತಿಗೆ ಪೋಯಿ."

ಆ ತಪಸ್ವಿನ ಕುಟೀರ ದೊಡ್ಡದಿತ್ತ್. ಅವುಕೆ ಅಂಬೆನ ಪ್ರಾಯದ ಮಗ ಒಬ್ಬಳ್ ಇತ್ತ್. ಅದ್ ತುಂಬಾ ಮೆತ್ತಂಗೆ ಮಾತಾಡೋಳು. ಅದರ ಸಣ್ಣ ಮಗಳ್ ನೀಹಾರಿಕಾ ಅಂಬೆಗೆ ಬಾಳ ಇಸ್ಟ ಆತ್. ಇರ್‍ಳ್ ಅಂಬೆ ಮೃದುಭಾಷಿಣಿನ ಹಕ್ಕಲೆ ಮೊಲ್ಗಿಕಂಡ್ ಇರಿಕಾಕನ ಅದ್ ಅದರ ಕತೆನ ಅಂಬೆಗೆ ಹೇಳ್ತ್. ಮೃದುಭಾಷಿಣಿ ವಿದ್ಯೆನೇ ಕಲ್ಯದೆ ಬೆಳ್ದ ಹೆಣ್ಣ್, ಹೆಣ್ಮಕ್ಕಳ್ ವಿದ್ಯೆ ಕಲ್ಯೋದು ಧರ್ಮಕ್ಕೆ ಇರೋದಾಂತ ಅದರ ಅಪ್ಪ ತಿಳ್ಕಂಡಿತ್. ನಾಕ್ ವೊರ್ಸದ ಹಿಂದೆ ಪರಶುರಾಮರಲ್ಲಿಗೆ ಕಲ್ಯಕೆ ಬಂದಂವ ಒಬ್ಬ ಮೃದು ಭಾಷಿಣಿನ ಪ್ರೀತಿ ಮಾಡಿ, ಮೊದುವೆ ಆನೇಂತ ಹೇಳಿ, ಅದರ ಬೊಸ್ರಿ ಮಾಡಿ, ಇರ್‍ಳ್‌ಗೆ ಇರ್‍ಳೇ ಅಲ್ಲಿಂದ ಓಡಿ ಹೋತ್. ಅಂವಂದ್ ಬಾಳ ದೂರದ ಪ್ರಾಗ್ಜ್ಯೋತಿಷಪುರ ಊರು. ಅಲ್ಲಿಗೆ ಬದರಿಕಾಶ್ರಮಂದ ಏನಿಲ್ಲರೂ ಸಾವಿರಾರ್ ಮೈಲ್ ದೂರ. ಹುಡ್ಕಂಡ್ ಹೋದರೂ ಅಂವ ಅಲ್ಲಿ ಸಿಕ್ಕುದೂಂತ ಬರೋಸೆ ಇಲ್ಲದರ್‌ಂದ ಅದರ ಅಪ್ಪ ದಾರಿ ಕಾಣದೆ ಸುಮ್ಮಂಗಾತ್. ಪರಶುರಾಮರ್‌ಗೆ ಈ ಇಸಯನ ಹೇಂಗೆ ತಿಳ್ಸುದೂಂತ ಅಂವ ಪೇಚಾಡ್ತಿತ್ತ್. ಹೀಂಗಾದ ಮೇಲೆ ಅಪ್ಪನೇ ಮಗಳ್‌ಗೆ ಸಾಸ್ತ್ರ ಪಾಟ ಹೇಳಿಕೊಟ್ಟತ್. ಇಸಯ ಪರಶುರಾಮರಿಗೆ ಹೇಂಗೋ ಗೊತ್ತಾತ್. ಅವು ತಪಸ್ವಿ ಮಾಡ್ದರ ಒಪ್ಪಿಕೊಂಡೊ. ಈಗ ಮೃದು ಭಾಷಣಿಗೆ ಇರ್ದು ಒಂದೇ ಗುರಿ. ಹೆಣ್ಮಕ್ಕಳ್‌ದ್ದ್ ಒಂದ್ ಆಸ್ರಮ ಮಾಡಿ, ಅವ್ಕೆ ಬಿಲ್ವಿದ್ಯೆ ಮತ್ತೆ ಸಾಸ್ತ್ರ ಪುರಾಣ ಕಲ್ಸುದು.

ಮೃದುಭಾಷಿಣಿ ಜೂವನ ಮಾಡುವ ರೀತಿನ ಅಂಬೆ ಮೆಚ್ಚಿಕಂಡತ್. ತಾನ್ ಇದರೊಟ್ಟಿಗೆ ಸೇರಿ ಕೆಲ್ಸ ಮಾಡಿರೆ ಹೇಂಗೇಂತ ತನ್ನನ ತಾನೇ ಪ್ರಸ್ನೆ ಮಾಡಿಕಂಡತ್. ವಿದ್ಯೆ ಕಲ್ಯಕೆ ಬಂದ ಹೈದ ಒಬ್ಬಂದ ಮೋಸ ಹೋದ ಮೃದುಭಾಷಿಣಿ ಅದರ ಒಂದು ಸವಾಲಾಗಿ ಸ್ವೀಕಾರ ಮಾಡಿ ಹೆಣ್ಮಕ್ಕಳ ಎಲ್ಲಾ ಏಳ್ಗೆಗೆ ಸಣ್ಣ ಒಂದು ಹೆಜ್ಜೆನ ಇಸಿಟು.

ಇದ್ಕೆ ಬೆಂಬಲ ಸಿಕ್ಕರೆ ಅದ್ ಗೆಲ್ಲುದು. ಇದಕ್ಕೆ ನಾ ಜೊತೆ ಆದರೆ ಇದರ ಉದ್ದೇಸ ಸಾದನೆ ಆದರ ಜೊತೆಗೆ ತನ್ನ ಬೊದ್ಕಿಗೆ ಒಂದು ಅರ್ತ ಸಿಕ್ಕಿದಂಗಾದೆ.

ಅಂಬೆ ಅದರ ಮೃದುಭಾಷಿಣಿನೊಟ್ಟಿಗೆ ಹೇಳಿಕಾಕನ ಅದ್ ಹೇಳ್ತ್, "ರಾಜಕುಮಾರೀ ಪರಶುರಾಮರ್ ನಮ್ಮಂದ ಹೆಚ್ಚಿಗೆ ತಿಳ್ವಳಿಕೆ ಉಳ್ಳವು. ಅವು ಹೇಳ್ದಾಂಗೆ ಮಾಡುದು ಒಳ್ಳೆದ್. ಗುರುಪರಶುರಾಮರ ಮಾತ್‌ನ ಶಿಷ್ಯ ಭೀಷ್ಮ ಮಿೂರಿಕುಟ್ಟೋ? ಭೀಷ್ಮರ ಕೈ ಹಿಡ್ದ್ ಹಸ್ತಿನಾವತಿನ ರಾಣಿ ಆಕಾದವುಳು ನೀ. ಆಗನೀ ಇಂತಾ ಸಾವಿರಾರ್ ಆಸ್ರಮನ ಮಾಡ್ವ. ನನ್ನಂದಾದು ಇಸ್ಟೇ. ರಾಣಿ ಆದರೆ ನಿನ್ನಂದಾ ತುಂಬಾ ಕೆಲ್ಸ ಆದು. ಹೆಣ್ಮಕ್ಕಳ ಶೋಷಣೆ ಮಾಡಿಕೆ ಹುಟ್ಟು ಹಾಕಿದ ಕಟ್ಟ್ ಕಟ್ಟಳೆಗಳ ಆಗ ನಿಂಗೆ ಬದ್ಲಾಯ್ಸಿಕೆ ಆದು. ತುಂಬಾ ಸಾಧನೆನ ಮಾಡಬೇಕಾದ ನೀ ಈ ಕಾಡ್‌ಲಿ ನಾರು ಬಟ್ಟೆ ಹಾಕಂಡ್ ಕಾಲ ಕಳ್ಯವ ಮಾತ್‌ನ ಹೇಳ್ಬಡ."

ಮೃದುಭಾಷಿಣಿನ ಮಾತ್‌ಗ ಅಂಬೆನ ಗುರಿನ, ಕಾಂಬ ಹಾಂಗೆ ಆತ್. ಮೊದುವೆನೇ ಬೇಡಾಂತ ಹೇಳ್ತಿದ್ದ ಅಂಬೆಗೆ, ಅದ್ ಭೀಷ್ಮನ ಮೊದುವೆ ಆದರ್‌ಂದ ಸಿಕ್ಕುವ ಲಾಭನ ಕಂಡ್ ಕಂಡ್‌ತ್. ಭೀಷ್ಮ ಗುರುಗಳ ಮಾತ್‌ಗೆ ಗೌರವ ಕೊಟ್ಟ್, ಮೊದುವೆ ಆದರೆ ಹಸ್ತಿನಾವತಿನ ರಾಣಿ ಆಗಿ ಇರುವ ಈಗನ ಕಟ್ಟ್‌ಕಟ್ಟಳೆಗಳ ಹೆಣ್ಮಕ್ಕಳ ಪರ ಆಗಿ ಬದ್ಲಾಯ್ಸಿಕೆ ಪ್ರಯತ್ನ ಪಡೊಕು. ಅಂವ ಒಪ್ಪಿತ್ಲರೇ? ಆಗ ಪರಶುರಾಮರ್‌ಂದ ಭೀಷ್ಮನ ಪೊಳ್ಳು ಪ್ರತಿಸ್ಟೆ ಬಂಗ ಆದರ ನೋಡಿ ತೃಪ್ತಿ ಪಡ್ದು, ಆಮೇಲೆ ಇಲ್ಲಿಗೆ ಬಂದ್ ಮೃದುಭಾಷಿಣಿಗೆ ಹೆಗ್ಲ್‌ಗೆ ಹೆಗ್‌ಲ್ ಕೊಟ್ಟ್‌ದ್ ದುಡ್ಯೋದು.

ಅಂಬೆನ ಮೊನ್ಸ್ ಹಗ್‌ರಾಗಿ ಹಂಞ ಹೊತ್ತ್‌ಲಿ ಗಾಡ ನಿದ್ದೆ ಬಾತ್.

*****

# ಹೋಳು – 16

# ಕರ್ಣಾಂತೇಳ್ವ ಸೂರ್ಯ ಮುಣ್ಂಗಿತ್

ಸೂರ್ಯ ಮುಣುಂಗಿಕಾಕನ ಇದ್ದಕ್ಕಿದ್ದ ಹಾಂಗೆ ರಣರಂಗಂದ ಆವರೆಗೆ ಕೇಳಿ ಬಾತಿದ್ದ ಕಾಳಗದ ಕರ್ಕಸ ಸದ್ದ್ ಅಣ್ಂಗಿತ್. ಭೀಷ್ಮರಿಗೆ ಅದ್ ಸೈಸಿಕೆ ಆತ್ಲೆ. ಏನೋ ಕೆಟ್ಟದ್ ನಡ್ದದೇಂತ ಬಾಸ ಆಕೆ ಸುರಾತ್. ಏನ್ ಕೆಟ್ಟದ್ ನಡ್ದಿರ್ದು? ಶಲ್ಯನ ಸಾರಥ್ಯಲಿ ಕರ್ಣ ಅರ್ಜುನನ ಕೊಂದ್ ಬುಟ್ಟತಾ? ಇಲ್ಲರೆ ದುಶ್ಶಾಸನ ಸತ್ತದರ ನೋಡಿ ಹೆದ್ರಿ ಹೋದ ದುರ್ಯೋಧನ ಎಲ್ಲಾದರ್ ಭೀಮನ ಕೈಗೆ ಸಿಕ್ಕಿ ಬಿದ್ದ್ ಸತ್ತತೋ? ಕಾಳಗನೇ ನಿತ್ತ್ ಹೋತೋ? ಹೇಂಗೆ ತಿಳ್ಯೋದು? ದುರ್ಯೋಧನ ಸತ್ತ್‌ದ್ ಕರ್ಣ ಬೊದ್ಕಿ ಒಳ್ದರೆ ಹಸ್ತಿನಾವತಿನ ಸಿಂಹಾಸನನ ಅಂವ ಹತ್ತಕಾದೆ. ಯುಧಿಷ್ಠಿರಂದ ಅಂವ ಹೆಚ್ಚ್‌ನ ಪರಾಕ್ರಮಿ, ಮೊನ್ನೆನ ಸಡ್ಲ ಬುಟ್ಟದ್ ಜೂಜು ಆಡಿ ರಾಜ್ಯನ ಕಳ್ಕಂಬಕಿಲ್ಲೆ. ಸಿಂಹಾಸನಕ್ಕೆ ಸರಿಯಾದ ಜನ. ಜೂವಮಾನ ಇಡೀ ಸೂತನಮಂಜ ಎಂತ ಅಪಮಾನಕ್ಕೆ ಒಳಗಾದ ಕರ್ಣ ಕುರುಸಾಮ್ರಾಜ್ಯದ ಚಕ್ರವರ್ತಿ ಆಗಲಿ ಜೂವನಲಿ ಅಂವಂಗೂ ಸಂತೋಸದ ನಿಮ್ಸಗ ಬರ್‍ಲಿ.

ಕತ್ತಲೆ ಆಕಂಡ್ ಬಾತ್. ಕೆಲ್ಸದಂವನ ಕೇಳಿರೆ ಯುದ್ಧರಂಗಲಿ ಏನ್ ನಡ್ದಿರ್‍ದೂಂತ ತನಿಗೆ ಗೊತ್ತಿಲ್ಲೇಂತ ಹೇಳ್ತ್. ಸಿಕಂಡಿಂದ ಹೀಂಗೆ ಮೊಲ್ಗಿದ ಮೇಲೆ ರಣರಂಗಲಿ ನಡ್ಯವ ಇಸಯನ ದುರ್ಯೋಧನ, ಇಲ್ಲರೆ ಕರ್ಣ ತಿಳ್ಸ್‌ತಿದ್ದೊ. ಇಂದ್ ಇಸ್ಟ್ ಹೊತ್ತ್ ಆದರುನೂ ಯಾರ್ ಸಾ ಕಾಂಬೋದಿಲ್ಲೆ ಏಕೇಂತ ಭೀಷ್ಮರ್ ಚಡಪಡಿಸಿಕೆ ಸುರು ಮಾಡ್ದೊ. ಯಾರೋ ಬಾವ ಹೆಜ್ಜೆ ಸದ್ದಾತ್. ಬಾರೀ ಕುತೂಹಲಂದ ಅವು ಬಾಕಿಲ್‌ಕಡೆ ನೋಡ್ದೊ. ಕರ್ಣ ಬಾತೋ? ಹಕ್ಕಲೆ ಬಾಕನ ಗೊತ್ತಾತ್. ಬಂದಂವ ದುರ್ಯೋಧನಾಂತ ಅಂವ ಮದ್ಯಾನ ಬಂದಿತ್ತ್. ದುಶ್ಶಾಸನನ ಹೆದ್ರಿಕೆ ಹುಟ್ಟುಸುವ ಕೊಲೆನ ಸುದ್ದಿನ ತಂದಿತ್ತ್. ಈಗ? ಬಂದವನೇ ತಲೆ ಬೊಗ್ಗಿಸಿ ಆಸನಲಿ ಕುದ್ದತ್. ಮದ್ಯಾನ ಅಂವನ ಮೋರೆಲಿ ಸತ್ತ ಹೆಣದ ಕಳೆ ಇತ್ತ್. ಕಣ್ಣ್‌ಲಿ ಒಂದ್ ತೊಟ್ಟು ನೀರಿತ್ಲೆ. ಈಗ ದಳದಳಾಂತ ಕಣ್ಣ್‌ಲಿ ನೀರ್ ಸೊರ್‍ದದೆ. ಏನಾಗುಟು ಇಂವಂಗೆ?

ದುರ್ಯೋಧನ ಸಂಣಂವ ಇರಿಕಾಕನ ಇದ್ದ ದಿನಂಗ ಭೀಷ್ಮರ್‌ಗೆ ನೆಂಪಾದೊ. ದೃತರಾಷ್ಟ್ರನ ಹನ್ನೊಂದ್ ಜನ ರಾಣಿಯರ್‌ಗೆ ನೂರ ಒಂದು ಮಕ್ಕ. ಕುರು ವಂಶದೊವು ಸಾಮ್ರಾಜ್ಯನ ದೊಡ್ಡದ್ ಮಾಡ್ದೊ. ಧೃತರಾಷ್ಟ್ರ ಸಂತಾನ ಸಾಮ್ರಾಜ್ಯನ ದೊಡ್ಡದ್ ಮಾಡಿಕೆ ಕಾರಣ ಆತ್. ದೊಡ್ಡಂವಾಂತ ದುರ್ಯೋಧನನ ಮೇಲೆ ಅವ್ಕೆ ಹೆಚ್ಚ್ ಪ್ರೀತಿ ಇತ್ತ್. ಅಂವನ ಕುರುಸಾಮ್ರಾಜ್ಯದ ಚಕ್ರವರ್ತಿ ಆಗಿ ಮಾಡೊಕೂಂತ ಅವ್ಕೆ ಆಸೆ ಇತ್ತ್.

ಎಸ್ಟೋ ಸಲ ಇವರ ತೊಡೆಲಿ ಅಂವ ಉಚ್ಚೆ ಹ್ಯೊದುಟೋ? ದೊಡ್ಡ ಹಟದ ಹೈದ. ಅಂವ ಹಟ ಮಾಡಿಕಾಕನ ಎರ್ಡ್ ಪೆಟ್ಟ್ ಹೊಡ್ದರುನೂ ಅಂವನ ಕಣ್ಣಂದ ನೀರ್ ಬಾತಿಲ್ಲೆ. ಕಾಡ್‌ಲಿ ಅಲ್ಡ್ ಕಂಡ್ ಇದ್ದ ಪಾಂಡೋವರ ಹಸ್ತಿನಾವತಿಗೆ ಕರ್ಕಂಡ್ ಬಂದ ಮೇಲೆ ಅಂವನ ಹಟ ಇನ್ನ್ ಹೆಚ್ಚಾತ್. ಭೀಮನೊಟ್ಟಿಗೆ ಅಂವನೇ ಕಾಲ್ ಕೆದ್ರಿಕಂಡ್ ಜಗಳಕ್ಕೆ ನಿತ್ತ್ ಬುಡ್ತಿತ್ತ್. ಎಲ್ಲ ಸಲನೂ ಅಂವ ಸೋತ್‌ಬುಡ್ತಿತ್ತ್. ಭೀಷ್ಮರ್ ಹಕ್ಕಲೆ ಕರ್ದ್ ಇಬ್ರೊರನೂ ತೊಡೆ ಮೇಲೆ ಕುದ್ರಿಸಿ, "ಕುರು ಸಾಮ್ರಾಜ್ಯದ ಆದಾರ ಕಂಬಗ ನೀವು. ಹೀಂಗೆ ಹೊಡ್ಕಂಬಕೆ ಆಗದ್. ಸಾಮ್ರಾಜ್ಯನ ಒಳ್ಳಿಕಾಗಿ ನಿಮ್ಮ ಸಕ್ತಿನ ಉಪಯೋಗಿಸಿನಿ."– ಎಂತ ಬುದ್ದಿವಾದ ಹೇಳ್ತಿದ್ದೊ. ಆದರೂ ಹೊಡ್ದಾಟ ನಿಲ್ತಿತ್ತೆ. ಸೋತರೂ ದುರ್ಯೋಧನ ಕಣನೀರ್ ಹಾಕ್‌ತಿತ್ತೆ. ಲಕ್ಷ್ಮಣಕುಮಾರ ಸತ್ತತ್. ಜಯದ್ರಥನ ಅರ್ಜುನ ಕೊಂದತ್. ದುಶ್ಯಾಸನ ಇಂದ್ ಮದ್ಯಾನ ಎದೆ ನಡ್ಗ್‌ಸುವ ಹಾಂಗೆ ಇಂವನ ಕಣ್ಣ ಎದ್‌ರೇ ಸತ್ತತ್. ಯಾವ ಗಳ್ಗಿಲಿನೂ ಇಂವನ ಕಣ್ಣ್ ಚೆಂಡಿ ಆತಿಲ್ಲೆ. ಇಸ್ಟ್ ದಿನ ಕಟ್ಟಿಸಿದ ಕಣನೀರ್ ಈಗ ದಾರೆನ ಹಾಂಗೆ ಅರ್ದದೆ.

ಭೀಷ್ಮರ್ ದುರ್ಯೋಧನನ ಕಣ್ಣ ಸನ್ನೆ ಮಾಡಿದ್ ಹಕ್ಕಲೆ ಬಾಕೆ ಹೇಳ್ದೊ. ತಲೆ ಬೊಗ್ಗಿಸಿ ನಿತ್ತಂವನ ತಲೆನ ಪೂಜಿದ್ ದ್ಯೆರ್ಯ ಹೇಳ್ದೊ.

ನಿರ್ದಾರ ಮಾಡಿದ ಸೊರಲಿ ನಿದಾನಲಿ ಹೇಳ್ದೊ. "ನಿನ್ನ ಬೇನೆಗ ಎಲ್ಲಾ ಕಣನೀರ್ ಆಗಿ ಹರ್ದ್‌ಹೋಗಲಿ. ಅತ್ತ್‌ದ್ ಮೊನ್ಸ್‌ನ ಹಗ್‌ರ ಮಾಡಿಕ ಕೂಸು. ನನ್ನ ಇಷ್ಟರ ಮುಟ್ಟದ ಜೂವನಲಿ ಎಸ್ಟೋ ಸಲ ಮೊರ್ಡ್ಡೊಕೂಂತ ನಂಗೆ ಆತಿತ್ತ್. ಆದರೆ ಕುಂಞೀ, ಒಂದೇ ಒಂದ್ ಸಲ ಸಾ ನಂಗೆ ಕಣನೀರ್ ಹಾಕಿಕೆ ಆತಿಲ್ಲೆ. ನೀ ಮೊರ್ಟ್ಟರೆ ನಿನ್ನ ಸಮ್ದಾನ ಮಾಡಿಕೆ ನಿನ್ನ ಹೆಣ್ಣ್ ಭಾನುಮತಿ ಉಟ್ಟು. ನಿನ್ನ ಅಪ್ಪ ಧೃತರಾಷ್ಟ್ರ, ಅವ್ವ ಗಾಂಧಾರಿಗ ಒಳೊ. ನಿನ್ನ ಅಜ್ಜಪ್ಪ ಭೀಷ್ಮ ಉಟ್ಟು. ನಾ ಮೊರ್ಟ್ಟರೆ ಕಣ್ಣೊರ್ರೋವು ಯಾರ್ ಇಲ್ಲೇಂತ ಎಲ್ಲದರ ಸಾತ್ ನುಂಗಿಕೊಂಡೊಳೆ."

ದುರ್ಯೋಧನನ ಮೊರ್ಡ್ದೇಲ್ ನಿತ್ತತ್. ಅಂವ ಮೊನ್ಸಲೇ ಏಚನೆ ಮಾಡಿಕೆ ಸುರು ಮಾಡ್ದೆ. ಅಜ್ಜಪ್ಪನ ಜೂವಮಾನ ಒಂದು ದೊಡ್ಡ ಯಾತ್ರೆ. ಉದಾಕೂ ಅದ್ ಎಸ್ಟ್ ಬೇನೆಗ? ಅವ್ಕೆ ಹೆಣ್ಣ್‌ನ ಸುಕ ಸಿಕ್ಕಿತ್ತೆ. ಮಕ್ಕಳ ಭಾಗ್ಯ ದಕ್ಕಿತ್ತೆ. ಪಾಂಡೋವರ್ದ್ ನ್ಯಾಯಾಂತ ನಿಸ್ಟೂರಲಿ ಹೇಳ್ರೂ ಸಿಂಹಾಸನಕ್ಕೆ ಒಳ್ಳೆದಾಕಾಗಿ ಕುರುಪಾಳ್ಯಲಿ ಒಳ್ದ್ ಬುಟ್ಟೊ. ಹತ್ತ್‌ದಿನ ಕೌರವರ್‌ಗೆ ದೊಡ್ಡ ನಸ್ಟ ಬಾರದಾಂಗೆ ನೋಡಿಕೊಂಡೊ. ಸಿಖಂಡಿಂದಾಗಿ ಇವು ಈ ಸ್ತಿತಿಗೆ ಮುಟ್ಟಿದ ಮೇಲೆ ಕೌರವ ಪಕ್ಷಕ್ಕೆ ಸೋಲ್‌ನ ಮೇಲೆ ಸೋಲಾದೆ. ದೊಡ್ಡ ನಸ್ಟಗ ಆಗ್‌ತಾ ಉಟ್ಟು. ಇವುಕೆ ಹೀಂಗಾಗದೆ ಇರ್ತಿದ್ದರೆ ಕುರುಸೇನೆಗೆ ಜಯ ಸಿಗ್ತಿತ್ತ್.

ನೆಂಪುಗಳ ಬಾರಂದ ದುರ್ಯೋಧನ ದುಕ್ಸ್‌ಸಿತ್. "ಅಜ್ಜಪ್ಪಾ, ಕರ್ಣನೂ ಹೋಗಿ ಬುಟ್ಟಿತ್. ಶಲ್ಯಮಾಂವ ಹಂಞ ತಾಳ್ಮೆಲಿ ಇರ್ತಿದ್ದರೆ ಕರ್ಣಬೊದ್ಕಿ ಒಳ್ಯತಿತ್ತ್. ನಾವ್ಗೆ ಗೆಲುವು ತಂದ್ ಕೊಡ್ತಿತ್ತ್. ಶಲ್ಯನ ನೊಂಬಿ ನಾವು ಮೋಸಹೋದೊ. ಅಂವನ ಸಾರತಿ ಆಗಿ ಮಾಡ್ದೇ ತೊಪ್ಪು. ಅಂವ ಹೇಂಗೆ ಇದ್ದರೂ ಪಾಂಡೋವರ ಮಾಂವ.

ಅಂವನ ನೊಂಬಿದಕ್ಕೆ ಅಂವ ಸರಿಯಾದ ಸಮಯಲಿ ಕೈ ಕೊಟ್ಟಿತ್."

ಅಚ್ಚರಿ ಇಲ್ಲದೆ ಭೀಷ್ಮರ್ ಹೇಳ್ದೊ, "ಕುಂಞೀ ಯುದ್ಧರಂಗಲಿ ನಡೆವ ಬೊಬ್ಬೆ ಒಮ್ಮೆನೇ ನಿತ್ತಹೋಕನ ಏನೋ ಅನಾವುತ ಆಗುಟ್ಟೂಂತ ನಂಗೆ ಕಂಡಿತ ಗೊತ್ತಾತ್. ಇಂದ್ ಕರ್ಣ ಇಲ್ಲರೆ ಅರ್ಜುನರ್‌ಲಿ ಒಬ್ಬ ಸತ್ತದೇಂತ ನಂಗೆ ಗೊತ್ತಿತ್ತ್. ಹೇಳ್ ಕೂಸೂ. ಕರ್ಣ ಹೇಂಗೆ ಸತ್ತತ್.?"

ದುರ್ಯೋಧನ ನಿಟ್ಟುಸ್ರ್ ಬುಟ್ಟತ್. "ಶಲ್ಯನ ಸಾರತ್ಯಲಿ ಕರ್ಣ ಬಾಳ ಉಮೇದ್‌ಲಿ ಇಂದ್ ಹೋರಾಟ ಮಾಡ್ದರ ನೀವು ನೋಡಕಾಗಿತ್ತ್. ಅರ್ಜುನನ ಗುರುಗ ದ್ರೋಣರ್. ಕರ್ಣ ಆದರೋ ಅರ್ಜುನನ ಗುರುಗಳ ಗುರುಗ ಆದ ಪರಶುರಾಮರ್‌ಲ್ಲಿ ಬಿಲ್ವಿದ್ಯೆ ಕಲ್ತಂವ. ಕರ್ಣ ಬಾಣ ಬುಡಿಕನ ಅರ್ಜುನ ನಡ್ಗಿ ಹೋತ್. ಕೃಷ್ಣನ ಸಾರತ್ಯ ಇಲ್ಲದಿರ್‌ತಿದ್ದರೆ ಆಗಳೇ ಅರ್ಜುನನ ಕತೆ ಮುಗ್ದ್ ಹೋಗ್ತಿತ್. ಕರ್ಣನ ಉಮೇದ್‌ನ ನೋಡಿ ನಾ ಕುಸಿಲಿದ್ದೆ. ಎರ್ಡ್ ಕಡೆನ ಸೇನೆಗ ಕಣ್ಣ್ ಬಾಯಿ ಬುಟ್ಟ್ ಕಾಳಗನ ನೋಡ್ತಿದ್ದೊ."

ದುರ್ಯೋಧನ ಇದ್ದಕ್ಕೆ ಇದ್ದ ಹಾಂಗೆ ದುಕ್ಖಿಸಿತ್. ಭೀಷ್ಮರ ಮೊನ್ಸ್ ರಣರಂಗಲಿ ಇತ್ತ್. ಹತ್ತ್ ದಿನದ ಯುದ್ಧಲಿ ಅರ್ಜುನ ಅವ್ಕೆ ಮೂರು ಸಲ ಎದ್‌ರಾಗಿತ್ತ್. ಯುದ್ಧಲಿ ಸೋಲ್ ಗೆಲುವು ನಿರ್ಣಯ ಆತಿಲ್ಲೆ. ಪರಶುರಾಮರ್‌ಲಿ ಬಿಲ್ವಿದ್ಯೆನ ಕಲ್ತರೂ ಭೀಷ್ಮರ್‌ಂದ ಅರ್ಜುನನ ಸೋಲ್ಸಿಕೆ ಆತ್ಲೆ. ಅಂವ ಹಿಮಾಲಯದ ತಪ್ಪಲ್‌ಲಿ ಯಾರ‍್ಯಾರೋ ಸಾಧಕರ ಪ್ರೀತಿನ ಪಡ್ಕಂಡ್ ಬಿಲ್ವಿದ್ಯೆಲಿ ಹೊಸ ಹೊಸ ತಂತ್ರನ ಕಲ್ತ್ ಬಂದಂವ. ದಕ್ಷಿಣದಲ್ಲಿ ರಾಮೇಶ್ವರ ಮುಟ್ಟ ಹೋಗಿ ಬಂದಂವ, ತುಂಬಾ ಲೋಕ ಜ್ಞಾನ ಪಡ್ದಂವ. ಅಂವನ ಓದು, ಲೋಕ ಸಂಚಾರ, ಸಾಧನೆ ಮತ್ತೆ ಸಿದ್ಧಿ ಕೃಷ್ಣನ ಬುಟ್ಟರೆ ಬೇರೆಯಾರಿಗೆ ಸಾತ್ ಇಲ್ಲೆ. ಅವು ಇಬ್ಬೊರು ಜೊತೆಲಿ ಸೇರ್ದೋಂತೇಳ್ರೆ ಕಿಚ್ಚಿನೊಟ್ಟಿಗೆ ಗಾಳಿ ಸೇರ್ದಾಂಗೆ. ಅಂತಾ ಅರ್ಜುನನ ಸೋಲ್ಸುದು ಸುಲಬದ ಸಂಗತಿ ಅಲ್ಲ ಎಂತ ಭೀಷ್ಮರ್‌ಗೆ ಕಂಡಿತಾ ಗೊತ್ತಿತ್ತ್.

ದುರ್ಯೋಧನ ಮತ್ತೆ ತನ್ನನ ತಾನೇ ಸಮ್ದಾನ ಮಾಡಿಕಂಡ್ ಮುಂದರ್ಸಿತ್. "ಅರ್ಜುನನ ಕೈಲಿ ಕರ್ಣನ ಸೋಲ್ಸಿಕೆ ಆಗದಿರಿಕನ ಅಂವ ಕರ್ಣನ ಸೂತನ ಮಂಜಾಂತ ಹಿಯಾಳಿಸಿತ್. ಅಂವನ ಹುಟ್ಟ್‌ನ ನೆಂಪು ಮಾಡಿಕೊಟ್ಟದ್, ಅಂವನ ಮೊನ್ಸ್ ಜಗ್ಗುವಾಂಗೆ ಮಾಡುವ ನೀಚ ತಂತ್ರ ಅದ್. ಹೇಳಿ ಅಜ್ಜಪ್ಪಾ, ಬಾಳ ಸೂರ ಆದ ಕರ್ಣ ಸೂತನ ಮಂಜಾಂತ ನೀವ್ಗೆ ಯಾಗಾದರ್ ಅನ್ಸಿದೆನೋ?"

ಭೀಷ್ಮರ್ ಗಂಬೀರ ಸೊರಲಿ ಗುಟ್ಟುನ ಹೊರಗೆ ಹಾಕಿದೊ "ಕರ್ಣಸೂತನ ಮಂಜ ಅಲ್ಲ ಕುಂಞೀ, ಕುಂತಿನ ಮಂಜ"

ದುರ್ಯೋಧನ ಅಚ್ಚರಿಂದ ಅಜ್ಜಪ್ಪನ ನೋಡ್ತ್. ಕರ್ಣ ಕುಂತಿನ ಮಂಜನೋ? ಕುಂತಿನ ಮಕ್ಕಳ ನೆರ್ಳು ಕಂಡರೆನೂ ಆಗದಂವ. ಈಗ ಈ ಸತ್ಯನ ಅರ್ಗಿಸಿಕಣಕು. ವೈರಕ್ಕೆ ಕುಂತಿಮೊಂಜ ಅರ್ಜುನ. ಸ್ನೇಹಕ್ಕೆ ಅದೇ ಕುಂತಿ ಮೊಂಜ ಕರ್ಣ!. ಕುಂತಿನ ಮಂಜ! ಅಜ್ಜಪ್ಪಂಗೆ ಸತ್ಯ ಗೊತ್ತಿದ್ದರುನೂ ಅಣ್‌ಂಗಿಸಿದೊನೋ? ಕರ್ಣಂಗೆ ಅದ್ ಗೊತ್ತಿದ್ದರುನೂ

ಅಂವ ಅರ್ಜುನನ ಕೊಲ್ಲಿಕೆ ಹೊರ್ಟತೋ? ದುರ್ಯೋಧನ ಮೊನ್ಸ್‌ಗೆ ಆದ ಬೇನೆಂದ ಹಣೆ ಹಣೆ ಬಡ್ಕಂಡತ್.

ದುರ್ಯೋಧನ ಸುಮ್ಮಂಗಿರ್‍ದರ ನೋಡಿ ಭೀಷ್ಮರ್ ಹೇಳ್ದೊ, "ಅದ್‌ನಿಜ ಕೂಸು. ಕರ್ಣ ಕುಂತಿನಮಂಜ. ಪಾಂಡುನಹೆಣ್ಣ್ ಆಕೆಮುಂದೆನೇ ಕುಂತಿ ಅಂವನಹೆತ್ತತ್. ಲೋಕದ ಅಪವಾದಕ್ಕೆ ಹೆದ್ರಿ ಅದ್ ಕೂಸುನ ನದಿಲಿ ಬುಟ್ಟತ್. ಆಗ ತಾನೆ ಹುಟ್ಟಿದ ಕೂಸು ನಮ್ಮ ಸೂತ ಅಧಿರಥಂಗೆ ಸಿಕ್ಕಿತ್. ಅಂವ ಬೆಳ್ಸಿದ ಗಂಡ್ ಕೂಸುನೇ ಕರ್ಣ. ಲೋಕದ ಕಣ್ಣ್‌ಗೆ ಸೂತನ ಮಂಜ."

ದುರ್ಯೋಧನ ಈಗ ಸಾ ಏಚನೆಲೇ ಇತ್ತ್. ಕುಂತಿನ ಮಕ್ಕಳ್‌ಲಿ ಸುರುನಂವ ಅಂವನ ಪ್ರಾಣದ ಸಿನೇಯಿತ ಆತ್. ಒಳ್ದೋವು ಮೂರು ಜನ ಇಡೀ ಜೂವಮಾನದ ವೈರಿಗ ಆದೋ. ಕರ್ಣ ಕುಂತಿನ ಮಂಜಂತ ಮುಂದೆನೇ ತಿಳ್ದಿದ್ದರೆ ಅಂವನ ಪ್ರಾಣಂದ ಹೆಚ್ಚಾಗಿ ಪ್ರೀತಿ ಮಾಡುವ ಸಿನೇಯಿತನ ಆಗಿ ಮಾಡಿಕೆ ಆಗ್ತಿತ್ತೋ? ಅಸಲ್‌ಗೆ ಈ ಕಾಳಗ ಆದರೂ ನಡ್ಯತಿತ್ತೋ? ಏನ್ ಮಾಡಿ ಹಾಕಿತ್, ಆ ಕುಂತಿ?

ತಾತ್ಸಾರಂದ ದುರ್ಯೋಧನ ಹೇಳ್ತ್, " ಅಜ್ಜಪ್ಪಾ, ಎಂತಾ ದುಸ್ಟಹೆಂಗ್‌ಸ್ ಆ ಕುಂತಿ? ಅದರ ನೆನ್ಸಿಕಂಡರೆ ಅಸಯ್ಯ ಆದೆ. ಗಂಡನ ದೋಸದಾಂಗಿ ಅದ್ ಮೂರು ಮಕ್ಕಳ ಪಡ್ದದರ ಕ್ಷಮಿಸಕ್. ಆದರೆ ಮೊದುವೆಗೆ ಮುಂದೆನೇ ಕರ್ಣನ ಹೆತ್ತತಲೇ? ಚೇ! ನಾಚಿಕೆ ಇಲ್ಲದೊಳು".

ಭೀಷ್ಮರ್ ನೆಗಾಡಿದೊ, "ಕುಂತಿನ ದೂರಿ ಸುಕ ಇಲ್ಲೆ. ಅದ್ ಕುಂತಿಭೋಜನ ಸಾಂಕ್ ಮಗ. ರುಸಿ, ಮುನಿಗಳ ಮೆಚ್ಚಿಸಿ ಅವು ಮಾಡ್ದ ತಪಸ್ಸ್‌ನ ಪಲನ ಪಡ್ಯಕೆ ಕ್ಷತ್ರಿಯರ್ ಮಾಡುವ ತಂತ್ರಲಿ ಇದ್ ಸಾ ಒಂದ್. ರಾಣಿಯರನೋ. ಹೆಣ್ಣ್ ಮಕ್ಕಳನೋ ಅವರ ಚಾಕ್ರಿ ಮಾಡಿಕೆ ಕಳ್ಸದು. ಸಂತಾನ ಬಾಗ್ಯ ಇಲ್ಲದ ಅರ್ಸುಗ ಹಾಂಗೆ ಮಾಡಿಕೆ ಒಂದ್ ಕಾರ್‍ಣ ಆದರ್ ಉಟ್ಟು. ಒಳ್ದವರ ಸಮರ್ತನೆ ಏನಂತ ನಿಂಗೆ ಗೊತ್ತುಟೋ ಕೂಸು? ಎಂತಾ ಸಂತಾನಾಂತ ಹೇಳ್ದು ಮುಕ್ಯ. ಯಾರ್‌ಂದಾಂತ ಹೇಳ್ದು ಅಲ್ಲ ಎಂಬ ತರ್ಕ ಅವರ್‍ದ್. ಇದ್‌ವೀರರ ಯುಗ ಕೂಸೂ. ಇಡೀ ಆರ್ಯಾವರ್ತಲಿ ಮುಂದೆನ ಜಾಗೆವಿದ್ಯೆಗಲ್ಲ. ಬುದ್ದಿವೊಂತಿಕೆಗೆ ಅಲ್ಲ. ಹಣಕ್ಕುನೂ ಅಲ್ಲ. ಬಲಕ್ಕೆ. ಬಲವೊಂದು ಇದ್ದರೆ ಏನ್ ಬೇಕರೂ ಸಾದಿಸಕ್. ತಮ್ಮಿಂದ ಆಗದ್ದ್, ಮಕ್ಕಳ್‌ಂದ ಆದರೂ ಆಗಲೀಂತ ಹೇಳ್ವ ರಾಜಕೀಯ ದುರಾಸೆ. ಕುಂತಿನ ಬಗ್ಗೆ ಅಸಯ್ಯ ಪಡ್ಬಡ. ವಂಸ ಸುದ್ದತೆ ಎಂತ ಹೇಳ್ದು ಹುಚ್ಚು. ಈ ಸತ್ಯನ ನೀ ಮರ್‍ಯಬಡ."

ದುರ್ಯೋಧನಂಗೆ ತಳಮಳ ಆತ್. ಅಜ್ಜಪ್ಪನ ಅಪ್ಪ ಶಂತನು ಚಕ್ರವರ್ತಿಗ ಚಂದ್ರವಂಸದೊವು. ಭೀಷ್ಮರ ಅವ್ವನ ವಂಸ ಯಾವುದು? ಯಾರಿಗೂ ಗೊತ್ತಿಲ್ಲದ ಗುಟ್ಟುನ ಸಂಗತಿ ಇದ್. ಸತ್ಯವತಿ ದೇವಿ ಮುಗ್ಗೆತಿ! ಅಪ್ಪ ಧೃತರಾಷ್ಟ್ರ ಮತ್ತೆ ಪಾಂಡು ಚಿಕ್ಕಪ್ಪ ಹುಟ್ಟಿದ್ ದ್ವೈಪಾಯನರ್‌ಗೆ. ಅವರ ವಂಸ ಯಾವುದು? ಅಪ್ಪ, ಅಯ್ಯೆನ ನ್ಯಾಯನ ನೋಡ್ರೆ ಪಾಂಡೋವುಕೆ ಕುರು ಸಾಮ್ರಾಜ್ಯಲಿ ಹಕ್ಕಿಲೇಂತ ಹೇಳ್ದು ಎಂತಾ

ಬುದ್ಧಿಗೇಡ್‌ನ ಮಾತ್? ಇಡೀ ಆರ್ಯಾವರ್ತಲಿ ಇರೋವು ಎಲ್ಲೋವುನೂ ಮಿಸ್ರ ಜಾತಿಯೋವು. ಬೆರ್ಕೆ ಬಣ್ಣದೊವು ಎಂತ ಹೇಳಿರೆ ಕ್ಷತ್ರಿಯರ್ ಮೇಲ್ಜಾತಿಯೊವು ಆದು ಹೇಂಗೆ? ಕುಂತಿಭೋಜ ತನ್ನ ಸ್ವಾರ್ತಕ್ಕೆ ಬೇಕಾಗಿ ಕುಂತಿನ ಯಾವುದೋ ರುಸಿನ ಚಾಕ್ರಿ ಮಾಡಿಕೆ ಕಳ್ಸಿತ್. ರುಸಿ ಪಲ ಕೊಟ್ಟತ್. ತೊಪ್ಪು ಕುಂತಿ ಭೋಜಂದ್, ಸಣ್ಣ ಪ್ರಾಯದ ಗೂಡೆ ಈ ಕಟ್ಟ್‌ಪಾಡ್‌ನ ನೊಡುಲಿ ಏನ್ ಮಾಡಿಕೆ ಆದೆ? ಯಾರ್ದೋ ಸ್ವಾರ್ತಕ್ಕೆ ಬೇಕಾಗಿ ಹುಟ್ಟಿದ ಕರ್ಣ ಜೂವಮಾನ ಇಡೀ ಬೇನೆ ತಿಂದತ್. ತೊಪ್ಪು ಯಾರ್ದ್? ಸಿಕ್ಸೆ ಯಾರಿಗೆ? ಕುಂತಿದುನೂ ತೊಪ್ಪುಟ್ಟು. ಅದ್ಕೆ ಏಕೆ ಸತ್ಯವತಿ ದೇವಿನ ದೈರ್ಯ ಬಾತಿಲ್ಲೆ? ಸತ್ಯವತೀ ದೇವಿ ದ್ವೈಪಾಯನರ ತನ್ನ ಮಗಾಂತ ಒಪ್ಪಿಕಂಡ್ ದೈರ್ಯಲಿ ಲೋಕನ ಎದ್‌ರ್ ಹೇಳ್ತ್. ಕುಂತಿನೂ ಹಾಂಗೆ ಮಾಡಕಾಗಿತ್ತ್. ಕರ್ಣ ತನ್ನ ಮಂಜಾಂತ ಕುಂತಿ ಲೋಕದ ಎದ್‌ರ್ ಒಪ್ಪಿಕಂಬತಿದ್ದರೆ, ಕುರು ಸಾಮ್ರಾಜ್ಯದ ಚರಿತ್ರೆನೇ ಬದಲಾಗಿ ಹೋಗ್‌ತಿತ್ತ್. ಅದ್ ಹಾಳಾಗಿ ಹೋಗಲಿ. ಈ ಅಜ್ಜಪ್ಪ ಆದರೂ ಹೇಳಕಾಗಿತ್ತ್.

ಅಡ್ಡಿಪಡ್ನುನ ದನಿಲಿ ದುರ್ಯೋಧನ ಹೇಳ್ತ್, "ಅಜ್ಜಪ್ಪಾ, ಕರ್ಣ ಕುಂತಿನ ಮಂಜಾಂತ ನೀವ್ಗೆ ತಿಳ್ದದ್ ಯಾಗ?"

ಸಮ್ದಾನಲಿ ಭೀಷ್ಮರ್ ಉತ್ತರ ಕೊಟ್ಟೊ. "ಹೆಚ್ಚ್ ಸಮಯ ಆತ್ಲೆ ಕೂಸೂ. ಪಾಂಡೋವು ತಲೆಮರ್ಸಿಕಂಡಿದ್ದೊವು ಬಂದಮೇಲೆ ಇಂದ್ರಪ್ರಸ್ತನ ರಾಜಿ ಪಂಚಾತಿಕೆಲಿ ತಿರ್ಗಪಡ್ಯಕೆ ಶ್ರೀ ಕೃಷ್ಣನ ಕಳ್ಸಿಕೊಟ್ಟೊ ಅಲ್ಲಾ? ಆಗ ನೀ ನಿನ್ನ ಹಟನ ಬುಟ್ಟತ್ಲೆ. ಸೂಜಿನ ಕೊಡಿ ಊರುವೊಸ್ಟ್ ನೆಲನನೂ ಪಾಂಡೋವುಕೆ ಕೊಡ್ದುಲ್ಲೇಂತ ಹೇಳ್ದೆ. ಇನ್ ಯುದ್ಧನೇ ಗತೀಂತ ಹೇಳಿ ಕೃಷ್ಣ ಹಿಂದಕೆ ಹೋಕಾಕನ ಕರ್ಣನ ಕಂಡತ್. ಅವರ ನೊಡುಲಿ ನಡ್ದ ಮಾತ್‌ಕತೆಗ ಎಲ್ಲಾ ನಮ್ಮ ಗೂಡಾಚಾರರ ಕೆಬಿಗೆ ಬೀತ್ಲರೂ, ಕರ್ಣ ಕುಂತಿನ ಮಂಜಾಂತ ತಿಳ್ದ್ ಹೋತ್. ನಾ ಅದರ ಗುಟ್ಟ್‌ಲಿ ಇಸಿಕೆ ಅವುಕೆ ಹೇಳ್ದೆ. ಅದಾದ ಮೇಲೆ ಕರ್ಣನ ಹಿಂದೆ, ಅಂವ ಮುಂದೆ ಏನ್ ಮಾಡ್ದೇಂತ ತಿಳ್ಯಕೆ ಎರ್ಡ್ ಜನನ ಕಳ್ಸಿದೆ. ಒಂದಿನ ಹಿಂಬೊತ್ತ್ ನದಿ ಹಕ್ಕಲೆ ಕರ್ಣ ಒಬ್ಬನೇ ಇರಿಕಾಕನ ಕುಂತಿನೇ ಅಂವನಲ್ಲಿಗೆ ಬಂದ್ ಪಾಂಡವೊರ ಕೊಲ್ಲಿಕೆ ಬೊತ್ತ್‌ಂತ ಬೇಡಿಕಂಡತ್. ಇದ್ ನಾ ಕಳ್ಸಿದ ಜನಕ್ಕೆ ಮತ್ತೆ ನಂಗೆ ಅಲ್ಲದೆ ಬೇರೆ ಯಾರಿಗೆ ಸಾ ಗೊತ್ತಿಲ್ಲೆ. ಆ ಮೇಲೆ ಕರ್ಣ ಅಂವನ ಬೇನೆನೆಲ್ಲಾ ನನ್ನೊಟ್ಟಿಗೆ ಹೇಳಿಕಂಡ್ ನನ್ನಂದ ಸಮ್ದಾನ ಪಡ್ತಿತ್ತ್. ನಿನ್ನ ಬುಟ್ಟ್‌ದ್ ಬೇರೆ ಯಾವುದೇ ಸೌಬಾಗ್ಯ ಅಂವಂಗೆ ಬೇಕಿತ್ಲೆ."

ದುರ್ಯೋಧನ ಚಿಂತೆಲಿ ಮುಣ್‌ಂಗಿತ್. ಕರ್ಣ ಬಯಸ್‌ತಿದ್ದರೆ ಎಸ್ಟ್ ಎತ್ತರಕ್ಕೆ ಬೇಕರೂ ಏರಕಾಗಿತ್ತ್. ಆದರೆ ಅಂವ ಮಾಡ್ದ್ ಏನ್? ಕುಂತಿನ ಮಂಜಾಂತ ತಿಳ್ದ ಮೇಲೆ ಸಾ ಪಾಂಡೋವೊರ ದೂರ ಇಸಿತ್. ಅರ್ಜುನನ ಮಂಜ ಅಭಿಮನ್ಯುನ ಕೊಲ್ಲಿಕೆ ಕಾರಣ ಆತ್. ಭೀಮನ ಮಂಜ ಘಟೋತ್ಕಚನ ಸೊಂತ ಅಂವನೇ ಕೊಂದತ್. ಇಂದ್ ಅರ್ಜುನನ ಕೊಂದ್‌ದ್ ಯುದ್ಧನ ಮುಗ್ಸುದರ್ಲಿ ಇತ್ತ್. ಎಂತ ಮೊನ್ಸ್‌ನ ಬಲ ಅಂವಂದ್? ನೊಂಬಿದೊವರ ಕೈ ಬುಟ್ಟತ್ಲೆ. ಅಂದ್ ಪರೀಕ್ಷೆ ಮಾಡಿಕಾಕನ ಅಂವ

ತುಂಬಾ ಅಪಮಾನಕ್ಕೆ ಒಳಗಾಕನ, ಅಂವನ ಅಂಗದೇಸದ ಅರ್ಸ ಆಗಿ ಮಾಡಿ, ಅಂವನ ಸೂತತನನ ಕಳ್ದ್, ಅಂವಂಗೆ ಒಂದ್ ಸ್ತಾನನ ಮಾಡ್ದ ರುಣಬಾರಕ್ಕೆ ಕರ್ಣ ಹೀಂಗೆ ಮಾಡ್ತೋ? ಅಂವಂಗೆ ಬೇಕ್‌ಂತ ಹೇಳ್ತಿದ್ದರೆ, ಅಂವ ಯುದ್ದನ ನಿಲ್ಲಿಸಿ, ತಾನ್ ಎಲ್ಲರ್‌ಂದ ಮುಂದೆ ಹುಟ್ಟಿದಂವಾಂತ ಹೇಳಿ ಸಿಂಹಾಸನನ ಏರಿಕೆ ನೋಡ್ತಿತ್ತ್. ಅದ್‌ಕಿಂತ ಅಂವಂಗೆ ದೋಸ್ತಿತನ ಮುಕ್ಯ ಆತ್. ಕರ್ಣ ನಿಜಲಿನೂ ದೊಡ್ಡ ಮ್ಯೊಂಸ.

ದುರ್ಯೋಧನ ಮತ್ತೆ ದುಕ್ಕಿಸಿತ್. ಬಾಕಿಲ್‌ಲಿ ಹೆಜ್ಜೆನ ಸದ್ದ್ ಕೇಳಿಕನ ತನ್ನನ ತಾನೇ ಸಮ್ದಾನ ಪಡ್ಸಿಕಂಡ್ ಅತ್ತ ನೋಡ್ತ್. ತಲೆ ಬೊಗ್ಗಿಸಿಕಂಡ್ ಶಲ್ಯ ಭೂಪತಿ ಬಾತಿತ್ತ್. ಅಂವ ಬಂದದರ ನೋಡದಂವನ ಹಾಂಗೆ ದುರ್ಯೋಧನ ಹೇಳ್ತ್ "ಬೆನ್ನ್‌ಗೆ ಚೂರಿ ಹಾಕುವರನಾವು ಎಲ್ಲ ಕಡೆನೋಡಿವೆ. ಕರ್ಣನಾಂಗೆ ಇರ್ರವನಿಸ್ಟರ್ ಎಲ್ಲಿಸಿಕ್ಕುವೊ? ಅವಂದ್ ದೊಡ್ಡ ಗುಣ. ನಾನೆನ್ಸಿದರ್‌ಂದಳೂ ಎತ್ತರಲಿ ಅಂವ ಉಟ್ಟು. ಅಂವ ಈಗ ನಮ್ಮ ನೊಡುಲಿ ಇಲ್ಲೆ. ಅಂವ, ಆ ಕೃಷ್ಣ ಮೋಸಂದ ಕರ್ಣನ ಕೊಲ್ಲಿಸಿ ಬುಟ್ಟತ್."

ದುರ್ಯೋಧನ ಕೈಯಿಂದ ಮೋರೆನ ಮುಚ್ಚಿಕಂಡತ್. ಭೀಷ್ಮರಿಗೆ ಇಸಯ ಏನ್‌ಂತ ಗೊತ್ತಾಗದೆ ಕೇಳಿದೊ, "ಹಾಗೆಂತೇಳಿರೆ ಏನ್ ಕುಂಞೀ, ಕೃಷ್ಣನೇ ಸೊತಾ ಬಾಣ ಬುಟ್ಟತಾ?"

ದುರ್ಯೋಧನ ಹೇಳ್ತ್, "ಇಲ್ಲೆ ಅಜ್ಜಪ್ಪಾ, ಕರ್ಣಾರ್ಜುನನೊಡುಲಿ ದೊಡ್ಡಕಾಳಗನಡ್ತ್. ಇಡೀ ಆರ್ಯಾವರ್ತಲೇ ಇಸ್ಟರ ಮುಟ್ಟ ಇಂತಾ ಕಾಳಗ ನಡ್ತ್‌ಲ್ಲೆ. ಅರ್ಜುನನೂ ದೊಡ್ಡ ಸೂರ. ನೋಡೋವರ್‌ಲಿ ಅವರಿಬ್ಬರ್‌ಲಿ ಯಾರ್ ಸೋತರ್‌ನೂ ಬೇಜಾರ ಆಗುವ ಸಂಗತಿನೆ. ಕರ್ಣ ಬಾಣ ಹೂಡಿಕನ ಅರ್ಜುನ ನಡ್ಗಿ ಹೋಗ್‌ತಿತ್ತ್. ನಾವೆಲ್ಲಾ ಮೆಚ್ಚಿಗೆಂದ, ಅಚ್ಚರಿಂದ ನೋಡಿಕಂಡ್ ಇರಿಕನನೇ ಯಾವುದೋ ಒಂದು ದೊಡ್ಡ ಸಕ್ತಿ ಇದ್ದ ಬಾಣನ ಬತ್ತಳಿಗೆಂದ ತೆಗ್ದ್‌ದ್ ಬಿಲ್ಲ್‌ಗೆ ಜೋಡ್ಸಿತ್. ಕುಸಿಂದ ಶಲ್ಯನಲ್ಲಿ ಹೇಳ್ತ್, "ಶಲ್ಯಭೂಪತಿ, ನೋಡು ಈ ದೊಡ್ಡಸಕ್ತಿ ಇದ್ದಬಾಣನ. ಇದ್ ಘಟೋತ್ಕಚನ ಕೊಂದದರ್‌ಂದಳೂಹೆಚ್ಚ್‌ಸಕ್ತಿ ಇರ್ರ ಬಾಣ. ಅರ್ಜುನನ ಕುತ್ತಿಗೆಗೆ ಗುರಿ ಇಸ್ಸಳೆ. ಈಗ ಅಂವನ ಕತೆಮುಗ್ದದೆ. ಅಂವನಮೋರೆನ ಅಕೇರಿಗೆ ಒಮ್ಮೆ ನೋಡಿಕ"–ಎಂತಹೇಳಿಬಾಣ ಬುಡಿಕೆನೋಡ್ತ್. ಆಗಶಲ್ಯಮಾಂವ ಅಂವನ ತಡ್ದ್‌ದ್, "ಕರ್ಣಾ, ನಿನ್ನ ಗುರಿನ ಅರ್ಜುನನ ಕುತ್ತಿಗೆಂದ ಎದೆಗೆಬದ್ಲಾಯ್ಸ್. ನಿನ್ನ ಆಸೆ ತೀರ್‌ದೆ" ಎಂತಹೇಳ್ತ್.

ದುರ್ಯೋಧನಂದ ಮುಂದರ್ಸಿಕೆ ಆತ್ತೆ. ಭೀಷ್ಮರ್ ಅಂವ ಇದ್ದ ಸ್ತಿತಿನ ಮರ್ಕಂದ ನೋಡಿ, ಶಲ್ಯರಲಿ ಕೇಳ್ತ್. "ಭೂಪತೀ, ನೀಹೇಳ್. ಮುಂದೇನಾತ್?"

ತನಿಗೆ ಮಾತಾಡಿಕೆ ಅವ್ಕಾಸನೇ, ಸಿಕ್ಕುದುಲ್ಲೇಂತ ಇದ್ದ ಶಲ್ಯ ಗಂಬೀರ ಸೊರಲಿ ಹೇಳ್ತ್. " ಅನಾಹುತ ಆದ್‌ದ್ ಅಲ್ಲಿ ಆಚಾರ್ಯರೇ. ಗುರಿನ ಬದ್ಲಾಯ್ಸಿಕೆ ಆದುಲ್ಲೇಂತ ಅಂವ ನಿಚ್ಚಯ ಸೊರಲಿ ಹೇಳ್ತ್. ಒಮ್ಮೆ ಇಸಿದ ಗುರಿನ ಬದ್ಲಾಯ್ಸುದುಲ್ಲೇಂತ ಅಂವ ಹೇಳಿ ಬುಟ್ಟತ್. ಇಟ್ಟ ಗುರಿನ ಬದ್ಲಾಯ್ಸುದುಲ್ಲೇಂತ ಅಂವ ಕುಂತಿಗೆ ಮಾತ್ ಕೊಟ್ಟತ್ತ್‌ಗಡ. ನಾ ಅಂವಂಗೆ ಬಗೆತ್ತಾರಲಿ ಹೇಳ್ದೆ. "ಕರ್ಣಾ, ನಮ್ಮ ಗೆಲುವುಗೆ ಇರ್ರು ಇದ್ ಒಂದೇ

ಅವ್ಕಾಸ. ನನ್ನಮೊನ್ಸ್‌ಹೇಳ್ದೆ ಈಗನೀ ದುರ್ಯೋಧನನ ಗೆಲ್ಲುಸೋಕು. ಅವ್ವಂಗೆ ಕೊಟ್ಟ ಉಪ್ಯೋಗ ಇಲ್ಲದ ಮಾತ್‌ನ ನಿನ್ನ ಏಳ್ಗೆಗೆ ಕಾರ್‍ಣ ಆದ ಪ್ರಾಣ ಸಿನೇಯಿತ ದುರ್ಯೋಧನಂಗಾಗಿ ಮರ್‍ತ್ ಬುಡೂಂತ ಹೇಳ್ದೆ."

ಶಲ್ಯ ಮಾತ್‌ನ ನಿಲ್ಲಿಸಿತ್. ಅಮ್ಸರಂದ ಭೀಷ್ಮರ್ ಕೇಳ್ದೊ. "ಆಗ ಆದರ್ ಕರ್ಣ ಇಸಿದ ಗುರಿನ ಬದ್ಲಾಯ್ಸಿತೋ ಭೂಪತಿ?"

ಶಲ್ಯ ಹೇಳ್ತ್, "ಅವ್ವಂಗೆ ನಾ ಕೊಟ್ಟಮಾತ್‌ನ ತೊಪ್ಪುಸುವ ಹಾಂಗೆ ಇಲ್ಲೆ. ನಾ ಇಸಿದ ಗುರಿನ ಬಗ್ಗೆ ನೀವುಗೆ ಸಂಸಯನೋ?"– ಎಂತ ನನ್ನನೇ ಪ್ರಸ್ನೆ ಮಾಡ್ತ್. ನಿನ್ನ ಗುರಿನ ಬಗ್ಗೆ ನಂಗೆ ಸಂಸಯ ಇಲ್ಲೆ. ಕೃಷ್ಣ ನಿನ್ನನೇ ನೋಡ್ದೆ. ಅಂವಂಗೆ ನಿನ್ನ ಗುರಿ ಎಲ್ಲಿಗೇಂತ ಗೊತ್ತಾವುಟು. ಗುರಿನ ಕುತ್ತಿಗೆಂದ ಎದೆಗೆ ಬದ್ಲಾಯ್ಸಿರೆ ಅಂವಂಗೆ ಎದ್‌ರ್ ತಂತ್ರ ಮಾಡಿಕೆ ಕಸ್ಟ ಆದು. ಯಾಗೋಳೋ ಅಯ್ಯೆಗೆ ಕೊಟ್ಟ ಮಾತ್‌ಂದ, ಇಂದ್ ದುರ್ಯೋಧನ ಗೆಲ್ಲುದು ಮುಕ್ಯ. ಸುಮ್ಮಂಗೆ ಚರ್ಚೆ ಮಾಡ್ಬಡ."–ಎಂತ ನಾ ಹೇಳ್ದೆ. ಕರ್ಣ ಆಗ, "ಇದೊಂದ್‌ಬಾಣನ ಗುರಿ ಇಸಿ ಆವುಟು. ಬುಟ್ಟೇಬುಟ್ಟನೆ. ಗುರಿ ತೊಪ್ಪಿರೆ ಕರ್ಣನಹಕ್ಕಲೆಬಾಣಕ್ಕೇನ್ ಕೊರ್‍ತೆ ಇಲ್ಲೆ. ಬೇರೊಂದರ ಬುಟ್ಟರೆ ಆತ್."– ಎಂತ ಹೇಳ್ತ್. ನಾ ಒಪ್ಪಿತ್ಲೆ. ನಮ್ಮ ನೊಡುಲಿ ಮಾತ್‌ಗೆ ಮಾತ್ ಬೆಳ್ತ್. ನನ್ನ ಮಾತ್‌ನ ಮೀರಿರೆ ನಾ ಸಾರತಿತನನ ಬುಟ್ಟನೇಂತ ಹೇಳ್ದೆ. ಆ ಮಾತ್‌ನ ಅಂವ ಲೆಕ್ಕಕೇ ತಕಂಡತ್ಲೆ. ಇಸಿದ ಗುರಿಲೇ ಬಾಣ ಬುಟ್ಟತ್. ಕೃಷ್ಣ ಹೇಳ್ದಹಾಂಗೆ ಅರ್ಜುನ ತಲೆನ ಬೊಗ್ಗಿಸಿ ಬುಟ್ಟತ್. ಆ ಅಪ್ರೂಪದ ಬಾಣ ಅರ್ಜುನನ ಕಿರೀಟನ ಹಾರ್‍ಸಿಕಂಡ್ ಹೋತ್. ಅರ್ಜುನನ ತಲೆ ತುಂಡಾತ್‌ಂತ ಪಾಂಡೋವರ ಸೇನೆಲಿ ಬೊಬ್ಬೆ ಆತ್. ನನ್ನ ಮಾತ್‌ನ ಕರ್ಣ ಕೇಳ್ತಿದ್ದರೆ, ಇಂದ್ ಅರ್ಜುನ ಸತ್ತ್ ಹೋಗಿ, ಯುದ್ಧ ಇಂದಿಗೆ ಮುಗ್ಯತಿತ್ತ್." ಶಲ್ಯ ಸುಮ್ಮಂಗಾತ್.

"ಹಾಂಗಾರೆ ಕರ್ಣ ಸತ್ತದ್ ಹೇಂಗೆ?"

ಭೀಷ್ಮರ ಪ್ರಸ್ನೆಗೆ ದುರ್ಯೋಧನ ಉತ್ತರ ಕೊಟ್ಟತ್. "ಅಜ್ಜಪ್ಪಾ, ಈ ಶಲ್ಯ ಮಾಂವ ಕರ್ಣನೊಟ್ಟಿಗೆ ಜಗಳಕ್ಕೆ ಇಳ್ದ್ ಬುಟ್ಟೊ. ತನ್ನ ಮಾತ್‌ನ ಕೇಳದಂವನ ರಥಲಿ ಒಂದ್ ನಿಮ್ಸನೂ ಇರ್‍ದುಲ್ಲೇಂತ ಹೇಳ್ದೊ. ಕರ್ಣ ಬೇಡಿಕಂಡತ್. ಆಗ ಮಾಂವ, "ಹಾಂಗಾರೆ ಈಗ ಹೂಡ್ದಂತಾ ಇನ್ನೊಂದ್ ಬಾಣನ ಹೂಡು"–ಎಂತ ಹೇಳ್ದೊ. ಕರ್ಣಬತ್ತಳಿಕೆಲಿ ಹುಡ್ಕಿತ್. ಅಂತದೇ ಇನ್ನೊಂದ್ ಬಾಣ ಅಂವನಲ್ಲಿ ಇತ್ಲೆ. ಇನ್ನ್ ಯುದ್ಧ ಮುಂದರ್‍ಸಿ ಪಲ ಇಲ್ಲೇಂತ ಹೇಳಿ ಮಾಂವ ರಥಂದ ಇಳ್ದ್‌ನಡ್ದೇ ಬುಟ್ಟೊ."

ಭೀಷ್ಮರ್‌ಗೆ ಎಲ್ಲಾ ಇಸಯಗ ತಿಳ್ದೊ. ಕರ್ಣನ ಸಾರತಿ ಆಕೆ ಶಲ್ಯಂಗೆ ನಿಜಲೂ ಮೊನ್ಸ್ ಇತ್ಲೆ. ಬೇರೋರ ಮೆಚ್ಚಿಸಿಕೆ ನಾವ್ಗೆ ಕಾರ್‍ಣನೇ ಸಿಕ್ಕುದ್ಲೆ. ದ್ವೇಸ ಸಾಧಿಸಿಕೆ ಬೇಕಾದಸ್ಟ್ ಕಾರ್‍ಣಗ ಸಿಕ್ಕುವೆ. ರಥಂದ ಇಳ್ದ್ ಹೋಕೆ ಶಲ್ಯ ಭೂಪತಿ ಕಾರ್‍ಣ ಹುಡ್ಕ್‌ತಿತ್ತ್. ಕರ್ಣನೇ ಅದ್ಕೆ ಅವ್ಕಾಸ ಮಾಡಿಕೊಟ್ಟತ್. ಪ್ರಾಯಲಿ, ಅನ್ಬವಲಿ, ಲೋಕಜ್ಞಾನಲಿ ಹಿರ್‍ಯಂವ ಆದ ಶಲ್ಯ ಭೂಪತಿನ ಮಾತ್‌ನ ಕರ್ಣ ಕೇಳಕಾಗಿತ್ತ್. ಇಸಿದ ಗುರಿನ

ಬದ್ಲಾಯ್ಸುದುಲ್ಲೇಂತ ಕುಂತಿಗೆ ಮಾತ್ ಕೊಡಕಾದ ತಲೆ ಹೋವ ಪರ್ಸಂಗ ಏನ್ ಬಂದತ್ ಇಂವಂಗೆ? ಹೋಗಲಿ. ಅಯ್ಯೆಗೆ ಕೊಟ್ಟ ಮಾತ್‌ನೇ ಇಂವಂಗೆ ಮುಕ್ಯ ಆತ್‌ಂತ ಹೇಳೊವೊ, ಶಲ್ಯನ ಒಡಂಬಡ್ಸಿಕೆ ಆದರೂ 'ನಿನ್ನವಾತ್ ನಂಗಾಗಲಿ'ಶಲ್ಯಭೂಪತಿ –ಎಂತ ಒಂದ್ ಸುಳ್ಳು ಹೇಳಿ, ಗುರಿ ಬದ್ಲಾಯ್ಸದೆ ಬಾಣ ಬುಡೋಕಾಗಿತ್ತ್. ಆಗ ಶಲ್ಯಂಗೆ ರಥನ ತೊರ್ದ್ ಹೋಕೆ ಕಾರ್ಣ ಸಿಕ್ಕ್‌ತಿತ್ಲೆ. ಕರ್ಣನ ಸತ್ಯಸಂದಂತೆಂದಾಗಿ, ಅರ್ಜುನ ಬೊದ್ಕಿದ್ ಒಳ್ತ್. ಸೊತಾ ತಾನೇ ಸತ್ತತ್. ಯಾವ ಪುರ್ಸಾರ್ತ ಸಾಧಿಸಿದಂಗಾತ್? ಇಂವನ ಈ ಸತ್ಯಸಂದತೆಂದ?

ಭೀಷ್ಮರ ಏಚನೆ ಶಲ್ಯರ ಮಾತ್‌ಂದ ತುಂಡಾತ್. "ಆಚಾರ್ಯರೇ, ಕರ್ಣ ಸಾಯಕೆ ನಾ ಕಾರ್ಣಗಡ, ದುರ್ಯೋಧನ ಹೇಳ್ದೆ. ಕರ್ಣ ಸತ್ತದ್ ಅಂವನ ಹೆಡ್ಡ್‌ತನಂದ. ಅಂವ ಅರ್ಜುನನ ಮೇಲೆ ಬುಟ್ಟ ಬಾಣ ಎಲ್ಲಾ ಸಕ್ತಿಗಳ್‌ಂದ ಕೂಡ್ದ ದೊಡ್ಡ ಬಾಣ. ಅದ್ ಅಂವಂಗೆ ಎಲ್ಲಿಂದ ಸಿಕ್ಕಿತೋ? ಪರಶುರಾಮರ ಹಕ್ಕಲೆ ಇದ್ದದರ್‌ಂದ ಸಿಕ್ಕಿತೋ ಏನೋ? ಅಂತಾ ಬಾಣನ ತಯಾರ್ಸೋವು ಇಡೀ ಆರ್ಯಾವರ್ತಲಿ ನಾ ಎಲ್ಲಿ ಸಾ ಕಂಡತ್ಲೆ. ತಯಾರ್ಸೋವೇ ಇಲ್ಲೇಂತ ಹೇಳ್ರೆ ಅದ್ಕೆ ಎದ್ರ್ ಬಾಣ ಇರಿಕೆ ಸಾದ್ಯನೋ? ಅದರ್‌ದ್ ಮೇಲೆ ಮೋರೆ ಮಾಡಿ ಹಾರುವ ಗುಣದ್. ಅದ್ಕೇ ಅರ್ಜುನನ ಎದೆಗೆ ಗುರಿ ಇಸಿಕೆ ನಾ ಹೇಳ್ದ್. ನನ್ನ ಮಾತ್‌ನ ಕೇಳ್ತಿದ್ದರೆ ಕರ್ಣ ಒಳ್‌ಕಂಬತಿತ್ತ್. ದುರ್ಯೋಧನ ಕುರುಸಾಮ್ರಾಟ ಆಗ್ತಿತ್ತ್. ಮಂಗನ ಕೈನ ಮಾಣಿಕ್ಯ ಆಗಿ ಹೋತ್ ಆ ಬಾಣದ ಕತೆ. ಇನ್ನ್ ಒಳ್ದ ಸಾದಾರ್ಣ ಬಾಣಂದ ಅರ್ಜುನನಂತಾ ಬಿಲ್ ವಿದ್ಯೆಲಿ ಸೂರ ಆದಂತವನ ಕೊಲ್ಲಿಕೆ ಸಾದ್ಯನೇ ಇರ್ತಿತ್ಲೆ. ಕರ್ಣನ ಹಟಂದ ನಾ ರೋಸಿ ಹೋಗಿ ರಥಂದ ಇಳ್ದ್‌ದ್ ಬಂದ್‌ಬುಟ್ಟೆ. ಹೇಳಿ ಆಚಾರ್ಯರೇ, ನನ್ನ ತೊಪ್ಪು ಎಂತದ್ ಉಟ್ಟೊಂತ?"

ಭೀಷ್ಮರ್ ಸಮ್ದಾನ ಪಡ್ಸಿದೊ. "ಶಲ್ಯಭೂಪತೀ, ಈ ಹಂತಲಿ ತೊಪ್ಪು ಯಾರ್ದೂಂತ ಹೇಳಿ ಏನ್ ಪ್ರೋಜನ ಹೇಳ್. ಆದರೆ ಆ ಎಲ್ಲಾ ಸಕ್ತಿಗ ಇದ್ದ ಬಾಣಂದ ಅರ್ಜುನ ಸಾಯಕಿತ್ಲೇಂತ ನನ್ನ ಮೊನ್ಸ್ ಹೇಳ್ದೆ. ಕುತ್ತಿಗೆನ ತೆಗ್ಯಕೆ ಬಾವ ಬಾಣನ ಕಂಡ್‌ದ್ ಅರ್ಜುನ ತಲೆ ಬೊಗ್ಗಿಸಿ ಪಾರಾತ್. ಎದೆನ ಕಡೆಗೆ ಬಾತಿದ್ದರೆ ಕುದ್ದ್ ಬುಡ್ತಿತ್ತ್. ಆಗ ಸಾ ಅಂವ ಬೊದ್ಕ್‌ತಿತ್ತ್. ಕರ್ಣಂಗೆ ಗೆಲ್ಲುದರ್‌ಂದ ಕೊಟ್ಟ ಮಾತ್‌ನ ಒಳ್ಸಿಕಂಬೊದು ಮುಕ್ಯ ಆಗಿತ್ತ್. ನಿಂಗೆ ನಿನ್ನ ಪ್ರತಿಸ್ಟೆ ಮೇಲೇಂತ ಎನ್ಸಿತ್. ದುರ್ಯೋಧನಾ, ಈ ಕೌರವರ್ಲಿ ಒಳ್ದಂವ ನೀ ಒಬ್ಬನೇ. ಇನ್ ಕಾಳಗ ಕೊಡ್ದು ಏಕೆ? ಯುದ್ಧನ ನಿಲ್ಸೊಮೊ."

ದುರ್ಯೋಧನ ಕರ್ಣ ಸತ್ತ ದುಕ್ಕಂದ ಹೊರಗೆ ಬಾತಿಲ್ಲೆ. ಶಲ್ಯನೇ ಮಾತಾಡ್ತ್. "ಆಚಾರ್ಯರೇ, ನಂಗೆ ಒಂದ್ ಅವ್ಕಾಸ ಕೊಡಿಕೆ ದುರ್ಯೋಧನಂಗೆ ಹೇಳ್ಳಳೆ. ತಲೆ ಬೊಗ್ಗುಸುದು, ಯುದ್ಧನ ನಿಲ್ಸುದು ಬೇಡ. ಅಳ್ದ್ ಒಳ್ದ ಬಲಕ್ಕೆ ನಾ ಸೇನೆನ ಎಜಮಾನ ಆಗಿ ಯುದ್ಧನ ಮುಂದರ್ಸಿನೆ. ಈ ಹಂತಲಿ ಪಾಂಡೋವು ರಾಜಿ ಪಂಚಾತಿಕೆಗೆ ಒಪ್ಪಿಕಿಲ್ಲೆ. ಅವು ಒಪ್ಪಿರುನೂ ಕೃಷ್ಣ ಬುಡಿಕಿಲ್ಲೆ."

ಶಲ್ಯ ಹೇಳುದು ನಿಜಾಂತ ಭೀಷ್ಮರ್‌ಗೆ ಆತ್. ಅವು ದುರ್ಯೋಧನನ ನೋಡಿ,

ಕೇಳಿದೊ. "ಕೂಸೂ, ಕೃಷ್ಣನ ಮೋಸಂದ ಕರ್ಣ ಸತ್ತತ್‌ಂತ ಹೇಳ್ದಲೇ? ಅದ್ ಹೇಂಗೆ?"

"ಅಜ್ಜಪ್ಪಾ. .. ಶಲ್ಯಭೂಪತಿ ರಥಂದ ಇಳ್ದ್‌ಹೋದ ಕೂಡ್ಲೇ ನಾ ನನ್ನ ಸಾರತಿನ ಕರ್ಣನ ರಥಕ್ಕೆ ಕಳ್ಸಿದೆ. ಹಳ್ಳದಾಂಗೆ ಹರ್‍ಯತಿದ್ದ ನೆತ್ತೆರ್‌ಲಿ ಕೆಸ್ರ್ ಆಗಿದ್ದ ಕುರುಕ್ಷೇತ್ರಲಿ ಕರ್ಣನ ರಥದ ಚಕ್ರ ಸಿಕ್ಕಿಕಂಡತ್. ಅಂವ ಹಂಞಕಾಲ ಯುದ್ಧ ನಿಲ್ಸೀಂತ ಹೇಳಿ, ಬಿಲ್ಲ್‌ನ ಕೆಳಗೆ ಇಸಿ, ರಥಂದ ಇಳ್ದ್‌ದ್ ಚಕ್ರನ ಎತ್ತಿಕೆ ನೋಡ್ತ್. ಆಗ ಕೃಷ್ಣನ ಮಾತ್‌ಗೆ ಕಟ್ಟ್‌ಬಿದ್ದ್ ಅರ್ಜುನ ಬಾಣ ಬುಟ್ಟತ್. ಒರೆಲಿ ಇಸಿದ ಬಾಳ್‌ಕತ್ತಿಂದ ಆ ಬಾಣನ ತುಂಡು ಮಾಡಿ ಕರ್ಣ ರಥನ ಹತ್ತಿ ಬಿಲ್ಲ್‌ನ ಹಿಡ್ದ್ ಯುದ್ಧನ ಮುಂದರ್ಸಿತ್. ಮುಗ್ಗರ್ಸಿದ ರಥಲಿ ನಿತ್ತ್ ಕರ್ಣ ಬಾಣ ಬುಡಿಕಾಕನ ಅದ್ ಗುರಿ ಮುಟ್ಟ್‌ತಿತ್ಲೆ. ಅರ್ಜುನನ ಕೈ ಮೇಲಾತ್. ಅರ್ಜುನ ಬುಟ್ಟ ಬಾಣಂದಾಗಿ ಸಾರತಿ ಸತ್ತತ್. ಬಾಣಗಳ್‌ಂದ ಮುತ್ತಿ ಹೋದ ಕರ್ಣನ ಕೈಯಿಂದ ಅಂವನ ಬಿಲ್ಲ್ ಜಾರ್ತ್. ಅಂವ ನನ್ನ ನೋಡಿ, ಎರ್ಡ್ ಕೈನ ಮೇಲೆ ಎತ್ತಿ ಅಕೇರಿನ ಕೈ ಮುಗ್ದ್‌ದ್ ರಥಲಿ ಕುಸ್‌ದ್ ಬೀತ್. ಅಲ್ಲಿಗೆ ಇಂದ್‌ನ ಯುದ್ಧನೂ ನಿತ್ತತ್."

ಭೀಷ್ಮರ್ ಹೇಳಿಕೊಂಡೊ. ನಿಯತ್ತ್‌ಂತೇಳ್ರೆ ಅದ್. ತಾನ್ ಕುಂತಿನ ಮಂಙಂತ ತಿಳ್ದಿದ್ದರು ಸಾ ದುರ್ಯೋಧನಂಗೆ ಅಕೇರಿನ ನಮಸ್ಕಾರ ಸಲ್ಲ್‌ಸಿ, ಕರ್ಣ ಜೂವ ಬುಟ್ಟತ್. ಅಂವ ಮುಂದೆನ ಚರಿತ್ರೆಲಿ ಹೇಂಗೆ ದಾಕಲಾದೆನೋ? ದೋಸ್ತಿನ ಮುಂದೆ ರಕ್ತ ಸಂಮಂದ ಏನ್ ಸಾ ಅಲ್ಲಾಂತ ತೋರ್ಸಿ ಕೊಟ್ಟತ್. ಅಯ್ಯೆಗೆ ಕೊಟ್ಟ ಮಾತ್‌ಗೆ ಜೂವಲಿ ಅಕೇರಿನ ಉಸ್ರ್ ಇರಿಕನ ಮುಟ್ಟ ತೊಪ್ಪಿತ್ಲೆ. ಅದರ್‌ಂದ ಅಂವ ಏನ್ ಸಾದಿಸಿದಂಗಾತ್ ಎಂತ ಪ್ರಸ್ನೆ ಕೇಳುವಾಂಗೇ ಇಲ್ಲೆ. ಮೌಲ್ಯಂದಳೇ ಬೊದ್ಕಿಕೆ ಒಂದ್ ಅರ್ತಾಂತ ಅಂವ ತೋರ್ಸಿಕೊಟ್ಟತ್. ಗಾಳಿ ಬಂದಾಂಗೆ ತೂರುವ ಜನಂಗಳ ನೊಡುಲಿ ಅಂವ ಒಬ್ಬ ಮಾಣಿಕ್ಯದಂತಾ ಮ್ಯೊಂಸ. ಅಂವ ಅಯ್ಯೆಗೆ ಕೊಟ್ಟ ಮಾತ್‌ನ ಮುರ್ದ್‌ದ್, ಶಲ್ಯನ ಮಾತ್‌ನಾಂಗೆ ಗುರಿನ ಬದ್ಲಾಯಿಸ್ತಿದ್ದರು ಸಾ ಅರ್ಜುನನ ಕೊಲ್ಲಿಕೆ ಅವಂದ ಆಕಿತ್ಲೆ. ಈಗ ಸಾಯಕಾಕನ ಕೊಟ್ಟ ಮಾತ್‌ಗೆ ತೊಪ್ಪಿತ್ಲೇಂತೇಳ್ವ ಕುಸಿ ಆದರೂ ಅಂವನ ಪಾಲಿಗೆ ಉಟ್ಟು.

ಗಂಬೀರ ಸೊರಲಿ ಭೀಷ್ಮರ್ ಹೇಳ್ದೊ, "ಕುಂಞೀ, ಶಲ್ಯಭೂಪತಿ ಕರ್ಣನ ರಥಲಿ ಇದ್ದರುನೂ ರಥದ ಚಕ್ರನೆತ್ತೆರ್‌ನ ಕೆಸ್ರ್‌ಲಿ ಹೂತು ಹೋದರ ತೊಪ್ಪಿಸಿಕೆ ಆಕಿತ್ಲೆ. ಕರ್ಣನ ನಾವುಗೆ ಉಳ್ಸಿಕಂಬಕಾಕಿತ್ಲೆ. ಅಂವ ಸತ್ತದ್‌ಕ್ಕೆ ಕೃಷ್ಣ ಕಾರ್ಣಾಂತ ಹೇಳ್ಬಡ. ಕರ್ಣ ಅದರ್ಮದ ಪರಲಿ ನಿತ್ತ ಕಾರ್ಣ ಹೀಂಗಾತ್. ಇಲ್ಲರೆ ಅಂವಂದೇ ರಥದ ಚಕ್ರ ಏಕೆ ಹೂತ್ ಹೋಕಾಗಿತ್ತ್? ಏಚನೆ ಮಾಡ್. ಅಂವ ಬೊದ್‌ಕ್‌ತಿದ್ದರೆ ನೀ ಯುದ್ಧ ನಿಲ್ಸಿಕೆ ಒಪ್ಪುತಿದ್ದರೆ, ಅಂವನ ಹಸ್ತಿನಾವತಿನ ಪಟ್ಟಲಿ ಕುದ್ರ್‌ಸಕಾಗಿತ್ತ್. ಈಗ ಕಾಲ ಮಿಂಚಿ ಹೋತ್. ಹೇಳ್ ಕುಂಞೀ, ನಾಳೆ ಪಾಂಡೋವ್ಕೆ ರಾಜ್ಯನ ಬುಟ್ಟ್‌ಕೊಡ್ದೊ, ಅಲ್ಲರೆ ಶಲ್ಯನ ಸೇನೆನ ಎಜಮಾನ್ಕೆಲಿ ಮುಂದರ್ಸುದೋ?" ದುರ್ಯೋಧನ ಉತ್ತರ ಕೊಟ್ಟತ್. "ಅಜ್ಜಪ್ಪಾ, ಶಲ್ಯಮಾಂವನ ಎಜಮಾನಿಕೆಲಿ ಕಾಳಗನ ಮುಂದರ್ಸುದೂಂತ ತೀರ್ಮಾನ

ಮಾಡ್ಯಳೆ. ನಾಳೆ ಬಲರಾಮ ಬಂದದೆ. ಅಣ್ಣನ ಎದ್‌ರ್ ಕೃಷ್ಣನ ಉಪಾಯಗ ನಡ್ಯೋದುಲ್ಲೆ. ಅಕೆರಿಗೂ ಗೆಲುವು ನಮ್ಮದಾದೆ."

ದುರ್ಯೋಧನನ ಮೋರೆ ಹೊಳ್ಯತಿತ್ತ್. ಭೀಷ್ಮರ್ ಬಲರಾಮನ ನೆಂಪು ಮಾಡಿಕೊಂಡ್ರೊ. ಅಂವ ದ್ವಾರಕೆನ ದೊರೆ. ಕೃಷ್ಣನ ಅಣ್ಣ. ಅಂವಂಗೆ ತನ್ನ ತಂಗೆ ಸುಭದ್ರೆನ ದುರ್ಯೋಧನಂಗೆ ಮೊದ್ವೆ ಮಾಡಿಕೊಡೊಕೂಂತ ಆಸೆ ಇತ್ತ್. ಸುಭದ್ರೆ ಅರ್ಜುನನ ಪ್ರೀತಿ ಮಾಡ್ತಿತ್ತ್. ತಂಗೆನ ಮೊನ್ಸನ ತಿಳ್ದ ಕೃಷ್ಣ ಉಪಾಯಂದ ಅರ್ಜುನೊಟ್ಟಿಗೆ ಮೊದ್ವೆ ಮಾಡ್ಸಿತ್. ಅಂದ್‌ಂದ ಬಲರಾಮ ಪಾಂಡೋವರ ಮೇಲೆ ಹಗೆ ಸಾದ್‌ಸ್ತಿತ್ತ್. ಎದ್ರೆದ್ರ್ ಯುದ್ಧಲಿ ಸೇರದಿದ್ದರೂ ಯಾದವ ಸೇನೆನ ದುರ್ಯೋಧನನ ಸಾಯಕ್ಕೆ ಕಳ್ಸಿತ್. ಬಲರಾಮ ನೇಗಿಲ್‌ನ ಕಂಡ್‌ಹಿಡ್ದಂವ. ಅದರ್‌ಂದ ಹೇಂಗೆ ಗದ್ದೆ ಉಳೂದೂಂತ ತೋರ್ಸಿ ಕೊಟ್ಟಂವ. ಹಾಂಗಾಗಿ ಇಡೀ ಆಯಾವರ್ತಲಿ ಅಂವಂಗೆ ಹೆಸ್ರ್ ಇತ್ತ್. ಯಾದವಾಂತ ಅಂವಂಗೆ ಕ್ಷತ್ರಿಯಗ ಡೋಂಗಿ ಮಾಡ್ತಿದ್ದೊ. ಯಾದವರ್ ಗೊಲ್ಲ ಜನಂಗ, ದನ ಮೇಸೋವೂಂತ ಅವ್ಕೆ ಸಸಾರ. ಬಾಳ ದೊಡ್ಡ ಸಕ್ತಿ ಇದ್ದ ಬಲರಾಮ ನಾಳೆ ಬಂದ್ ಪಾಂಡೋವರ ಎದ್ರ್ ಹೋರಾಡುದೋ?

ಭೀಷ್ಮರ್ ಪ್ರಸ್ನೆ ಕೇಳ್ದೊ, "ನಾಳೆನೀ ಏನ್ ಮಾಡೊಕೂಂತ ಒಳಾ ಕುಂಞಿ?"

ದುರ್ಯೋಧನ ಹೇಳ್ತ್. "ಬಲರಾಮ ಬಾಕನಮುಟ್ಟ ಪಾಂಡೋರ ಕಣ್ಣ್‌ಗೆ ಬೀಳ್ದುಲ್ಲೇಂತ ನಿಚ್ಚಯ ಮಾಡ್ಯಳೆ. ಬಲರಾಮ ಬಂದ ಮೇಲೆ ಮುಂದೆದರ ಅಂವ ನಿಚ್ಚಯ ಮಾಡ್ದೆ."

ಈಗ ಶಲ್ಯ ತನ್ನ ಮೊನ್ಸ್‌ಲಿ ಇದ್ದದರ ಹೇಳ್ದೆ. "ಆಚಾರ್ಯರೇ, ಕರ್ಣನ ರಥಂದನಾ ಇಳ್ದ್‌ದ್ ಬಂದದಕ್ಕೆ ಲೋಕ ನನ್ನ ಅಪಾರ್ತ ಮಾಡ್ದು. ನಕುಲ-ಸಹದೇವರ ಸೋದರ ಮಾಂವ ಕೌರವರ ಪರ ನಿತ್ತದೇ ತೊಪ್ಪು. ಆದರೆ ನಾ ಸುಳ್ಳುಗಾರ ಅಲ್ಲ. ಅನ್ನೇಯ ಮಾಡಂವ ಅಲ್ಲ. ರಥಲೇ ಇರ್ತಿದ್ದರೆ ಕರ್ಣನ ಒಟ್ಟಿಗೆ ನನ್ನನ ಸಾತ್ ಅರ್ಜುನ ಮುಗ್ಸಿಬುಡ್ತಿತ್ತ್. ನನ್ನ ಸಾಮರ್ತ್ಯನ ರಣರಂಗಲಿ ತೋರ್ಸಿಕಾದರೂ ನಾ ಬೊದ್ಕಿರೊಕು. ಬಲರಾಮ ಬಾಕನ ಮುಟ್ಟ ನಾ ದುರ್ಯೋಧನನ ನೋಡಿಕಂಬೆ. ಈ ಹಂತಕ್ಕೆ ಮುಟ್ಟಿದ ಮೇಲೆ ಸಾಮ್ರಾಜ್ಯನ ನಾವಾಗಿನೇ ಅವ್ಕೆ ಒಪ್ಪುಸಿ ತಲೆ ಬೊಗ್ಗುಸುದು ಬೇಡ. ಇಸ್ಟಾದರುನೂ ನಂಗೆ ಆ ಭೀಮಸೇನನ ಹೆದ್ರಿಕೆ ತುಂಬಾ ಉಟ್ಟು."

ಭೀಷ್ಮರ್‌ಗೆ ಭೀಮಸೇನ ಮಾಡ್ದ ಪ್ರತಿಜ್ಞೆ ನೆಂಪಾತ್. ಹಿಂದೆ ಪಾಂಡೋವು ರಾಜಸೂಯ ಯಾಗ ಮಾಡಿದ್ದೊ. ಕೃಷ್ಣ ತನ್ನ ಇರೋದಿಗ ಆದ ಮಾಗಧ, ಶಿಶುಪಾಲರ ಕೊಲ್ಲಿಸಿಕೇಂತೇಳಿನೇ ಮಾಡ್ದ ಯಾಗ ಅದ್‌ಂತ ಇಡೀ ಆರ್ಯಾವರ್ತದ ಜನಂಗ ಮಾತಾಡಿಕೊಂಬೊತಿದ್ದೊ. ಭೀಮಾರ್ಜುನರ ಸಕ್ತಿ ಎಸ್ಟ್‌ಂತ ಲೋಕಕ್ಕೆ ತೋರ್ಸಿ ಕೊಡಿಕೆ ಆ ಯಾಗಂದ ಆತ್. ಯಾಗಕ್ಕೆ ಹೋಗಿದ್ದ ದುರ್ಯೋಧನ ಪಾಂಡೋವರ ದೊಡ್ಡ ಉದ್ಯಾನದ ಕೆರೆಲಿ ಕಾಲ್ ಜಾರಿ ಬಿದ್ದಿತ್ತ್. ಅಲ್ಲೇ ತನ್ನ ದೋಸ್ತಿ ಗೂಡೆಗಳೊಟ್ಟಿಗೆ ಹೂ ಕ್ಯೊಯಿಕಂಡ್ ಇದ್ದ ದ್ರೌಪದಿ ಆಗ, "ಕುರುಕುಲದಮಾರಾಜರ್ ಕುರ್ದರ್ ಆಗಿ

ಬುಟ್ಟೋನೋ?" ಎಂದ್ ಹಂಗಿಸಿತ್. ಇದ್ ತನ್ನ ಅಪ್ಪ ದೃತರಾಷ್ಟ್ರಂಗೆ ಮಾಡ್ದ ಅಪಮಾನಾಂತ ದುರ್ಯೋಧನ ಭೀಷ್ಮರಲ್ಲಿ ಹೇಳಿಕಂಡಿತ್ತ್. ಅದ್‌ನೇ ಅಂವನ ಕಪಟ ಜೂಜುಗೆ, ದ್ರೌಪದಿನ ಸೀರೆ ಎಳ್ಯಕೆ ಕಾರ್‍ಣ ಆತ್. ದುಶ್ಯಾಸನ ದ್ರೌಪದಿನ ರಾಜ ಸಭೆಗೆ ಎಳ್ದ್ ತಂದಾಕನ ಇಂವ ತನ್ನ ಮೊರ್‍ಯಾದೆನ ಗಡಿದಾಟಿ, "ಕೆಲ್ಸದೋಳೆಬಾ. ನಿನ್ನ ಎಜಮಾನನ ತೊಡೆಹತ್ತಿ ಕುದ್ರು"–ಎಂತ ಕೊಳ್ಕ್‌ಮಾತ್‌ಲಿ ತನ್ನ ತೊಡೆನ ತಟ್ಟಿತ್ತ್. "ನಿನ್ನ ತೊಡೆನ ಮುರ್ದ್ ಹಾಕಿನೆ ನಾಯಿ" ಎಂತ ಹೇಳಿ ಗದೆ ಎತ್ತಿಕಂಡ್ ಭೀಮಸೇನ ಮುಂದೆ ಬಾಕಾಕನ ಯುಧಿಷ್ಠಿರ ತಡ್ತ್. ಆಗ ಭೀಮಸೇನ, "ಹಂಕಾರಂದ ಬಾಯಿಗೆ ಬಂದಾಂಗೆ ಬೊಯ್ದ್, ದ್ರೌಪದಿಗೆ ಮಾಡ್ದ ಅಪಮಾನಕ್ಕೆ ಪ್ರತಿ ಆಗಿ ನಿನ್ನ ತೊಡೆನ ಮುರ್ದ್ ಹಾಕಿತ್ಲರೆನಾ ಕುಂತಿನ ಮಂಜ ಭೀಮಸೇನನೇ ಅಲ್ಲ."– ಎಂತ ಎಲ್ಲೋವ್ಕೂ ಕೇಳುವಾಂಗೆ ಸಪತ ಮಾಡ್ತ್. ಇಂದ್ ಬೊಳ್ಪುಗೆ ದುಶ್ಯಾಸನನ ಹೊಟ್ಟೆನ ಬೊಗ್ದ್‌ದ್ ನೆತ್ತೆರ್ ಕುಡ್ದಂವಂಗೆ ದುರ್ಯೋಧನನ ತೊಡೆನ ಮುರ್‍ಯೋದು ಎಸ್ಟರ ಕೆಲ್ಸ?

ದುರ್ಯೋಧನ ಮಾತಾಡಿಕೆ ಸುರು ಮಾಡ್ತ್. "ಅಜ್ಜಪ್ಪಾ, ಬಲರಾಮ ಬಂದರೆ ನಾನೇ ಗೆಲ್ಲುವೇಂತ ಹೇಳ್ದು ಒಂದ್ ಆಸೆ ಅಸ್ಟೆ. ಧರ್ಮಯುದ್ಧ ನಡೇಲೀಂತ ನಾ ಅಂವ ಬಾವುದರ ಕಾದನೆ. ನಿಮ್ಮ ಈಗನ ಅವಸ್ತೆ, ಜಯದ್ರಥನ ಸಾವು, ಗುರುಗಳ ಸಾವು, ಕರ್ಣನ ಕೊಂದದ್ ಎಲ್ಲಾ ಅದರ್ಮದ ಕೊಲೆಗಳೇ, ಎಲ್ಲೋವರ ಕಳ್ಕಂಡ ಮೇಲೆ ಹಸ್ತಿನಾವತಿನ ಪಟ್ಟಲಿ ಕುದ್ರುವ ಆಸೆ ಈ ದುರ್ಯೋಧನಂಗಿಲ್ಲೆ. ನಂಗೆ ವೀರ ಮರಣ ಬೇಕ್ ಅಜ್ಜಪ್ಪಾ. ನನ್ನ ಮೇಲೆ ನೀವ್ಗೆ ಇರುವ ಎಲ್ಲಾ ಅಸಮದಾನನ ಮರ್‍ತ್‌ದ್ ನೀವು ನನ್ನ ಮಾಪು ಮಾಡೋಕು. ಅಪ್ಪ, ಅವ್ವನ ಕಳ್ಕಂಡ ಸಣ್ಣ ಮಕ್ಕಳ್‌ಂದ, ಮುತ್ತೈದೆತನನ ಸಾಸ್ವತ ಕಳ್ಕಂಡ ಹೆಣ್ಮಕ್ಕಳ್‌ಂದ, ಮೊದುವೆ ಆಕೆ ಗಂಡ್‌ಗಳೇ ಸಿಕ್ಕದ ಗೂಡೆಗಳ್‌ಂದ, ಯಾಗ ಯಮ ನಮ್ಮ ಕರ್‍ಕೊಂಡೋದೆನೋಂತ ಪಾರ ಕಾದ್‌ಕಂಡಿದ್ದ ಅಜ್ಜ, ಅಜ್ಜಿಕಳ್‌ಂದ ತುಂಬಿಕಂಡಿರುವ ಹಸ್ತಿನಾವತಿಗೆ ನಾ ಯಾಗೋಳೂ ಹೋಕಿಲ್ಲೆ. ಹದಿನೇಳ್ ದಿನಗ ಕಳ್ದೊ ಅಲ್ಲಿಂದ ನಾ ಹೊರ್‍ಟ್‌ದ್. ದೃತರಾಷ್ಟ್ರ ಚಕ್ರವರ್ತಿಗಳ, ನನ್ನ ಹೆತ್ತವ್ವ ಗಾಂಧಾರಿನ, ನನ್ನ ಕೈ ಹಿಡ್ದ ಹೆಣ್ಣ್ ಭಾನುಮತಿನ ನೀವು ಸಮ್ದಾನ ಪಡ್ಸೋಕು. ನಾವು ಹುಟ್ಟಿಕನ ಒಬ್ಬನೇ ಹುಟ್ಟುವೆ. ಸಾಯಕಾಕನನೂ ಒಬ್ಬನೇ ಹೋದವೆ. ಬನ್ನೆ ಅಜ್ಜಪ್ಪಾ. ನೀವು ಹರ್‍ಸೋಕು."

ಭೀಷ್ಮರ್ ಮಾತಾಡ್ತಿಲ್ಲೆ. ಕಾಲ್‌ಗೆ ಅಡ್ಡಬಿದ್ದ್ ದುರ್ಯೋಧನನ ಕೈಗಳ ಹಿಡ್ಕೊಂಡೊ. ಅಂವನ ತಲೆನ ಪೂಜಿದೊ. ಅವರ ಕಣ್ಣ್‌ಗ ಕಣನೀರ್‌ಂದ ತುಂಬಿತ್. ಅಂವ ನಿದಾನಲಿ ಹೊರಗೆ ಹೋಕನ ಇಂವ ಇನ್ ಬಾವುದೋಂತ ತಮ್ಮ ಮೊನ್ಸ್‌ನ ತಾವೇ ಕೇಳಿಕೊಂಡೊ. ಇಂವನ ಅಪ್ಪ, ಅವ್ವನ, ರಾಣಿ ಭಾನುಮತಿನ ಸಮ್ದಾನ ಮಾಡಿಕೆ ತಾನ್ ಎಲ್ಲಿ ಬೊಡ್ಕಿನೇಂತ ಏಚನೆ ಮಾಡಿಕನ ಆ ಮಾತ್‌ಗ ನೆಂಪಾದೊ. ...ಮುಂದೆನ ಜಲ್ಮಾಂತ ಒಂದು ಇದ್ದರೆ ಗಂಡುನೂ ಅಲ್ಲದ ಹೆಣ್ಣ್‌ನೂ ಅಲ್ಲದ ಒಂದು ಜೂವ ಆಗಿ ನಿನ್ನ ಕೊಂದನೆ...

*****

## ಹೋಳು – 17

# ಎಲ್ಲನೂ ಕಿಚ್ಚಿಲಿ ಸುಟ್ಟ್ ಹೋತ್

ಕೋಳಿ ಕೂಂಗಿಕಾಕನ ಮೃದು ಭಾಷಿಣಿ "ಅಂಬೇ, ಅಂಬೆ"– ಎಂತ ನನ್ನ ಮೈ ಹಿಡ್ದ್ ಅಲ್ಗಿಸಿಕಾಕನ ನಂಗೆ ಎಚ್ಚರ್ಕೆ ಆತ್. ನಾ ಎಲ್ಲಿ ಒಳೇಂತ ತಿಳ್ಯಕೆ ಹಂಞ ಹೊತ್ತ್ ಬೇಕಾತ್. ಇಂದ್ ನನ್ನ ಬೊದ್‌ಕ್‌ಲಿ ಬಾಳ ನಿರ್ಣಯದ ದಿನಂತ ತಿಳ್ದ್‌ಕಂಡ್ ಎದ್ದೆ. ನನ್ನ ಸೊಂತ ಕೆಲ್ಸಗಳ ಮುಗ್ಸಿ, ತಣ್ಣೀರ್‌ಲಿ ಮಿಾದ್, ಮೃದುಭಾಷಿಣಿ ಕೊಟ್ಟ ಪಳಾರನ ತಿಂದ್ ಮುಗ್ಸಿ, ನಾ ಪರಶುರಾಮರ ರಥನ ಹತ್ತಿದೆ. ನಿಹಾರಿಕೆ ಒಳ್ಳೇ ನಿದ್ದೆಲಿ ಇದ್ದದರ್‌ಂದ ಎದ್ರಿಸಿಕೆ ಮೊನ್ಸಾತಿಲ್ಲೆ. ಭೀಷ್ಮನ ಸೌಬದ ರಥನ ಬುಟ್ಟರೆ ನಾ ಹತ್ತಿದ ರಥ ಇದ್. ಭೀಷ್ಮರ ರಥ ಹತ್ತಿದ ತೊಪ್ಪು ಪರಶುರಾಮರ ರಥ ಏರ್‌ದರ್‌ಂದ ಸರಿ ಆದೆನೋ? ಇತ್ಲರೆ ಹೊಸ ಸಮಸ್ಯೆಗ ಏನಾದರ್ ಕಾಂಬಕೆ ಸಿಕ್ಕುದೋ?

ಪರಶುರಾಮರ್ ಮುಂದೆನೇ ರಥನ ಹತ್ತಿ ದ್ಯಾನ ಮಾಡುವವರಾಂಗೆ ಕುದ್ದಿದ್ದೊ. ಎಂತದರ ಏಚನೆ ಮಾಡ್ತಿದ್ದೊನೋ? ಅವರ ಶಿಷ್ಯ ಒಬ್ಬ ರಥನ ಓಡ್ಸಿಕೆ ತಯಾರಾಗಿತ್ತ್. ಅಂವನ ನೋಡಿ ನಾ ಹೇಳ್ದೆ, "ಗುರುಗಳೇನಾಲಾಯ್ಕ್‌ಲಿ ರಥನ ಓಡ್ಸಿನೆ. ಹಸ್ತಿನಾವತಿಗೆ ನಾವು ಇಬ್ಬೊರೇ ಹೋದರೆ ಒಳ್ಳದಿತ್ತ್. ನಿಮ್ಮ ಶಿಷ್ಯನ ಅಗತ್ಯ ಇಲ್ಲೆ." ಪರಶುರಾಮರ್ ಕಣ್ಣ್‌ಬುಟ್ಟ್‌ದ್ ನನ್ನ ನೋಡ್ದೊ. ಆ ಮೇಲೆಮೆಲ್ಲಂಗೆ ಹೇಳ್ದೊ, "ನಾವು ಈಗ ಹೋವ ದಾರಿ ಕಾಶಿನ ರಾಜ ರಸ್ತೆ ಅಲ್ಲ. ಕಲ್ಲ್‌ಮೊಣ್ಣ್‌ನ ಕಾಡ್ ದಾರಿ. ನಿಂಗೆಪರ್ಚಯ ಇಲ್ಲದ ದಾರಿ ಅದ್. ಇಂವ ಅನ್ಬವಸ್ತ. ನೀ ಏಕೆಸುಮ್ಮಂಗೆ ತೊಂದರೆ ತಕೊಣೊಕು?"

"ಇಲ್ಲೆ ಗುರುಗಳೇ, ನಾವಿಬ್ಬೊರೇಸಾಕ್. ಕಾಶಿನ ಕಾಡ್‌ಲಿ ಕುದ್ರೆಸವಾರಿ ಮಾಡ್ದೋಳ್‌ನಾ. ನನ್ನ ಸಾರತ್ಯದ ಬಗ್ಗೆ ನೀವು ಏಚನೆ ಮಾಡ್ಬೋಡಿ. ದಾರಿ ತೋರ್ಸಿಕೆಸೊತ ನೀವೇ ಇರಿಕಾಕನನಾ ದಾರಿ ತೊಪ್ಪುವ ಕಾರ್ಣನೇ ಇಲ್ಲೆ."

ಪರಶುರಾಮರ ಮೋರೆಲಿ ಮುಗುಳು ನೆಗೆ ಮೂಡ್ತ್. "ಆಗಲಿ" ಎಂತ ತಲೆನ ಹಂದಾಡ್ಸಿದೊ. ಅವರಶಿಷ್ಯ ರಥಂದ ಕೆಳಗೆ ಇಳ್ತ್. ಅಂವ ಕುದ್ರುವ ಜಾಗೆಲಿನಾ ಕುದ್ದೆ. ರಥಮುಂದೆ ಹೋತ್. ದಾರಿಲಿಹೋಕನ ದೂರಲಿ ಗಿರಿನಗರಿನ ಕೆರೆ ಕಂಡತ್. ಅಲ್ಲಿ ಕಳ್ದ ನೆಮ್ಮದಿನ ನಿಮ್ಸಗ ನೆಂಪಾದೊ. ಸೋರುವಮೂಂಕುನಮಕ್ಕ, ಕಪಟ ಗೊತ್ತಿಲ್ಲದ ಚೆಂದುಳ್ಳಿ ಹೆಣ್ಣ್ ಸೇವಂತಿ, ತನಿಗೆ ಗೊತ್ತಿದ್ದದರ ತನ್ನೋವ್ಕೆ ಹೇಳಿಕೊಡಿಕೆ ಆಗದ ಗಿರಿನಾಯಕ, ನನ್ನ ಮಗಳಾಂಗೆ ನೋಡಿಕಂಡ ಅಂವನ ಅಪ್ಪ –ಅವ್ವ, ಗಿರಿನಾಯಕಂಗೆ ಹಸ್ತಿನಾವತಿಂದ ಸೊತಂತ್ರ ಆಗಿ ಇರಿಕೆ ಆಗ್‌ತಿದ್ದರೆ ನಾ ಗಿರಿನಗರಿಲೇ ಒಳ್ದ್ ಬುಡ್ತಿದ್ದೆ. ಕಾಡ್ ಜನರ್ಗೆ ವಿದ್ಯೆ ಕಲ್ಸಿ ಬುದ್ದಿವೊಂತರಾಗಿ ಮಾಡಕಾಗಿತ್ತ್. ಆಗ ನನ್ನ ಜೂವನಕ್ಕೆ

ಒಂದ್ ಅರ್ತ ಬಾತಿತ್ತ್. ಪರಶುರಾಮರ್ ತೋರ್ಸುವ ದಾರಿಲಿ ನನ್ನ ಜೂವನಲಿ ಯಾವ ತಿರ್ಗಾಸ್ ಬಂದದೆನೋ?

ಕಾಡ್‌ನ ಹಸ್‌ರ್‌ಲಿ ತಿರ್ಗಾಟ ಮಾಡ್ದು ಬಾಳ ಕುಸಿನ ಕೆಲ್ಸ. ಈಗ ರಥ ಮೂಡು ದಿಕ್ಕ್‌ಲಿ ಹೋದೆ. ಪಡು ದಿಕ್ಕ್‌ಲಿ ನನ್ನ ಈ ದಾರಿ ಸಾಲ್ವ ಭೂಪತಿ ಅಲ್ಲಿಗೆ ಕರ್‍ಕೊಂಡ್ ಹೋಗಿತ್ತ್. ಮೂಡು ದಿಕ್ಕ್‌ಗೆ ಭೀಷ್ಮರ ಹಕ್ಕಲೆ ಕರ್‍ಕಂಡ್ ಹೋದೆ. ಬಲಪುಡೆಗೆ ಕಬರ್ ದಾರಿಲಿ ಹೋದರೆ ಗಿರಿನಾಯಕನಲ್ಲಿಗೆ ಹೋದೆ. ಭೀಷ್ಮ ನನ್ನ ಜೂವನನ ಬಿರ್ಗಾಳಿಗೆ ಸಿಕ್ಕಿದ ಹಡ್ಗ್‌ನಾಂಗೆ ಮಾಡಿ ಬುಟ್ಟತ್.

ಸಾಲ್ವ ಭೂಪತಿ ನನ್ನ ಮೊನ್ಸ್‌ಗೆ ದೊಡ್ಡಸ್ತಿಕೆನ ಸೋಗ್‌ಲಿ ಕಿಚ್ಚಿ ಇಸಿ ಬುಟ್ಟತ್. ಗಿರಿನಾಯಕ ಹಂಞ ಸುಕದ ಕ್ಷಣಗಳ ಅನ್ಬವಿಸಿಕೆ ಅವ್ಕಾಸ ಮಾಡಿಕೊಟ್ಟತ್. ಅಂವ ಅಮ್ಸರಲಿ ಹಸ್ತಿನಾವತಿಗೆ ಹೋಗಿ ನನ್ನ ಪೆಟ್ಟಿಗೆನ ತಂದತ್. ಇಲ್ಲರೆ ನಾ ಇನ್ನ್ ಸಾ ಹಂಞ ದಿನ ಗಿರಿನಗರಿಲೇ ಇರ್ತಿದ್ದೆ. ಇಲ್ಲರೆ ಅಲ್ಲೇ ಒಳ್ದ್ ಬುಡ್ತಿದ್ದೆನೋ ಏನೋ? ಈಗ ಪರಶುರಾಮರ ಇರಾದೆನಾಂಗೆ ಹಸ್ತಿನಾವತಿಗೆ ಹೋನೆ. ಭೀಷ್ಮರ್‌ಗೆ ಒಂದ್ ಪಾಟನ ಕಲ್ಸಿಕೆ.

ಪರಶುರಾಮರ್ ಅಪ್ಪಣೆ ಕೊಡ್ಸಿದ ಹಾಂಗೆ ಹಸ್ತಿನಾವತಿನ ಮುಂದೆನ ಬಾಕಿಲ್‌ಲಿ ರಥನ ನಿಲ್ಸಿದೆ. ಕಾವಲು ಕಾಯೋವ್ಕೆ ದೂರಂದಳೇ ರಥನ ಗುರ್ತ ಸಿಕ್ಕಿ ಓಡೋಡಿಕಂಡ್ ಬಂದೊ. ಪರಶುರಾಮರ್‌ಗೆ ಅಡ್ಡ ಬಿದ್ದೊ. "ನಾ ಈಗ ಒಳಗೆಬಾದ್ಲೆ. ಬಾಳ ದೊಡ್ಡ ಇಸಯನ ಭೀಷ್ಮನ ಹಕ್ಕಲೆ ಚರ್ಚೆ ಮಾಡಿಕೆ ಉಟ್ಟು. ಕೂಡ್ಲೇ ಅಂವನ ಬಾಕೆ ಹೇಳಿ. ನನ್ನೊಟ್ಟಿಗೆ ಕಾಳಗ ಕೊಡಿಕೆ ತಯಾರಾಗಿನೇ ಅಂವ ಬರ್‍ಲಿ. ಗುರುಗಳ ಅಪ್ಪಣೇಂತ ಹೇಳಿ."

ಭೀಷ್ಮ ಗಡಿಬಿಡಿಂದ ಓಡೋಡಿ ಬಾತ್. ಸಾರತಿ ಸ್ತಾನಲಿ ನನ್ನನ ಕಾಂಬಕನ ಅಂವನ ಮೋರೆನ ಬೆಳ್ಚಿತ್. ಭೀಷ್ಮ ಅಂವ ಬಂದ ರಥಂದ ಇಳ್ತ್. ಪರಶುರಾಮರ್ ಸಾತ್ ಇಳ್ದೊ. ಶಿಷ್ಯ ಗುರುಗಳ ಕಾಲ್‌ಗೆ ಅಡ್ಡ ಬಿದ್ದ್ ನಮಸ್ಕಾರ ಮಾಡ್ತ್. ದೈನ್ಯಂದ ಕೈ ಜೋಡಿಸಿ ಕೇಳ್ತ್. "ಗುರುಗಳೇ ಈ ಶಿಷ್ಯನ ಕಾಂಬಕೆ ಅಸ್ಟ್ ದೂರಂದ ನೀವೇ ಬಾಕಾಗಿತ್ತೋ? ಒಂದ್ ಮಾತ್‌ನ ಹೇಳಿ ಕಳ್ಸ್‌ತಿದ್ದರೆ ಆಸ್ರಮಕ್ಕೆ ನಾನೇ ಬಂದ್‌ಬುಡ್ತಿದ್ದೆ. ಹೇಳಿ ಗುರುಗಳೇ, ಈ ಶಿಷ್ಯಂದ ಏನಾಕು?"

ಗುರುಗ ಶಿಷ್ಯನ ಕಾಲ್‌ಂದ ತಲೆ ಮುಟ್ಟ ನೋಡ್ದೊ. ಆ ಮೇಲೆ ಗಂಬೀರ ಸೊರಂದ ಕೇಳ್ದೊ. "ಹೇಳ್ರೆ ನಡ್ಸಿಕೊಟ್ಟನೇಂತ ಮಾತ್ ಕೊಟ್ಟೆಯನಾ?"

ಭೀಷ್ಮ ತಲೆ ಕೆಳಗೆ ಹಾಕಿತ್. ಸಣ್ಣ ಸೊರಲಿ ಅಂವ ಹೇಳ್ತ್. "ಗುರುಗಳೇ, ನಿಮ್ಮ ಶಿಷ್ಯನ ಪ್ರತಿಜ್ಞೆಗೆ ಬಂಗಬರುವ ಬೇಡಿಕೆ ನಿಮ್ಮದ್ ಇರಿಕಿಲ್ಲೇಂತ ಗ್ರೇಸಿನೆ. ಮೊದುವೆ ಆವಸುದ್ದಿನ ಬುಟ್ಟ್, ನೀವು ಬೇರೆ ಏನ್ ಹೇಳ್ರನೂ ತಲೆ ಬೊಗ್ಗಿಸಿ ಈಡೇರ್‍ಸಿನೆ."

ಪರಶುರಾಮರ ಕಣ್ಣ್‌ಗ ಕೆಂಡದ ಉಂಡೆನಂಗಾತ್. ದೊಡ್ಡ ಸೊರಲಿ ಅವು ಹೇಳ್ದೊ. "ನೀಚ ಕ್ಷತ್ರಿಯನಾಂಗೆ ಮಾತಾಡ್ಬಡ. ಹೆಣ್ಣ್‌ನ ಬೊದ್ಕ್‌ಲಿ ಆಟ ಆಡಿ ದಕ್ಕಿಸಿ ಕೊಂಬೇಂತ ನೆನ್ಸಿಯಳನೋ? ನನ್ನ ಶಿಷ್ಯ ಆಗಿ ನೀ ಇಂತಾಮಾತ್‌ನ ಹೇಳ್ದೊ?

ತೊಪ್ಪು ಮಾಡ್ದಂವ ನೀ. ಸರಿಪಡ್ಸಬೇಕಾದಂವನೂ ನೀನೇ. ಕಾಶೀರಾಜನ ಪಂತದಾಂಗೆ ಇದರ ನೀನೇ ಮೊದುವೆ ಆಕು. ಬಾಕೆ ಕಾಗ್ದ ಕೊಟ್ಟತ್ಲರೂ ಬುದ್ಧಿ ಕಳ್ಕಂಡ್, ಕಾಶಿಗೆ ಹೋಗಿ, ಸಾಲ್ವ ಭೂಪತಿನ ಹೆಣ್ಣ್ ಆಕಾದ ಇದರ ಬಲಾತ್ಕಾರಲಿ ಹಸ್ತಿನಾವತಿಗೆ ಕರ್‍ಕಂಡ್ ಬಂದ ಪಾಪಿ ನೀ, ನಿನ್ನ ಗುರು ಆಗಿ ಕುರುಸಾಮ್ರಾಜ್ಯದ ಒಳ್ಳದಕ್ಕಾಗಿ ನಾ ಹೇಳ್ನೆ. ಇದರ ಮೊದುವೆ ಆಗಿ ನೀ ಮಾಡ್ದ ಪಾಪಕ್ಕೆ ಪರ್‍ಯಾರ ಕಂಡ್‌ಕ.

ಭೀಷ್ಮ ಒಂದಿಸ್ಟ್ನೂ ಎದೆಕುಂದದೆ ಹೇಳ್ತ್. "ಗುರುಗಳೇ, ನಿಮ್ಮ ಶಿಷ್ಯನ ಮಾತ್‌ನ ತೊಪ್ಪುಸಿಕೆ ಬಂಗಬಾವ ಮಾತ್‌ಗ ನಿಮ್ಮಂದ ಬಾಕೆ ಆಗದ್. ಹಸ್ತಿನಾವತಿನ ಸಿಂಹಾಸನದ ರಕ್ಷಣೆಗಾಗಿ ರಾಜಮಾತೆನ ಹೇಳಿಕೆನಾಂಗೆ ಇದರ ವಿಚಿತ್ರವೀರ್‍ಯಂಗಾಗಿ ಕರ್‍ಕಂಡ್ ಬಂದೆ. ಇದರ ತಂಗೆಕಳಿಗೆ ಇಸ್ಟ ಆದ ವಿಚಿತ್ರವೀರ್‍ಯ ಇದಕ್ಕೆ ಇಸ್ಟ ಆತ್ಲೆ. ನಾ ಬಲಾತ್ಕಾರಂದ ಇದರ ಮೊದುವೆ ವಿಚಿತ್ರವೀರ್‍ಯನೊಟ್ಟಿಗೆ ಮಾಡಕಾಗಿತ್ತ್. ಆದರೆ ನಾ ಹಾಂಗೆ ಮಾಡ್ತಿಲ್ಲೆ. ಇದರ ಮೊನ್ಸ್‌ಗೆ ಗೌರವ ಕೊಟ್ಟೆ. ಇದ್ ಹೇಳ್ದಾಂಗೇ ಇದ್ಕೆ ಇಸ್ಟ ಇರುವ ಸಾಲ್ವ ಭೂಪತಿನಲ್ಲಿಗೆ ಮೊರ್‍ಯಾದೆಲಿ ದೊಡ್ಡ ಪಂಡಿತರೊಬ್ಬರ ಜೊತೆಲಿ ಕಳ್ಸಿಕೊಟ್ಟೆ. ಅವಂದ ತಿರಸ್ಕಾರ ಹೊಂದಿದ ಮೇಲೆ ನಿಮ್ಮಲ್ಲಿ ದೂರು ತಕಂಡ್ ಬಾತ್. ನನ್ನನೇ ಮೊದ್ವೆ ಆಕೂಂತ ಇದ್ಕೆ ಇಸ್ಟ ಇರ್ತಿದ್ದರೆ, ಸಾಲ್ವ ಭೂಪತಿಯಲ್ಲಿಗೆ ಹೋವ ಬದ್ಲಾಗಿ ನೇರ ನಿಮ್ಮಲ್ಲಿಗೆನೇ ಬರಕಾಗಿತ್ತ್. ಆಗ ಶಿಷ್ಯನ ಇಚಾರ್ಣೆ ಮಾಡಿಕೆ ಗುರುಗಳಿಗೆ ಒಂದ್ ನ್ಯಾಯ ಪಂಚಾತಿಗೆಗೆ ದಾರಿ ಸಿಕ್ತಿತ್ತ್. ಗುರುಗಳೇ, ನೀವು ಇದರ ಗಳ್ಗಿಗೊಂದು ಮೊನ್ಸ್‌ನ ಅರ್ತ ಮಾಡಿಕಣದೆ ಹೋದರಿ. ಸೊಂಯಂವರ ಮಂಟಮೆಲಿ ಹತ್ತಿನಿ ನನ್ನ ರಥನಾಂತ ನಾ ಹೇಳಿಕನ ಇದ್ ಸಾಲ್ವನಕ್ಕಲೆ ತನಿಗೆ ಪ್ರೀತಿ ಉಟ್ಟೂಂತ ಹೇಳ್‌ತಿಲ್ಲೆ. ನನ್ನ ಬ್ರಹ್ಮಚರ್‍ಯ ವ್ರತ ಗೊತ್ತಾದ ಮೇಲೆ ಸಾಲ್ವನ ನೆಂಪು ಮಾಡಿಕಂಡತ್. ಅಂವ ಒಪ್ಪದ ಮೇಲೆ ನಿಮ್ಮಲ್ಲಿಗೆ ಬಂದ್ ನನ್ನ ಮೇಲೆ ದೂರು ಸಲ್ಲಿಸುಟು. ಗಳ್ಗಿಗೊಂದು ಬುದ್ದಿ ಇರುವ ಇದ್ ಸೋತು ಹೋಗಿ ಆಡಿದ ಮಾತ್‌ನ ಇದೇ ಸರೀಂತ ನೀವು ಹೇಳಿಕಂಡ್ ನನ್ನ ಇಚಾರ್ಣೆಗೆ ಬಂದಳರಿ. ಮಾಡ್ದ ಪ್ರತಿಜ್ಞೆನ ಮುರ್‍ಯಂವಾಂತಾದರೆ, ನಿಮ್ಮ ಶಿಷ್ಯ ಇಲ್ಲಿಗೆ ಮುಟ್ಟ ಕಾಯುವ ಅಗತ್ಯ ಏನಿತ್ತ್?"

ಪರಶುರಾಮರ್ ಏಚನೆ ಮಾಡಿಕೆ ಸುರುಮಾಡ್ವೊ. ಅವರ ಸೊರ ಇನ್ನಸ್ಟ್ ತಗ್ಗಿತ್. "ಭೀಷ್ಮಾ, ನಿನ್ನ ಸಪತನ ಕರೆಗಿಸಿ, ಒಟ್ಟುನಡ್ದ ಇಸಯನಸರ್‍ಯಾಗಿ ನೋಡ್. ರಾಜಮಾತೆನ ಅಪ್ಪಣೆನಾಂಗೆಸಿಂಹಾಸನದ ರಕ್ಷಕ ಆಗಿ ಕಾಶಿಗೆಹೋದೇಂತೇಳಿಯ. ಅದೇ ರಾಜಮಾತೆ ಸಿಂಹಾಸನದ ರಕ್ಷಣೆಗಾಗಿ ಅಂಬೆನ ಮೊದ್ವೆ ಆಗ್‌ಂತ ಹೇಳಿರೆ ಇದರ ಕೈ ಹಿಡ್ದಿಯನೋ? ನಿನ್ನ ತೊಪ್ಪುನ ಬೇರೆಯವರ ಮೇಲೆ ಹೊರ್‍ಸ್‌ಬಡ. ಕಾಶೀರಾಜಂಗೆ ತನ್ನ ಮಗಕ್ಕಳ ಹಸ್ತಿನಾವತಿನ ಸೊಸೆಕ್ಕ ಆಗಿ ಮಾಡಿಕೆ ಇಸ್ಟ ಇಲ್ಲದರ್‌ಂದ ಅಂವ ನಿಂಗೆ ಸೊಂಯಂವರಕ್ಕೆ ಬಾಕೆ ಹೇಳಿಕೆ ಕಳ್ಸಿತಿಲ್ಲೆ. ಅಲ್ಲಿಗೆ ನಿನ್ನದ್ ದರ್ಮ ತೊಪ್ಪಿದಂಗಾತ್. ಅಲ್ಲಿ ನೀ ಪಂತಲಿ ಗೆದ್ದ ಕಾರ್ಣ ಧರ್ಮಪ್ರಕಾರ ಮೂರು ರಾಜಕುಮಾರಿಗಳ್ಗೆ ನೀನೇ ಗಂಡಾಂತ ಆತ್. ಒಳ್ದ ಇಬ್ಬರ ಇಸಯನ ಬುಟ್ಟು ಬುಡೊಮೊ. ಪಂತದ ಪ್ರಕಾರ ಈಗ ಸಾತ್ ನೀ

ಇದರ ಗಂಡ ಆಗೊಳ. ಇದರ ಈ ಪ್ರಾಯಕ್ಕೆ ಸೊಂತ ನಿರ್ದಾರ ತಕಂಬ ಗುಣ ಹೇಗೆ ಬಾದು ಹೇಳ್. ನಿನ್ನ ಪ್ರತಿಜ್ಞೆಗೆ ಗೌರವ ಕೊಟ್ಟ್‌ದ್ ಇದ್ ಸಾಲ್ವನಲ್ಲಿಗೆ ಹೋತ್. ಅಂವಂಗೆ ಬುದ್ದಿ ಇಲ್ಲೆ. ಇರ್ತಿದ್ದರೆ ಅಂವ ಇದರ ತಿರಸ್ಕಾರ ಮಾಡ್‌ತಿತ್ಲೆ. ಇಲ್ಲರೆ ಪಂತದ ಪ್ರಕಾರ ಮುಂದೆನೇ ಭೀಷ್ಮನ ಹೆಣ್ಣ್ ಆಗಿ ಇದ್ದ ಅಂಬೆನ ಹೇಂಗೆ ಒಪ್ಪುದೂಂತ ಹೇಳ್ವ ದರ್ಮಸಂಕಟ ಅಂವನ ಕಾಡಿರೋಕು. ನೀ ಗೆದ್ದ ಪಲನ ನೀನೇ ತಿನೊಕು. ವಿಚಿತ್ರವೀರ್ಯನ ನಾ ಕಂಡಂವನೇ. ಅಂವ ಸಕ್ತಿ ಇದ್ದಂವ ಆಗಿರ್ತಿದ್ದರೆ ಮೊದ್ವೆ ಮಂಟಮೆಗೆ ನಿನ್ನನ ಯಾಕೆ ಸತ್ಯವತಿ ಕಳ್ಸಕಾಗಿತ್ತ್? ಅಂವನ ನಡೋಳ್ಕೆಂದ, ಅಂವನಲ್ಲಿ ಗಂಡ್‌ಸ್‌ತನ ಉಟ್ಟೋಂತೇಳ್ವ ಸಂಸಯಂದ ಸತ್ಯವತಿ ಹಾಂಗೆ ಮಾಡ್ತ್. ಈ ಇಸಯಲಿ ನಂಗೂ ಸಂಸಯ ಉಟ್ಟು. ಸಿಂಹಾಸನದ ರಕ್ಷಕ ಆಗಿ ಒಬ್ಬ ಸಮರ್ತ ಬಲ ಇರ್ವ ವಾರಾಸ್ದಾರನ ಕುರುಸಾಮ್ರಾಜ್ಯಕ್ಕೆ ಕೊಡಕಾದ್ ನಿನ್ನ ಕರ್ತವ್ಯ. ಇದರ ಮೊದುವೆ ಆಗ್. ಒಬ್ಬ ಸಮರ್ತ ಆದ ಗಂಡ್ ಕೂಸುನ ಪಡ್ದ್ ಕುರುಸಾಮ್ರಾಜ್ಯನ ಒಳ್ಸು."

ಭೀಷ್ಮಂಗೆ ಕೂಡ್ಲೇ ಮಾತಾಡಿಕೆ ಆತ್ಲೆ. ಹಂಞ ಹೊತ್ತ್ ಏಚನೆ ಮಾಡಿ ನಿದಾನಲಿ ಹೇಳ್ತ್, "ಗುರುಗಳೇ ಅಂಬೆನ ಇಚಾರನ ಎಲ್ಲಾಸರ್‍ಯಾಗಿ ಏಚನೆಮಾಡಿ ನೋಡ್ಯಳೆ. ಭೀಷ್ಮನನಡೋಳ್ಕೆನ ಇಡೀ ಆರ್ಯಾವರ್ತನೇನೋಡ್ದೆ. ಭೀಷ್ಮ ದೊಡ್ಡ ಜನ ಅಂತ ಅಲ್ಲ. ಕುರು ಸಾಮ್ರಾಜ್ಯ ದೊಡ್ಡದ್. ಅಯೋದ್ಯೆನ ರಾಮಚಂದ್ರ ಅಪ್ಪಂಗಾಗಿ ಹದ್ನಾಕ್ ವೊರ್ಸ ವನ್ವಾಸ ಅನ್ಬವ್ಸಿತ್. ಸೂರ್ಯವಂಸಕ್ಕೆ ಅಂತಾ ಹೆಸ್ರ್ ಬಾಕೆ ಅಂವ ಕೊಟ್ಟ ಮಾತ್‌ಗೆ ತೊಪ್ಪದ ಕಾರ್ಣ ಆತ್. ನಾ ಸಾ ಅಪ್ಪಂಗಾಗಿ ಆಣೆ ಮಾಡ್ದಂವ. ನನ್ನ ಅಪ್ಪ ಸತ್ತ್ ಹೋಗೊಳೋಂತ ನಾ ನನ್ನ ಆಣೆನ ಮುರ್ದರೆ ಚಂದ್ರವೊಂಸದ ಬಗ್ಗೆ ಚರಿತ್ರೆ ಏನ್ ಹೇಳ್ದು? ನೀವು ನಿಮ್ಮ ಅಪ್ಪಂಗಾಗಿ ನೀವುಗೆ ಇಸ್ಟ ಇತ್ಲರೂ ಹಂಞ ಕೆಲ್ಸಗಳ ಮಾಡ್ದರ ನೀವು ನನ್ನಲ್ಲಿ ಹೇಳ್ಯೊಳರಿ. ಅದ್ ನಂಗೆ ಈಗ ಸಾ ನೆಂಪುಟ್ಟು. ನನ್ನದ್ ಗುರುಗ ತೋರ್ಸಿದ ದಾರಿ. ಕೊಟ್ಟ ಮಾತ್‌ನ ನಡ್ಸುದು ಬಾಳ ದೊಡ್ಡ ಕೆಲ್ಸ. ಗುರುಗ ಆಗಿ ನೀವು ಇದರೆಲ್ಲಾ ಮಾಡೊಕು. ಉದ್ದೇಸ ಇಲ್ಲದೆ ಬೊದ್ಕ್‌ನ, ಸಾಮ್ರಾಜ್ಯನ ಕಟ್ಟಿಕೆ ಆದುಲ್ಲೆ. ಕೈ ಮುಗ್ದ್‌ದ್ ಕೇಳ್ನೆ ಗುರುಗಳೇ, ಉದ್ದೇಸಗ ಹಾಳಾಕೆ ನೀವು ಕಾರ್ಣ ಆಗ್ಬೋಡಿ."

ಪರಶುರಾಮರ್ ಅಂವನ ಒಪ್ಪುಸುವ ದನಿಲಿ ಹೇಳ್ದೊ, "ಆದರೆ ಭೀಷ್ಮಾ, ಪಂತದ ಕಟ್ಟಳೆ ಪ್ರಕಾರ ಅಂಬೆನ ನೀ ಮೊದುವೆ ಆಕಾದೆ. ಅದ್ ನಿನ್ನ ದರ್ಮ. ಕಟ್ಟಳೆನ ಮುರ್‍ಯೋದು ಅದರ್ಮ ಆದ್ಲೇನಾ? ಅದ್ ಉದ್ದೇಸನ ಹಾಳ್ಮಾಡ್ದಾಂಗೆ ಆದ್ಲೆನಾ? ನೀ ದರ್ಮಕ್ಕೆ ಕಾರಣ ಕೊಡಂವ ನಡ್ದದರ ನಿನ್ನ ಅನ್ಕೂಲಕ್ಕೆ ತಕ್ಕಾಂಗೆ ಹೇಳ್ಯ. ನಿನ್ನ ಆಣೆಗಾಗಿ ಒಂದ್ ಹೆಣ್ಣ್‌ನ ಬಾಳ್‌ನ ಹಾಳ್ಮಾಡ್ದು ಯಾವ ಉದ್ದೇಸ? ಹೇಳ್. ಇದ್ ಈಗ ಏನ್ ಮಾಡೊಕು?"

ಭೀಷ್ಮ ಕೂಡ್ಲೇ ಹೇಳ್ತ್, "ಗುರುಗಳೇ ಇದ್ ಸಾಲ್ವನಲ್ಲಿಗೆ ಹೋಕಾಕನ ಇದಾಗಿನೇ ಕಾಶೀರಾಜನ ಪಂತದನಿಯಮನ ಮುರ್ದಾಂಗಾತ್. ಅಲ್ಲಿಗೆ ಕುರು ಸಾಮ್ರಾಜ್ಯಕ್ಕೆ ಇದರ ರಕ್ಷಣೆ ಮಾಡುವ ಜವಾಬ್ದಾರಿ ಮುಗ್ತ್. ಇದರ ಮುಂದೆನ ಜೂವನನ ನಿರ್ದಾರ

ತಕಂಬಕಾಗದಸ್ಟ್ ಹೆಡ್ಡಿ ಏನ್ ಅಲ್ಲ? ಇದ್ ಪ್ರೀತಿ ಮಾಡ್ದ್ ಸಾಲ್ವನ. ನೀವು ನನ್ನ ಹಕ್ಕಲೆ ಬಾವ ಬದ್ಲ್ ಸಾಲ್ವನ ಹಕ್ಕಲೆ ಹೋಗಿ ಎರ್ಡ್ ಮಾತ್‌ನ ಗಟ್ಟಿಲಿ ಹೇಳ್ತಿದ್ದರೆ ಅಂವ ಬಾಯ್ಮುಚ್ಚಿಕಂಡ್ ಅಂಬೆನ ಮೊದ್ವೆ ಆಗ್ತಿತ್ತ್. ನೀವು ನನ್ನ ಗುರುಗ. ನನ್ನ ಜೂವಕ್ಕೆ ಒಪ್ಪಕೊಟ್ಟೋವು. ನಾ ಇಡೀ ಜೂವಮಾನ ಬ್ರಹ್ಮಚಾರಿ ಆಗಿ ಇದ್ದನೇಂತ ಆಣೆ ಮಾಡಿಕಾಕನ ನನ್ನ ಕಣ್ಣ ಮುಂದೆ ಇದ್ದದ್ ನಿಮ್ಮ ಆದರ್ಸ. ಇನ್ನ್ ನಾ ಹಿಂದೆ ಸರಿವ ಮಾತೇ ಇಲ್ಲೆ. ನೀವು ಯಾವ ಸಿಕ್ಸೆ ಕೊಟ್ಟರು ಸಾ ನಾ ಅನ್ನವಿಸಿಕೆ ತಯಾರೊಳೆ."

ಪರಶುರಾಮರ್ ಸುಮ್ಮಂಗಾದೊ. ಅವರ ಅಂಬೆರ್ಪುಂದ ಹೀಂಗಾತ್‌ಂತ ನಾಂಗಾತ್. ನಾ ಆಸ್ರಮಲಿ ಅವರ ಸಿಸ್ಯೆ ಆಗಿ ಮೊದ್ವೆ ಆಗದೆ ಜೂವಮಾನ ಇಡೀ ಇದ್ದನೇಂತ ಅವರಕ್ಕಲೆ ಹೇಳಿದ್ದೆ. ನನ್ನ ಅವು ಅಲ್ಲಿನೇ ಇಸಿಕಣಕಾಗಿತ್ತ್. ಸರಳ ಜೂವನ ನನ್ನ ಕ್ಷತ್ರಿಯ ಜೂವನನ ತೆಗ್ದ್ ಹಾಕಿಬುಡ್ತಿತ್ತ್. ಮಧುಭಾಷಿಣಿ ನನ್ನ ಜತೆಗಾತಿ ಆಗಿ ಇರ್ತಿತ್ತ್. ಸಾಲ್ವ ಭೀಷ್ಮರ್‌ಲಿ ಒಬ್ಬನ ಮೊದ್ವೆ ಆಗ್‌ಂತ ಅವು ಒತ್ತಾಯಮಾಡಿ ಹೇಳ್ದಕ್ಕೆ ನಾ ಭೀಷ್ಮನ ಹೆಸ್ರ್ ಹೇಳ್ದೆ. ಸಾಲ್ವನಪ್ರೀತಿ ಮಾಡ್ದೋಳುಭೀಷ್ಮನ ಯಾಕೆಹೇಳ್ದೇಂತ ಅವು ಏನ್ ಕೇಳ್ತಿಲ್ಲೆ. ಅವೇ ತೀರ್ಮಾನ ತಕಂಡ್ ನನ್ನ ಸಾಲ್ವನಲ್ಲಿಗೆ ಕರ್ಕಂಡ್ ಹೋಗಿ ಬುಡಕಾತ್. ಅವರ ಎದ್ರ್‌ಲೇ ಸಾಲ್ವನೊಟ್ಟಿಗೆ ನನ್ನ ಮೊದ್ವೆ ಮಾಡ್ಸಕಾಗಿತ್ತ್. ಅವು ಒಂದ್ ಮಾತ್ ಹೇಳ್ತಿದ್ದರೆ, ಸಾಲ್ವ ಆಗಲಿ, ಅಂವನ ಪ್ರಜೆಗ ಆಗಲೀ ಕುಂಯ್ಯ್, ಕುಂಯ್ಯ್‌ಂತೇಳದೆ ಒಪ್ಪುತಿದ್ದೊ. ಬಣ್ಣ ಮತ್ತೆ ಜಾತಿನ ತೆಗ್ದದ್ ಹಾಕೊಕೂಂತ ಹೇಳೋವು ಅವು. ಅವು ಹಾಂಗೆ ಮಾಡ್ತಿದ್ದರೆ ಇಡೀ ಆರ್ಯಾವರ್ತನೇ ಏಚನೆ ಮಾಡುವ ಕ್ರಮ ಬದ್ಲಾಗಿ ಹೋಗ್ತಿತ್ತ್. ನಂಗು ಸಾ ಅದ್ ಹೊಳ್ಯದೆ ಹೋತ್. ಈಗ ಯಾರ್ನ ಸಾ ದೂರಿ ಪ್ರೋಜನ ಇಲ್ಲೆ. ಅವು ಇನ್ನೇನ್ ಮಾಡುವೆನೋ?

ಹಂಞ ಹೊತ್ತ್‌ನ ಮೇಲೆ ಪರಶುರಾಮರ್ ಹೇಳ್ದೊ. "ಇಸಯ ಈ ಹಂತಕ್ಕೆ ಮುಟ್ಟಿದಮೇಲೆ ಇದ್ಕೊಂದು ಗತಿ ಕಾಣ್ಸೋಕೇ ಕಾಣ್ಸೋಕು. ನೀ ನನ್ನ ಸಿಸ್ಯಾಂತ ನಾ ಹೇಳ್ದುದ್ಲೆ. ಅಂಬೆನ ಸ್ತಾನಲಿ ನಿತ್ತ್ ಇಡೀ ಇಸಯನ ಒಮ್ಮೆ ಏಚನೆ ಮಾಡ್. ಕಾಶೀರಾಜ ತನ್ನ ಮಗಕ್ಕಳ ಕೇಳಿ ಸೊಂಯಂವರಕ್ಕೆ ಸಕ್ತಿನ ಪಂತಾಂತ ಇಸಿತಿಲ್ಲೆ. ನೀ ರಥನ ಹತ್ತ್‌ಂತ ಹೇಳಿಕಾಕನ ಅವರ ಮೊನ್ಸ್‌ಲಿ ಏನ್ ಉಟ್ಟೊಂತ ಒಂದ್ ಮಾತ್‌ನ ಕೇಳ್ತ್‌ಲ್ಲೆ. ಸೊಂಯಂವರ ಮಂಟಮೆಲಿ "ವಿಚಿತ್ರವೀರ್ಯನ ನೀವು ಗಂಡಾಂತ ಒಪ್ಪಿರೆನೋ?"– ಎಂತ ಕೇಳ್‌ತಿಲ್ಲೆ. ಪ್ರತಾಪಸೇನ ಆಗಲೀ, ನೀ ಆಗಲೀ ರಾಜಕುಮಾರಿಯರ್ಗೆ ಒಂದ್ ಮೊನ್ಸ್‌ಂತ ಉಟ್ಟುಂತ ಹೇಳ್ದರ ತಿಳ್ಕಂಡತೇ ಇಲ್ಲೆ. ನೀವು ನಡ್ಕಂಡ ರೀತಿ ಹೆಣ್ಮಕ್ಕಳ ಹೇಂಗೆ ಬೇಕಾದರ್ ನಡ್ಸಿಕಣಕ್‌ಂತೇಳ್ವ ಮಾತ್‌ನ ಹುಟ್ಟು ಹಾಕಿದೆ. ರಾಜ್ಯನ ಕಟ್ಟಿಕೆ ಮುಂದೆ ಹೆಣ್ಮಕ್ಕಳ್‌ಗೆ ಸೊತಂತ್ರ ಇತ್ತ್. ಹಿಂದೆನ ಕಾಲಲಿ ಅಯ್ಯೆ ಕುಟುಂಬದ ಎಜಮಾನ್ತಿ ಆಗಿತ್ತ್. ಈಗ ನೋಡ್, ತನ್ನ ಮೊನ್ಸಿಗೆ ಒಪ್ಪಿಂದವನ ಮೊದ್ವೆ ಆಗುವ ಹಕ್ಕುನೂ ಅವ್ಕೆ ಇಲ್ಲೆ. ನನ್ನ ಅಪ್ಪ ಜಮದಗ್ನಿನ ಸಂಸಯ ಸೊಬಾವಂದಾಗಿ ನನ್ನ ಅವ್ವ ರೇಣುಕೆ ನಲ್ಗಿತ್. ಜೂವಮಾನ ಇಡೀ ಕೊರ್ಗಿತ್. ಬಲ ಇದ್ದೋವು ಹೆಣ್ಣ್‌ನ ಹೇಂಗೆ ಬೇಕಾದರ್‌ನೂ

ನಡ್ಸಿಕಣಕ್‌ಂತೇಳ್ವ ಮಾತ್‌ನ ಹುಟ್ಟ್‌ಹಾಕ್ಬಡ. ಬಲ ಇದ್ದೋವು ಬಲ ಇಲ್ಲದವರ ತಮಿಗೆ ಸಮಾನಾಂತ ಕಂಡ್ ಬೊದ್ಕಿಕೆ ಎಡೆ ಮಾಡಿ ಕೊಡ್ದು ದರ್ಮ. ನೀ ಈಗ ಮಾಡ್ದು ಅದರ್ಮ. ಕುರುಸಾಮ್ರಾಜ್ಯನ ರಕ್ಷಿಸಿನೆ ಎಂತ ಹೇಳ್ವ ನಿನ್ನ ಹುಚ್ಚುತನ, ಅದ್ ಕೆಳಗಿಳ್ಯಕೆ ಕಾರ್ಣ ಆದೆ. ಗುರು ಆಗಿ ನಿನ್ನ ಎಚ್ಚರ್ಸಿಕೇಂತೇಳಿನೇ ನಾ ಈಗ ಬಂದದ್."

ಭೀಷ್ಮರ ಮೋರೆಲಿ ಕಳವಳ ಮೂಡ್ತ್. ಬಾಳ ಬೇಡಿಕಂಬ ಹಾಂಗೆ ಅಂವ ಹೇಳ್ತ್, "ಗುರುಗಳೇ ಹಸ್ತಿನಾವತಿನ ಸಿಂವಾಸನಕ್ಕೆ ನಿಷ್ಟೆ ಆಗಿ ಇರೊಕೂಂತ ಸಣ್ಣ ಪ್ರಾಯಲೇ ನಂಗೆ ಶಂತನು ಮಾರಾಜರ್ ಹೇಳಿಕೊಟ್ಟಿದ್ದೊ. ನಾ ಜೂವಮಾನ ಇಡೀ ಬ್ರಹ್ಮಾಚಾರಿ ಆಗಿ ಇದ್ದನೇಂತ ಆಣೆಮಾಡಿಕೆ ಅಡಿಗಟ್ಟ್ನ ಹೇಳಿಕೊಟ್ಟದ್ ಅದೇ ಪಾಟ. ಅದರ್‌ಂದಾಗಿನೇ ವಿಚಿತ್ರವೀರ್ಯಂಗಾಗಿ ರಾಜಮಾತೆನ ಅಪ್ಪಣೆ ಪ್ರಕಾರ ಕಾಶೀ ರಾಜಕುಮಾರಿಗಳ ಕರ್ಕಂಡ್ ಬಂದದ್. ಹೆಣ್ಣ್‌ನ ಅಪಮಾನ ಪಡ್ಸುವ ಉದ್ದೇಸ ನಂಗಿಲ್ಲೆ. ಈಗ ಸಾತ್ ಅಂಬೆ ಒಪ್ಪಿರೆ ವಿಚಿತ್ರವೀರ್ಯನ ಒಟ್ಟಿಗೆ ಅದರ ಮೊದುವೆ ಮಾಡ್ಸಿನೆ. ಹಸ್ತಿನಾವತಿನ ಮಾರಾಣಿ ಇದಾದೆ. ಕೊಟ್ಟ ಮಾತ್‌ಗೆ ತೊಪ್ಪಿಕೆ ಬೊತ್ತ್‌ಂತ ನೀವು ಹೇಳಿಕೊಟ್ಟ ಮಾತ್. ನಾ ಆಣೆನ ಮುರ್ದರೆ ಇಡೀ ದೇಸಕ್ಕೆ ಅದ್ ಒಂದ್ ಕೆಟ್ಟ ಮಾದೆರಿ ಆದೆ. ಕುರುಸಾಮ್ರಾಜ್ಯಕ್ಕೆ ನೀತಿನ ನೆಲೆಗಟ್ಟ್ ಇಲ್ಲದಂಗಾದೆ."

ಪರಶುರಾಮರ ಕಣ್ಣ್‌ಗ ಕಿಚ್ಚಿನ ಕಾರ್ತ್. ಎತ್ತರದ ಸೊರಲಿ ಅವು ಹೇಳ್ದೊ. "ಸಾಕ್‌ಮಾಡ್ ನಿನ್ನ ಹಟಮಾರಿತನನ. ಹಟ ಮಾಡ್ದು ಗಂಡಸ್ತನ ಇಲ್ಲದವ್ರ ಇನ್ನೊಂದು ಮೋರೇಂತ ತಿಳ್ಕ. ಸತ್ತ್‌ಹೋದ ಅಪ್ಪಂಗಾಗಿ ಯಾಗೊಳೋ ಮಾಡ್ದ ಆಣೆ ಒಂದ್ ಅಸಾಯಕ ಹೆಣ್ಣ್‌ನ ಬಾಳ್‌ನ ಸರಿಮಾಡಿಕಾಗಿ ಇಂದ್ ಮುರ್ದರೆ ಅದ್ ನಿನ್ನ ಉದ್ದೇಸ ಹಾಳಾದಾಂಗೆ ಆದುಲ್ಲೆ. ದೊಡ್ಡ ಉದ್ದೇಸ ಹುಟ್ಟು ಹಾಕಿದಾಂಗೆ ಆದೆ. ನೀ ಪ್ರತಿಜ್ಞೆನ ಒಳ್ಸಿಕಂಬದರ್‌ಂದ ದೇಸದ ಹೆಣ್ಮಕ್ಕಳ ಬಾಳ್‌ಗೆ ಕಿಚ್ಚ್ ಬಿದ್ದದೇಂತ ಗುರು ಆಗಿ ನಾ ಎಚ್ಚರ್ಕೆ ಹೇಳ್ರೂ ನಿಂಗೆ ನಿನ್ನ ಆಣೆ ಮುಕ್ಯಾಂತ ಕಂಡದೆ. ಈ ಲೋಕ ಮುಂದೆ ಹೋಕಂಡೇ ಇದ್ದದೆ. ಕಾಲಕ್ಕೆ ತಕ್ಕ ಹಾಂಗೆ ಕೋಲ ಕಟ್ಟಕಾದೆ. ಕೆಲವು ವಿಸಯಗ ಬದ್ಲಾಕಾದೆ. ಎಲ್ಲೋವರ ಒಳ್ಳದಕ್ಕಾಗಿ ಹೊಸ್ತರ ತರಂವ ನಿಜಲಿ ಎಜಮಾನ. ನೀ ಗೊಡ್ಡ್ ಕಂದಾಚಾರದ ಹೆಸ್ರ್‌ಲಿ ಗಂಡಸ್ತನ ಇಲ್ಲದಂವ ಆಗಳ. ನಿನ್ನಂತಂವಂದ ಕುರುಸಾಮ್ರಾಜ್ಯದ ರಕ್ಷಣೆ ಆದ್ಲೆ. ನೀ ಬೊದ್ಕಿದ್ ಪ್ರೋಜನ ಇಲ್ಲೆ. ನಿಂಗೆ ಬಾಳದೊಡ್ಡ ದೊಡ್ಡ ಆಯ್ದಗಳ ಗುಟ್ಟುನ ಹೇಳ್ದ್ ನನ್ನ ದೊಡ್ಡ ತೊಪ್ಪು. ಇನ್ನ್ ನೀ ಬೊದ್ಕಿಕೆ ಬೊತ್ತ್. ನನ್ನ ಸಿಸ್ಯ ಆಗಿ ನನ್ನ ಹುಟ್ಟು ನಿನ್ನದ್. ಅದರ ಕೊಂದ್ ಲೋಕಕ್ಕೆ ಒಳ್ಳದರ ಮಾಡ್ನೆ. ಬಿಲ್ಲ್ ಕೈಗೆ ತಕ. ಯುದ್ಧಕ್ಕೆ ತಯಾರಾಗ್."

ಭೀಷ್ಮ ಕೈ ಮುಗ್ದ್ ನಮಸ್ಕಾರ ಮಾಡಿ ಕೇಳ್ತ್ "ಗುರುಗಳೇ ಈ ಅಂಬೆನ ಕಾರ್ಣಕ್ಕಾಗಿ ನಾವು ಹೊಡ್ದಾಡುದೋ? ನಂಗೆಬಾಣ ಬುಡಿಕೆ ಕಲ್ಸಿದೊವು ನೀವು. ನಿಮ್ಮ ಮೇಲೆ ಹೇಂಗೆ ಬಾಣನ ಹೂಡುದು?"

ಪರಶುರಾಮರ ಸಿಟ್ಟ್ ಇಳ್ದತ್ತಿಲ್ಲೆ. ಅವು ದೊಡ್ಡ ದನಿ ತೆಗ್ದ್ ಹೇಳ್ದೊ, "ಮುಚ್ಚುಬಾಯಿ.

ಮತ್ತೆ ಗಂಡಸ್ತನ ಇಲ್ಲದಂವನಾಂಗೆ ಮಾತಾಡ್ಬಡ. ಕಳ್ದ್ ಹೋದ ಗೊಡ್ಡು ಆಣೆ ಬಾಸೆಂದ ಈಗ ನಡ್ಯವ ಬೊದ್‌ಕ್ ದೊಡ್ಡದ್. ನಾಳೆ ಚರಿತ್ರೆ ಬರ್‍ಯೋವು ಅಂಬೆನ ಬಾಳ್‌ನ ಹಾಳ್ ಮಾಡ್ದಂವ ಭೀಷ್ಮಾಂತ ನಿಂಗೆ ಮೊಸಿ ಬೊಳ್ಳಕೆ ಬೊತ್ತ್‌ಂತ ನಿಂಗೊಂದ್ ಅವ್ಕಾಸ ಮಾಡಿಕೊಟ್ಟೆ. ನಿಂಗೆ ಈಗ ಸಾ ನಿನ್ನ ಬೆಲೆ ಇಲ್ಲದ, ಕೆಲ್ಸಕೆ ಬಾರದ ಆಣೆ ಬಾಸೆ, ಏನ್ ದಾರಿ ತೋರದ ಹೆಣ್ಣ್‌ನ ಬಾಳ್‌ಂದ ದೊಡದ್‌ಂತ ಕಂಡದೆ. ನೀ ತೊಪ್ಪು ದಾರಿಲಿ ಹೋದಿಯ. ವಿಚಿತ್ರವೀರ್‍ಯನ ಮುಂದೆನ ಸಂತಾನ ನೀ ಹೇಳ್ದೇ ಸರೀಂತ ಹೇಳಿಕಂಡ್ ಹೆಣ್ಮಕ್ಕಳ ಹೇಂಗೆ ಅಪಮಾನ ಮಾಡಿವೆನೋ? ಅನ್ನೇಯ, ಅದರ್ಮಕ್ಕೆ ನೀ ಕಾರ್‍ಣ ಆಗಿ, ಸಿಂಹಾಸನಕ್ಕೆ ನಿಸ್ಪಾಂತ ಹೇಳ್ವ ಪಲಾಯನವಾದನ ಹೇಳ್ಬಡ. ರಾಜರ್ ದೇವ್ರ್‌ಗೆ ಸಮಾಂತ ಹೇಳ್ದು ಗಂಡಸ್ತನ ಅಲ್ಲ. ರಾಜಂಗೆ ಬಲ ಬಾವುದೆ ಪ್ರಜೆಗಳ್‌ಂದ. ರಾಜನ ಪ್ರಜೆಗ ಪ್ರಸ್ನೆ ಮಾಡುವ ಹಾಂಗೆ ಆಕು. ನೀ ನಿನ್ನ ಮೊನ್ಸ್ ಹೇಳ್ದಾಂಗೆ ನಡ್ಕಂಡ್ಯಾ. ನಿನ್ನ ನಡೋಳ್ಕೆ ಬಗ್ಗೆ ನಿನ್ನ ಬುದ್ದಿ ಏನ್ ಹೇಳ್ದೇಂತ ಒಮ್ಮೆ ಆದರ್ ಕೇಳಿಕಂಡಳನಾ? ನಿನ್ನ ಪ್ರಜೆಗ ಏನ್ ಹೇಳಿವೇಂತ ಕೇಳ್ಯಳನಾ? ಹಸ್ತಿನಾವತಿನ ಮೊಂತ್ರಿಗಳ ಸಲಹೆನ ಕೇಳ್ಯಳನಾ? ನಿನ್ನ ಕೈ ಕೆಳಗೆನ ರಾಜರ್‌ಗಳ, ಸಾಮಂತರ ಸಲಹೆನಾದರ್ ಕೇಳ್ಯಳನಾ? ಭೀಷ್ಮಾ, ನಾವು ಎಲ್ಲೋವುನೂ ಮ್ಯೊಂಸರ್. ತೊಪ್ಪು ಮಾಡ್ದು ಇದ್ದದೆ. ಅದರ ಒಪ್ಪಿಕಂಡ್ ಎಲ್ಲರ ದಿಟ್ಟಿಂದ ಸರಿ ಮಾಡೋಕು. ನಿನ್ನ ಆಣೆ ಬಾಸೆ ನಿನ್ನ ಒಬ್ಬನ ಮಾತ್. ಅಂಬೆನ ನೀ ಮೊದುವೆ ಆಗಿ ಪಟ್ಟಕ್ಕೆ ಒಬ್ಬ ವಾರಾಸ್ದಾರನ ಕೊಡಕಾದ್ ಎಲ್ಲರ ದಿಟ್ಟಿಂದ ಸರಿ ಆದ ಮಾತ್. ಸಮಾಜದ ಹಿತನ ತನ್ನ ಸೊಂತ ಬೊದ್ಕ್‌ಗಾಗಿ ಬಲಿ ತಕಂಬ ನಿನ್ನಂತವ ಬೊದ್ಕಿರೆ ಇನ್ನಸ್ಟ್ ಹೆಣ್ಮಕ್ಕಳ ಬೊದ್ಕ್ ಹಾಳಾದೆ. ಎದ್‌ರ್ ಹೇಳದೆ ಯುದ್ದಕ್ಕೆ ನಿಲ್ಲ್."

ಭೀಷ್ಮ ತಿರ್‍ಗ ಮಾತಾಡದೆ ರಥನ ಹತ್ತಿ ಪಟ್ಟಣದ ಒಳಗೆ ಹೋತ್. ಹಂಞ ಹೊತ್ತ್‌ಲಿ ಎದೆಗೆ ಕವಚ ಹಾಕಂಡ್ ತಲೆಗೆ ಕಬ್ಬಿಣದ ಟೊಪ್ಪಿ ಇಸಿ, ಬಿಲ್ಲ್ ಹಿಡ್ಕಂಡ್, ಬೆನ್ನ್‌ಗೆ ಬತ್ತಳಿಕೆನ ಸಿಕ್ಕಿಸಿ ಯುದ್ದ ಮಾಡಿಕೆ ತಯಾರಾಗಿ ಬಾತ್. ಅಂವನ ರಥದ ಹಿಂದೆ ಮರದ ಕುಂಟೆಗಳ ತುಂಬುಸಿಕಂಡ ನಾಕ್ ಎತ್ತ್‌ನ ಗಾಡಿಗ ಬಂದೊ. ಅಂಗಣದ ಕೊಡಿಲಿ ಕುಂಟೆಗಳ ಒಟ್ಟಿ ಇಸಿ ರಾಜಬಟರ್ ಕಿಚ್ಚಿ ಹೊತ್ತಿಸಿದೊ. ಆಗ ಆಕಾಸ ಹೊಗೆಂದ ತುಂಬಿ ಹೋತ್. ಪರಶುರಾಮರ್ ಅಚ್ಚರಿಂದ ಭೀಷ್ಮರ ನೋಡ್ದೊ. ನಂಗೂ ಭೀಷ್ಮನ ನಡೋಳ್ಕೆ ಇಚಿತ್ರ ಆಗಿ ಕಂಡತ್. ಆಗ ಭೀಷ್ಮ ಹೇಳ್ತ್. "ಗುರುಗಳೇ, ಯುದ್ದಮುಗ್ಯಲಿ. ನನ್ನ ಉದ್ದೇಸ ಎನ್‌ಂತ ಅಕೆರಿಗೆ ಹೇಳ್ನೆ."

ಆ ನಿಮ್ಸಕ್ಕೆ ನಂಗೆ ಭೀಷ್ಮನ ಬಗ್ಗೆ ಮೆಚ್ಚಿಗೆ ಆತ್. ಇಂವ ಮಾಡ್ದ್ ತೊಪ್ಪೇ ಇರ್‍ದು. ಆದರೆ ಇಂವ ಅದರ ಇಂವನ ಸೊಂತಕ್ಕೆ ಬೇಕಾಗಿ ಮಾಡ್ತಿಲ್ಲೆ. ತಾನ್ ನೊಂಬಿದ ಉದ್ದೇಸಕಾಗಿ, ಎದ್‌ರ್‌ಗಿರ್‍ವ ಗುರುಗಳನೇ ಎದ್ರ್ ಹಾಕಿಕಂಬಕೆ ತಯಾರಾಗುಟು. ಪರಶುರಾಮರ್ ದೊಡ್ಡ ಸೂರ. ಅವರೊಟ್ಟಿಗೆ ಕಾಳಗಾಂತೇಳ್ರೆ ಸಾಯಕೆ ದಾರಿ ತೋರ್‍ಸಿದಾಂಗೆ. ಅದ್ ಗೊತ್ತಿದ್ದ್ ಸಾ ಭೀಷ್ಮ ಕಾಳಗಕ್ಕೆ ತಯಾರಾಗುಟು. ಇಂವನಲ್ಲಿ ಸ್ವಾರ್ತ ಇಲ್ಲೆ. ರಾಜಮಾತೆನ ಅಪ್ಪಣೆ ಹಾಂಗೆ, ಕುರು ಸಾಮ್ರಾಜ್ಯದ ಒಳ್ತಿಗಾಗಿ ಇಂವಂಗೆ

ಸರಿಕಂಡದರ ಮಾಡಿಟ್ಟು. ಯುದ್ಧಲಿ ಏನಾದರ್ ಆಗಲಿ. ಇಂವ ಇಂವನ ಉದ್ದೇಸದ ನಿಸ್ಟೆನ ಮೆಚ್ಚದಿರಿಕೆ ಆದುಲ್ಲೆ.

ಭೀಷ್ಮ ರಥಂದಳೇ ಪರಶುರಾಮರ್‌ಗೆ ನಮ್‌ಸ್ಕಾರ ಮಾಡಿ ಹೇಳ್ತ್, "ಗುರುಗಳೇ ನಿಮ್ಮ ಅಪ್ಪಣೆನ ಹಾಂಗೆ ಕಾಳಗ ಕೊಡಿಕೆ ತಯಾರಾಗಳೆ. ಶಿಸ್ಯಂಗೆ ಜಯಸಿಕ್ಕಿಕೆ ಆಸೀರ್ವಾದ ಮಾಡಿನಿ."

ಪರಶುರಾಮರ್ ಉತ್ತರ ಹೇಳ್ದೊ. "ಗುರುವಾಕ್ಯಮಿರ್‌ದ ದೋಸಂದ ನಿಂಗೆ ಬುಡ್ಗಡೆ ಆಕನ ಮುಟ್ಟ ಗುರುನ ಆಸೀರ್ವಾದ ಸಿಕ್ಕುದ್ಲೆ. ನನ್ನ ಪಾಟನ ಎಸ್ಟರ ಮುಟ್ಟ ನೆಂಪುಲಿ ಇಸ್ಯಳಾಂತ ಪರೀಕ್ಸೆ ಮಾಡಕಾದೆ. ಕಾಳಗ ಸುರು ಆಗಲಿ, ಬಾಣಗಳ ಬುಡು."

ಹಂಙ ಹೊತ್ತ್ ಕಾಳಗ ನಡ್ತ್. ಭೀಷ್ಮ ಬುಡ್ತಿದ್ದ ಬಾಣಗಳ ಪರಶುರಾಮರ್ ತುಂಡ್ ಮಾಡ್ತಿದ್ದೊ. ಆಚಾರ್ಯರ ಒಂದ್, ಒಂದ್ ಬಾಣಕ್ಕೂ, ಭೀಷ್ಮರಲ್ಲಿ ತಿರ್‌ಗ್ ಬಾಣ ಇರ್ತಿತ್ತ್. ಇಬ್ಬರ್‌ಲಿ ಯಾರ್ ಒಬ್ಬರ ಕೈನೂ ಮೇಲೆ ಆತಿಲ್ಲೆ. ಪಿರಾಯಸಂದ ಪರಶುರಾಮರ್ ದಣ್ಕೆಂದ ಕಾಳಗ ನಿಲ್ಲಿಸಿ, ರಥಲಿ ಕುದ್ದ್ ಬುಟ್ಟೊ. ಯುದ್ಧನ ನೋಡ್ತಿದ್ದ ಹಸ್ತಿನಾವತಿನ ಅಸ್ತಾನಲಿದ್ದೋವು ಕೂಡ್ಲೆ ಆಚಾರ್ಯರಿಗೆ ಕುಡ್ಯಕೆ ತಣ್ಣನೆ ನೀರ್ ಕೊಟ್ಟೊ. ನವಿಲ್ ಗರಿನ ಬೀಸಣಿಗೆಂದ ಗಾಳಿ ಬೀಸಿದೊ. ನೀರ್ ಕುಡ್ದ್ ಆಚಾರ್ಯರ್ ಸುದಾರ್ಸಿ ಕೊಂಡೊ.

ಭೀಷ್ಮ ರಥಂದ ಇಳ್ದ್ ಆಚಾರ್ಯರ ಹಕ್ಕಲೆ ಬಂದ್ ಹೇಳ್ತ್. "ಗುರುಗಳೇ, ನಿಮ್ಮ ಸರೀರಕ್ಕೆ ಆಯಾಸ ಆಗುಟ್ಟು. ಇನ್ನ್ ಯುದ್ಧಮಾಡ್ದರ್ಲಿ ಅರ್ತ ಇಲ್ಲೆ. ನೀವ್ಗೆ ಗೊತ್ತುಟು. ಈ ಭೀಷ್ಮಹೆಣ್ಣ್‌ಗೆ ಸೋಲಂವ ಅಲ್ಲ. ಯಾವ ಗಂಡ್‌ನೂ ಇಂವನ ಸೋಲ್ಸಿಕಿಲ್ಲೆ. ಕಾಳಗ ಇಲ್ಲಿಗೆ ನಿತ್ತ್ ಬುಡಲಿ."

ಆಚಾರ್ಯರಿಗೆ ಮತ್ತೆ ಸಿಟ್ಟ್ ಏರ್ತ್. "ಯಾರ್ ಸೋಲ್ದು, ಯಾರ್ ಗೆಲ್ಲುದೂಂತ ತಿಳ್ಯದೆ ಕಾಳಗ ನಿಲ್ಸುವ ಮಾತೇ ಇಲ್ಲೆ. ಯಾವ ಗಂಡ್‌ಂದಳೂ ನಿನ್ನನ ಗೆಲ್ಲಿಕೆ ಆದ್ಲೇಂತ ಬಡಾಯಿ ಕೊಚ್ಚ್‌ಬಡ. ನಾ ನಿನ್ನ ವಿದ್ಯೆ ಕಲ್ಸಿದ ಗುರು ನೆಂಪಿಸಿಕ."

ಭೀಷ್ಮ ನೆಗಾಡ್ತ್. "ಆದರೆ ಗುರುಗಳೇ, ಈಸಲ ನೀವು ಗೆದ್ದರೂ ಸೋತಾಂಗನೇ. ಈ ಅಂಬೆನ ಸುರುಗೆ ಗೆದ್ದಂವ ಸಾಲ್ವ. ಅಂವನ ಸೋಲಿಸಿನಾ ಇದರ ಹಸ್ತಿನಾವತಿಗೆ ಕರ್ಕಂಡ್ ಬಂದೆ. ಗೆದ್ದಂವನೇ ಅದರ ಮೊದುವೆ ಆಕೂಂತ, ಅದ್ ದರ್ಮಾಂತ ನೀವು ಹೇಳಿರೆ. ಯುದ್ಧ ಮುಂದರ್ಸಿ ನೀವು ಗೆದ್ದರೆ ಪಂತದ ಪ್ರಕಾರ ನೀವೇ ಅಂಬೆನ ಮೊದುವೆ ಆಕು. ನೀವು ಸೋತರೂ ಸೋಲೇ. ಗೆದ್ದರೂ ಸೋಲೇ."

ಪರಶುರಾಮರ್ ಬುದ್ದಿ ಕೆಟ್ಟವರಾಂಗೆ ಆದೊ. "ಭೀಷ್ಮಾ ಅತಿ ಬುದ್ದಿವೊಂತಿಕೆನ ಮಾತ್ ಬೇಡ. ನಾ ಸೊಂಯಂವರ ಮಂಟಮೆಗೆ ಹೋದಂವ ಅಲ್ಲ. ಆದರ್‌ಂದ ಈ ಸರ್ತನಂಗೆ ಹೇಳಿಕೆ ಆದುಲ್ಲೆ. ಇದ್ ಸೊಂಯಂವರ ಮಂಟಮೆಂದ ಹೊರಗೆ ನಡ್ಯವ ಯುದ್ಧ. ಸುಮ್ಮಂಗೆ ಪರಿಹಾಸ ಮಾಡ್ಬಡ."

ಭೀಷ್ಮಹೇಳ್ತ್. "ಗುರುಗಳೇ, ಸೊಂಯಂವರ ಮಂಟಮೆಗೆ ನಾ ಹೋದ್ ನಿಜ.

ಆದರೆ ಅದ್ ಮೊದುವೆ ಆಕೆ ಬೇಕಾಗಿ ಅಲ್ಲ. ನಾ ಕುರುಸಾಮ್ರಾಜ್ಯದ ಅಪಮಾನನ ಸರಿಪಡ್ಸಿಕಾಗಿ ಹೋದಂವ. ಆದರ್‌ಂದ ನಂಗೂ ಕಾಶೀರಾಜನ ಸರ್ತ ತಾಂಗುದುಲ್ಲೆ."

ಆಚಾರ್ಯರ್ ಸುಮ್ಮಂಗಾದೊ. ಅವ್ಕೆ ಭೀಷ್ಮನ ಮಾತ್‌ಲಿ ಸತ್ಯದ ಅಂಸ ಉಟ್ಟೊಂತ ಆತ್. ಭೀಷ್ಮ ಅವರ ಕೈಗಳ ಹಿಡ್ಕಂಡ್ ಬೇಡಿಕಂಡತ್. "ಗುರುಗಳೇ, ಈ ಕಾಲಲಿನನ್ನ ಸೋಲ್ಸವಾಂತ ಒಬ್ಬ ಇದ್ದರೆ ಅದ್ ನೀವು ಮಾತ್ರ. ನನ್ನ ಸೋಲ್ಸಂವ ಇಡೀಬೂಮಿಲಿಬೇರೆ ಯಾರ್‌ಸಾ ಇಲ್ಲೆ. ಇಂದ್‌ನ ಕಾಳಗಲಿನಾ ಎಲ್ಲಿ ಆದರ್ ಸೋಲ್ತಿದ್ದರೆ ನೀವು ಹೇಳ್ದಾಂಗೆ ಕೇಳಕಾಗಿತ್ತ್. ಮಾಡ್ದ ಪ್ರತಿಜ್ಞೆನ ಮುರ್ಯೋದೂಂತೇಳ್ರೆ ನಂಗೆ ಅದ್ ಸಾವುಗೆ ಸಮ. ಅದಕ್ಕಾಗಿನೇ ಅಂಗಣದ ಆ ಮೂಲೆಲಿ ಕಾಟನ ಮಾಡ್ಯಳೆ. ನಿಮ್ಮಂದ ನಾ ಸೋತಿದ್ದರೆ, ಆ ಕಾಟಕ್ಕೆ ಹಾರ್ತಿದ್ದನೇ ಹೊರ್ತ್, ಅರಮನೆಗೆ ಹೋಕಿತ್ಲೆ. ಅದೆಲ್ಲಾ ಈಗ ಮುಗ್ದ ಮಾತ್. ಅಂಬೆಗೆ ಇಸ್ಟ ಇದ್ದರೆ ಈಗ ಸಾತ್ ವಿಚಿತ್ರ ವೀರ್ಯನ ಮೊದ್ವೆ ಆಗಿ ರಾಣಿನಾಂಗೆ ಇರಕ್."

ಪರಶುರಾಮರ್ ಸೋತ ಮೋರೆಂದ ನನ್ನ ನೋಡ್ದೊ. ನಂಗೆ ಎಲ್ಲಾ ಅವ್ಕಾಸಗ ಮುಚ್ಚಿಹೋತ್ ಎಂತ ಎನ್ಸಿತ್. ಕಾಶಿಗೆ ಹೋಕೆ ಆದ್ಲೆ. ಪರಶುರಾಮರೊಟ್ಟಿಗೆ ಆಸ್ರಮಕ್ಕೆ ಹಿಂದೆ ಹೋಕೆ ಆದ್ಲೆ. ಆಗಳೇ ನಾ ಒಂದು ತೀರ್ಮಾನಕ್ಕೆ ಬಂದೆ. ನಾ ರಥಂದ ಇಳ್ದ್ ಭೀಷ್ಮರ ಎದ್ರ್ ನಿತ್ತ್ ಗಟ್ಟಿಸೊರಲಿ, ಹೇಳ್ದೆ, "ಭೀಷ್ಮಾ ನೀ ಮಾತ್‌ಲಿ ಯಾರನೂ ಸಾತ್ ಕಟ್ಟಿಹಾಕಿಬುಡುವ. ನಿಂಗೆ ರಾಜಮಾತೆ ಸತ್ಯವತೀದೇವಿನ ಮಾತ್ ಹಿಡ್ಸಿತ್ಲೆ. ಗುರುಗಳ ಬೋದನೆ ಪತ್ಯ ಆತ್ಲೆ. ನಿಂಗೆ ಗೊತ್ತಿರ್ದು ಎರ್ಡೇ ಬಾಸೆ. ಸಪತದ ಬಾಸೆ ಮತ್ತೆ ದೊಡ್ಡಸ್ತನ. ಮೊನ್ಸ್‌ನ ಬಾಸೆ ಅರ್ತ ಆಗದಮುರ್ಗ ನೀ. ಇಲ್ಲರೆ ನಿನ್ನ ಗಂಡಸ್ತನ ಇಲ್ಲದ ತಮ್ಮಂಗೆ, ಸಪತದ ಬಾಸೆ ಮಾಡ್ಯಳೇಂತ ನೆಪ ಹೇಳಿ, ನನ್ನನ ಬಲಿ ಕೊಡಿಗೆ ತಯಾರಾಗ್ತಿತ್ಲೆ. ಗಂಡ್‌ಗಳ್‌ಂದ ಸೋಲ್ಸಿಕೆ ಆಗದಂವ, ಹೆಣ್ಣ್‌ಗೆ ಸೋಲದಂವ ಎಂತ ಹೇಳುವ ಹಂಕಾರ ನಿಂಗೆ. ನಿನ್ನಂದ ನನ್ನ ಬಾಳ್ ನರ್ಕ ಆತ್. ಒಬ್ಬ ಗಂಡ್ ಆಗಿ ನಂಗೆ ಬಾಳ್ ಕೊಡಿಕೆ ನಿನ್ನಂದಾತ್ಲೆ. ಒಬ್ಬ ಹೆಣ್ಣ್‌ನ ಸ್ತಾನಲಿ ನಿತ್ತ್‌ದ್ ನನ್ನ ಮೊನ್ಸ್‌ನ ನೀ ಅರ್ತ ಮಾಡಿಕಂಡತ್ಲೆ. ನಿನ್ನ ನಡ್ತೆಂದ ನೀ ಗಂಡ್‌ನೂ ಅಲ್ಲ, ಹೆಣ್ಣ್‌ನೂ ಅಲ್ಲ ಎಂಬ ತೀರ್ಮಾನಕ್ಕೆ ನಾ ಬಂದಳೆ. ಮುಂದೆನ ಜಲ್ಮ ಒಂದ್ ಉಟ್ಟೊಂತೇಳ್ರೆ ನಾ ಗಂಡ್‌ನೂ ಅಲ್ಲದ, ಹೆಣ್ಣ್‌ನೂ ಅಲ್ಲದ ಜೂವ ಆಗಿ ಹುಟ್ಟಿ ನಿನ್ನ ಕೊಂದನೆ."

ಮಾತ್ ನಿಲ್ಸಿ ಆವೇಸಕ್ಕೆ ಸಿಕ್ಕಿ ನಾ ಓಡ್ದೆ. ಎಲ್ಲೋವೂ ನಿತ್ತ್ ಬೆರ್ಗಾಗಿ ನೋಡಿಕಂಡಿರಿಕಾಕನ ಅಂಗಣದ ಮೂಲೆಲಿ ದಗದಗ ಉರ್ಯತಿದ್ದ ಕಾಟಕ್ಕೆ ಹಾರ್‌ದೆ.

*****

## ಹೋಳು – 18

# ಕೊಳಲ್‌ನ ಗಾಯನಲಿ ಮುಣ್‌ಂಗಿ ಹೋತ್

ಭೀಷ್ಮ : ಇದ್ ಅದೇ ಇರ್‍ದೋ? ಅಂದ್ ನನ್ನ ಎದ್ರ್ ನಿತ್ತ್‌ದ್ ಸುರುನ ಸಲ ನನ್ನನ ಹೋಗು, ಬಾಂತೇಳಿ ಕರ್ದ್ ಆಣೆ ಬಾಸೆನ ಮಾತ್‌ನ ಹೇಳಿ ದಗದಗ ಉರ್‍ಯತಿದ್ದ ಕಾಟಕ್ಕೆ ಹಾರ್‍ತಲೇ? ಆ ಅಂಬೆನೇ ಹೀಂಗೆ ಸಿಕಂಡಿ ಆಗಿ ಹುಟ್ಟಿ ಬಂದುಟೊ ಹೇಂಗೆ?

"ಜಾತಸ್ಯಹಿ ಧ್ರುವೋ ಮೃತ್ಯು । ಧ್ರುವಂ ಜನ್ಮ ಮೃತ್‌ಸ್ಯಚ"

ಹುಟ್ಟಿದಂವಂಗೆ ಸಾವು ಇರ್‍ದು ನಿಜ. ಸತ್ತಂವ ಮತ್ತೆ ಹುಟ್ಟಿ ಬಂದವನೋ? ಯಾರ್‌ಗೆ ಗೊತ್ತ್? ಅಂಬೆ ಸಿಖಂಡಿ ಆಗಿ ಹುಟ್ಟಿದ್ದರೆ, ಅವ್ವ ಗಂಗಾದೇವಿ, ಅಪ್ಪ ಶಂತನು ಚಕ್ರವರ್ತಿ, ರಾಜಮಾತೆ ಸತ್ಯವತೀ ದೇವಿ–ಇವೆಲ್ಲರ್‌ನೂ ಹುಟ್ಟಿನೇ ಇರಕಲೆ? ಎಲ್ಲಿ ಹುಟ್ಟಿರ್‍ವೊ? ಏನಾಗಿರ್‌ವೋ? ಮರು ಹುಟ್ಟು ಉಟ್ಟೊಂತಾದರೆ ನಾವು ಬೇಕಾದಲ್ಲಿ, ಬೇಕಾದ ರೂಪಲಿ ಹುಟ್ಟಿಕೆ ಸಾದ್ಯ ಉಟ್ಟೋ? ಒಂದ್‌ನೂ ಅರ್ತ ಆದುಲ್ಲೆ.

ಹುಟ್ಟುಗೆ ಕಾರಣ ಗಂಡ್ ಹೆಣ್ಣ್ ಒಟ್ಟಿಗೆ ಸೇರ್‍ದು. ಸಾವುಗೋ ಸಾವಿರ ಕಾರ್‍ಣಗ. ಹುಟ್ಟಿದಂದ್‌ಂದಳೇ ಸಾವುಗೆ ಕಾರ್‍ಣಗ ಒಟ್ಟ್ ಸೇರಿಕಂಡ್‌ಹೋದೆ. ನನ್ನ ಹೆತ್ತವ್ವ ಗಂಗಾದೇವಿ, ನನ್ನನ ಬುಟ್ಟ್‌ದ್ ಹೋದ ಮೇಲೆ ಸುರಾತ್ ನನ್ನ ಸಾವುನ ಸುರುನ ಮಾತ್. ಶಂತನು ಚಕ್ರವರ್ತಿಗಾಗಿ ನಾ ಮಾಡ್ದ ಆಣೆ, ಕಾಶೀರಾಜ ಪ್ರತಾಪಸೇನನ ವಿಚಿತ್ರ ಸೊಂಯಂವರ ಪಂತ, ಅಂಬೆನ ಕೆಟ್ಟ ದಿನಗ, ಕೌರವ–ಪಾಂಡೋವರ ಕಚ್ಚಾಟ, ಕುರುಸಾಮ್ರಾಜ್ಯದ ಗಟ್ಟಿ ಅಡಿಗಲ್ಲ್‌ನ ಒಂದೊಂದೇ ಕಲ್ಲ್‌ಗ ಅಲ್ಲಾಡಿಕೆ ಸುರಾತ್. ಒಂದೊಂದೇ ಬೀಳಿಕೆ ಸುರಾತ್. ಒಳಗೆಂದಳೇ ಸಾಮ್ರಾಜ್ಯ ಬಿರ್‍ಕ್ ಬುಟ್ಟ್‌ಕಂಡ್ ಬಾತ್ ಒರ್‍ಲೆ ತಿಂದ ಮರದಾಂಗೆ.

ಸಾವೂಂತೇಳ್ರೆ ಏನ್? ಸರೀರಂದ ಆತ್ಮನ ಬುಡ್ಗೆಡನೋ? ಹೊತ್ತಿಕಂಡ್ ಇದ್ದ ಕಾಟಕ್ಕೆ ಅಂಬೆ ಹಾರಿಕಾಕನ ಸರೀರ ಬೆಂದ್ ಹೋತಲೇ? ಆಗ ಅದರ ಆತ್ಮಕ್ಕೆ ಏನಾತ್? "ನೈನಂ ಛಿಂದಂತಿ ಶಸ್ತ್ರಾಣಿ" ಆತ್ಮನ ಸಸ್ತ್ರಗ, ಬಾಣಗ ತುಂಡು ಮಾಡಿಕೆ ಆಕಿಲ್ಲೆ. "ನೈನಂ ದಹತಿ ಪಾವಕ:" ಕಿಚ್ಚಿ ಸುಡಿಕಿಲ್ಲೆ. "ನ ಚೈನಂ ಕ್ಲೇದಯಂತ್ಯಾಪೋ"ನೀರ್ ಚೆಂಡಿಮಾಡಿಕಿಲ್ಲೆ. "ನ ಶೋಷಯತಿ ಮಾರುತಃ" ಗಾಳಿ ಹಾರ್‍ಸಿಕಿಲ್ಲೆ. ಹಂಗಾರೆ ಅಂಬೆನ ಆತ್ಮ ಈ ಸಿಕಂಡಿ ಆಗಿ ಹುಟ್ಟಿತೋ? ಸಿಕಂಡಿನ ಸರೀರಲಿ ಇರ್‍ದು ಅಂಬೆನ ಆತ್ಮಂತಾದರೆ, ಇಸ್ಟ್ ದಿನಗಳ ಕಾಳಗಲಿ ಸತ್ತೋ ಅಲ್ಲಾ, ಅವರ ಆತ್ಮಗ ಎಲ್ಲಿ ಹೋದೋ? ಅಭಿಮನ್ಯು, ಘಟೋತ್ಕಚ, ದ್ರೋಣ, ದುಶ್ಯಾಸನ, ಕರ್ಣರ ಆತ್ಮಗ ಯಾವ ಬೊಸ್ರಿ ಹೆಂಗ್‌ಸ್‌ನ ಸರೀರನ ಸೇರಿಕೊಂಡಿರ್‍ದು? ಚೇ. ಎಲ್ಲನೂ ಉತ್ತರ ಸಿಕ್ಕದ ಪ್ರಸ್ನೆಗ. ಆತ್ಮ ಪರಮಾತ್ಮ, ಮರು ಹುಟ್ಟು ಎಂತ ಹೇಳ್ದು ಬರೇ ನಂಬಿಕೆನೇ ಆಗಿರ್‍ದು. ಆದರೆ ಅಂಬೆ ಹೇಳ್ದ

ಅಕೇರಿನ ಮಾತ್‌ಗ ನಿಜ ಆಕಂಡ್ ಬಂದದೆ. ನಾ ಗಂಡ್‌ನೂ ಅಲ್ಲದ, ಹೆಣ್ಣುನೂ ಅಲ್ಲದ ಸಿಕಂಡಿಂದ ಸತ್ತನೆ.

ಸಾಕ್. ಈ ಉತ್ತರ ಸಿಕ್ಕದ ವೇದಾಂತ. ಕಾಳಗದ ಅಂತ್ಯ ಹೇಂಗಾದೆನೋ? ಶಲ್ಯ ಮತ್ತೆ ದುರ್ಯೋಧನ ಹೊರ್ಟ್ ಹೋದ ಮೇಲೆ ಎಲ್ಲಾ ಕಡೆ ಗಾಳಿ ಹಂದಾಡದಾಂಗೆ ಕಂಡದೆ. ಕರ್ಣಂದ ಆಗದರ ಶಲ್ಯ ಭೂಪತಿಗೆ ಯಾಗೋಳೂ ಮಾಡಿಕೆ ಆಕಿಲ್ಲೆ. ಎಲ್ಲಾದರ್ ಸಮಯಕ್ಕೆ ಸರಿ ಆಗಿ ಬಲರಾಮ ಬಂದ್‌ದ್ ಕಾಳಗ ದರ್ಮಪ್ರಕಾರನೇ ನಡ್ದರೂ ದುರ್ಯೋಧನ ಗೆಲ್ಲಿಕಿಲ್ಲೆ. ಭೀಮಸೇನನ ಒಂದೇ ಒಂದು ಸಲನೂ ದುರ್ಯೋಧನಂಗೆ ಗೆಲ್ಲಿಕೆ ಆತಿಲ್ಲೆ. ಈಗ ದುಶ್ಯಾಸನ, ಕರ್ಣನ ಸಾವುಂದ ಮೊನ್ಸ್‌ನ ದೈರ್ಯನ ಕಳ್ಕಂಡ ದುರ್ಯೋಧನಂದ ಈ ಭೀಮನ ಗೆಲ್ಲಿಕೆ ಆದೋ?

ಆ ಶಲ್ಯ ಅಂವ ಆಗಿನೇ ಕೆಟ್ಟದರ ಬರಮಾಡಿಕೊಂಡಂವ. ಅಂವ ಪಾಂಡೋವರ ಪಕ್ಷಲಿ ಇರಬೇಕಾದಂವ. ದುರ್ಯೋಧನನ ಮಾತ್‌ಗೆ ಬೋಳನಾಂಗೆ ತಲೆ ಹಂದಾಡ್ಸಿ, ತನ್ನ ಬಂದುಗಳ ಬುಟ್ಟ್, ಎಲ್ಲೋವೂ ನೆಗಾಡುವಾಂಗೆ ಆತ್. ಆದರೆ ಅಂವನ ಮೆಚ್ಚದೆ ಇರಿಕೆ ಆದೇ ಇಲ್ಲೆ. ಒಮ್ಮೆ ದುರ್ಯೋಧನನ ಕಡೆ ನಿತ್ ಮೇಲೆ, ಅಂವ ಅಂವನ ನಿಸ್ಟೆನ ಬದ್ಲಾಯ್ಸಿತಿಲ್ಲೆ. ಸರ್ಪಮೋರೆ ಇದ್ದ ಬಾಣಂದ ಅರ್ಜುನ ಸತ್ತ್. ದುರ್ಯೋಧನಂಗೆ ಗೆಲುವು ಸಿಕ್ಕೊಕೂಂತ ಬಯಸಿದಂವ ಅಂವ. ದೊಡ್ಡ ವೀರ ಅಲ್ಲರುನೂ ಒಳ್ಳೆ ಸಾರತಿ. ನಾಳೆ ನಾ ಸತ್ತನೇಂತ ಗೊತ್ತಿದ್‌ನೂ ಕಾಳಗಕ್ಕೆ ಹೊರ್ಟಂವ. ಇಂದ್‌ನ ಇರ್ಳ್ ಅಂವ ಮದ್ರದೇಸಕ್ಕೆ ಹೊರ್ಟ್ ಹೋಕಾಗಿತ್. ಇಲ್ಲರೆ ಪಾಂಡೋವರ ಕಡೆ ಸೇರಿ ಬೊದ್ಕಿಕಣಕಾಗಿತ್. ಅಂವನ ಸೇನೆ ಪೂರಾ ಅಳ್ದ್ ಹೋಗುಟ್ಟು. ಅಂವ ಸಾಯುವ ಹಂತಲಿ ಇದ್ದರುನೂ ಯುದ್ದಕ್ಕೆ ಸಿದ್ದ ಆಗುಟ್ಟು. ಅಂವನ ಮಟ್ಟಿಗೆ ಅಂವಂದ್ ಒಂದ್ ಮಾದರಿ ಗುಣ ಹೌದು. ಆದರೆ ಒಳ್ಳೆ ಗುಣಂಗ ಮಾತ್ರನೇ ಕಾಳಗಲಿ ಗೆಲ್ಲಿಕೆ ಸಾಕಾದ್ಲೆ.

ಹಾಂಗಾರೆ ಕರ್ಣನ ಸಾವುಲಿ ಕಾಳಗ ಮುಗ್ದ ಹಾಂಗೆನೆ. ಅಲ್ಲಿಗೆ ಧೃತರಾಷ್ಟ್ರಂದ ಮೇಲೆ ಪಟ್ಟಲಿ ಕುದ್ರುದು ಯುಧಿಷ್ಠಿರಾಂತ ನಿಚ್ಚಯ ಆದಾಂಗೆ ಆತ್. ಹಸ್ತಿನಾವತಿನ ಸಿಂಮಾಸನಕ್ಕೆ ಮ್ಯೊಂಸನ ನೆತ್ತರ್ ಮೆತ್ತಿಟು. ಅದರ್ಲಿ ಕುದ್ದಂವ ನೆಮ್ಮದಿಲಿ ಇರಿಕೆ ಆಕಿಲ್ಲೆ. ಅಂವನ ಅಸಾಂತಿ, ಕೆಟ್ಟ ಕನ್ಸ್‌ನ ಕಾಡುದು.

ಯುದ್ದ ಸುರಾಗಿ ಹದ್ನೇಳ್ ದಿನಂಗ ಕಳ್ದೊ. ಹತ್ತ್‌ನೇ ದಿನ ಸಿಕಂಡಿ ಬಿಲ್ಲ್‌ಂದ ಹೊರ್ಟ ಈ ಬಾಣ ಎದೆಗೇ ಹೆಟ್ಟಿತ್. ಈಗ ಹಂಞ ಅಲ್ಗಿಕೆ ಸುರು ಮಾಡಿಟು. ಇದ್ ಬೀಳಿಕನ ನನ್ನ ಜೂವ ರೆಟ್ಟಿದೆ. ಜೂವನೋ?, ಆತ್ಮನೋ? ಹಾಳಾಗಿ ಹೋಗ್‌ಲಿ. ಒಂದು ನಿಮ್ಸ್‌ದ ಮೊತಿ ಅದ್. ಎದ್ರ್‌ಗೆ ಬಂದ್ ನಿತ್ತ ಇಚಿತ್ರ ರೂಪನ ಕಂಡಾಕನ ಆದ ಮೈಮರೆವು ಯುದ್ದದ ಹಣೇಬರನೇ ಬದ್ಲಾಯ್ಸಿಬುಟ್ಟುಟು. ಸಂತನು ಚಕ್ರವರ್ತಿಗ ಸತ್ಯವತೀದೇವಿನ ಕಂಡಾಕನ ಅದ ಮೈ ಮರೆವು ಕುರು ಸಾಮ್ರಾಜ್ಯದ ಬವಿಸ್ಯನನೇ ಬದ್ಲಾಯ್ಸಿದಾಂಗೆ.

ನಾನೇ ಈ ಹದಿನೇಳ್ ದಿನಂಗಳ ಸೇನೆನ ಎಜಮಾನ ಆಗಿ ಹೋರಾಟ ಮಾಡ್ತಿದ್ದರೆ,

ದುರ್ಯೋಧನ ಗೆಲ್ಲ್‌ತಿತ್ತೋ? ಹತ್ತ್ ದಿನ ದುರ್ಯೋಧನನ ಕಡೆನ ದೊಡ್ಡ ದೊಡ್ಡ ಸೂರರ ಪ್ರಾಣನ ಒಳ್ಸಿಕೆ ನನ್ನಂದ ಆತ್. ಆದರೆ ಪಾಂಡೋವರ ಕಡೆಲಿ ಇದ್ದ ಯಾವ ದೊಡ್ಡ ಸೂರರ ನಾ ಕೊಂದೇ? ನಾನೆ ಈಗ ಸಾ ಸೇನೆನ ಎಜಮಾನ ಆಗಿದ್ ಇರ್ತಿದ್ದರೆ ಅಭಿಮನ್ಯು, ಲಕ್ಷ್ಮಣಕುಮಾರ, ಜಯದ್ರಥ, ಘಟೋತ್ಕಚ, ದ್ರೋಣ, ಕರ್ಣರ್ ಒಳ್ಕಂಬ ತಿದ್ದೊನೋ ಏನೋ? ದ್ರೋಣನ ಒಳ್ಸುದು ಕಸ್ಟ ಇತ್ತ್. ದ್ರೋಣನ ಕೊಲ್ಲಿಕೇಂತೇಳಿನೇ ದ್ರುಪದಂದ ತಯಾರಾದ ದೃಷ್ಟದ್ಯುಮ್ನ ದ್ರೋಣನ ಕೊಲ್ಲದೆ ಬುಡ್ತಿತ್ತೆ. ಅಂವ ದ್ರೋಣನ ಮಾಪು ಮಾಡ್ತಿದ್ದರೂ, ಭೀಮ ದುಶ್ಯಾನನ ಒಳ್ಸಿಕಿತ್ತೆ. ನಾಳೆ ದುರ್ಯೋಧನಂಗೆ ಎಂತಾ ಸಾವು ಕಾದುಟ್ಟೋ? ಅಂವನ ಭೀಮಂದ ಕಾಪಾಡೋವು ಯಾರ್? ಸಪತ ಬಾಸೆ ನಿಸ್ಟೆ ತೋರ್‍ಸಂವ ನ್ಯಾಯ-ಅನ್ನೇಯ, ದರ್ಮ-ಅದರ್ಮನ ಏಚನೆ ಮಾಡುದೋ?

ಇಂದ್‌ನ ಈ ಸ್ತಿತಿಗೆ ನನ್ನ ಸಪತ-ಬಾಸೆನೇ ಕಾರ್‍ಣ ಆತೋ? ನನ್ನ ಈ ಆಣೆ-ಬಾಸೆಗೆ ಕಾರ್‍ಣರ್ ಯಾರ್? ನನ್ನ ಅವ್ವ. ಅದ್ ಗಂಗಾನದಿನ ದಂಡೆಲಿ ಅಪ್ಪಂಗೆ ಕಾಂಬಕೆ ಸಿಕ್ಕಿದೋಳು. ಅದರ ನಿಜದ ಹೆಸ್ರ್ ಎಂತದೋ? ಗಂಗಾದೇವಿ ಎಂತ ಅಪ್ಪ ಕರ್‍ಯತಿದ್ದೊ. ಯಾವ ದೇಸದೋ? ಯಾವ ವಂಸದೋ? ಅಪ್ಪ ಪ್ರೀತಿಮಾಡಿ ಮೊದುವೆ ಆತ್. ನನ್ನನ ಹೆತ್ತ್ ಹಂಞ ವೊರ್ಸ ಸಾಂಕಿತ್. ಒಂದ್ ದಿನ ಇದ್ದ ಹಾಂಗೇ ಜೂವನಲಿ ಬೇಜಾರ ಆಗಿ, ನನ್ನನ ಅಪ್ಪನ ಬುಟ್ಟ್ ಸನೇಸಿನಿ ಆಗಿ ಹಿಮಾಲಯ ಪರ್ವತದ ಕಡೆ ನಡ್ದ್ ಬುಟ್ಟ್‌ತ್. ನನ್ನ ಮೊರ್ಡಟ, ಅಪ್ಪನ ಬೇಡಟಕ್ಕೆ ಅದರ ಗೆಲ್ಲುವ ಸಕ್ತಿ ಇತ್ತೆ. ಬವುಸ ಅದ್ಕೆ ಸಂಸಾರ ಹೊರೆ ಹೊರ್ದು ಇಸ್ಟ ಇತ್ತೆ. ಅಪ್ಪನ ಒತ್ತಾಯಕ್ಕೆ ಕಟ್ಟ್ ಬಿದ್ದ್‌ದಕ್ಕೆ ಅಕೆರಿಗೆ ಬುದ್ದಿ ಬಾತ್. ಸನ್ನೇಸಿ ಆಗಿ ಏನ್ ಸಾದನೆ ಮಾಡ್ತೋ? ಅದ್ಕೆ ಹಸ್ತಿನಾವತಿನ ರಾಣಿ ಪಟ್ಟ ಸುಕ ಕೊಟ್ಟಿತ್ತೆ. ಆದರೆ ಸಾ ಅದರ್ದ್ ತೊಪ್ಪೇ. ಅದ್ ಪಟ್ಟದ ರಾಣಿ ಆಗಿ ಒಳ್ಯತಿದ್ದರೆ ಅಪ್ಪ ಮುಕ್ಕೇತಿಗೂಡೆ ಸತ್ಯವತಿಗೆ ಮೊಸ್ನ್‌ನ ಕೊಡ್ವ ಸಂದರ್ಬ ಬಾಕಿತ್ತೆ.

ಸತ್ಯವತಿ ಅಪ್ಪಂಗೆ ಸಿಕ್ಕೊಕೊರೆ ನಾ ಸಪತ ಮಾಡಿನೇ ಮಾಡಕಾತ್. ಅವ್ವ ಸನ್ನೇಸಿನಿ ಆಗಿ ಹಸ್ತಿನಾವತಿನ ಬುಟ್ಟ್‌ಹೋದ ಮೇಲೆ, ಅಪ್ಪ ನನ್ನನ ಎಸ್ಟ್ ಪೊರ್ಲುಲಿ ಸಾಂಕಿತ್. ಅವ್ವ ಇಲ್ಲದ ದುಕ್ಕನ ಮರೇವಾಂಗೆ ಮಾಡ್ತ್. ಅಂವ ನಂಗೆ ಅವ್ವನೂ ಆತ್. ಅಂವಂಗೆ ರೂಪ, ಜವ್ವಂತಿಕೆ ಸಕ್ತಿ ಇತ್ತ್. ಯಾರ್‍ನ ಬೇಕರೂ ಅಂತಪುರಕ್ಕೆ ಸೇರ್‍ಸಿಕಂಬ ಅದಿಕಾರ ಇತ್ತ್. ಅಂವ ಅದಿಕಾರನ ದುರುಪಯೋಗ ಮಾಡ್ತಿಲ್ಲೆ.

ಆದರೆ ಒಂದ್ ಹೆಣ್ಣ್ ಸತ್ಯವತಿದೇವಿಗೆ ಮೊಸ್ನ್ ಕೊಟ್ಟಿತ್. ಅದ್ ಪರಾಶರಮುನಿಂದ ಒಬ್ಬ ಮಂಜನ ಪಡ್ದೋವ್ಳೂಂತ ಗೊತ್ತಿದ್ದರುನೂ, ಅದರ ಒಪ್ಪಿತ್. ಅಸ್ಟರ ಮುಟ್ಟ ಮೊಸ್ನ್‌ಗೆ ಹಾಕಿದ ಕಟ್ಟ್ ಬಿಚ್ಚಿಹೋತ್. ಮೊಸ್ನ್‌ನ ಸುಕಕ್ಕೂ, ದುಕ್ಕಕ್ಕೂ ಮ್ಯಾಂಸನ ಮೊಸ್ನ್‌ನೇ ಕಾರ್‍ಣಂತ ಪರಶುರಾಮರ್ ಹೇಳ್ತಿದ್ದೊ. ಸತ್ಯವತಿಗಾಗಿ ಮೊಸ್ನ್‌ಲಿ ಕೊರ್‍ಗಿಕಂಡ್ ಕಾಯ್ಲೆ ಬೀಳ್ದರ ನಂಗೆ ಸೈಸಿಕಾತ್ತೆ. ನನ್ನನ ಅವ್ವನಾಂಗೆ ನೋಡಿಕಂಡ ಅಪ್ಪಂಗಾಗಿ ನಾ ಬಾಸೆ ಕೊಟ್ಟ್ ಸಪತ ಮಾಡ್ದೆ, ಜೂವಮಾನ ಇಡೀ ಮೊದ್ವೆ ಆಗದೆ ಬ್ರಹ್ಮಾಚಾರಿ ಆಗಿನೇ ಇದ್ದನೇಂತ.

ಸತ್ಯವತಿ ಒಳ್ಳೆ ಹೆಣ್ಣ್. ಚಕ್ರವರ್ತಿಗಳ್‌ಂದಾಗಿ ತನ್ನ ಹೊಟ್ಟೆಲಿ ಹುಟ್ಟಿದಂವನೇ ಹಸ್ತಿನಾವತಿನ ಪಟ್ಟನ ಏರೊಕೂಂತ ಹೇಳ್ವ ಹಟ ಅದರ ಹಕ್ಕಲೆ ಇತ್ಲೆ. ಅದ್, "ನನ್ನ ಅಪ್ಪ ದಾಸರಾಜಂದಾಗಿ ನಿಂಗೆ ಜೂವನದ ಅನ್ಬವಗ ಸಿಕ್ಕದೆ ಹೋತಲೇ ಮಂಜ"– ಎಂತ ಎಸ್ಟೋ ಸರ್ತಿ ಗೋಳಾಡಿಟು. ಶಂತನು ಚಕ್ರವರ್ತಿಂದ ಚಿತ್ರವೀರ್ಯ, ವಿಚಿತ್ರವೀರ್ಯನ ಪಡ್ಡತ್. ಕುರುಸಾಮ್ರಾಜ್ಯದ ಅದ್ರುಸ್ಟ ಹಾಳಾಗಿತ್ತ್. ಚಿತ್ರಾಂಗದ ತನ್ನ್‌ಂದ ಸಕ್ತಿ ಹೆಚ್ಚ್ ಇದ್ದ ಗಂದರ್ವರೊಟ್ಟಿಗೆ ಕಾಲ್ ಕೆರ್ದ್ ಕಾಳಗ ಕೊಟ್ಟ್ ಸತ್ತ್‌ಹೋತ್. ಕಾಯ್ಲೆನ ಗೂಡಾಗಿದ್ದ ವಿಚಿತ್ರ ವೀರ್ಯ ಬೊದ್ಕಿದ್ದರುನೂ ಪ್ರೋಜನ ಇಲ್ಲದಂವ ಆತ್. ದೋಸ ಯಾವ್‌ದಾರ್ದ್? ಅಪ್ಪಂದೋ, ಅಯ್ಯೆದೋ? ಅಪ್ಪಂದಾಗ್ತಿದ್ದರೆ ನನ್ನಂತಾ ಮಂಜ ಅಪ್ಪಂಗೆ ಹುಟ್ಟಿಕಿತ್ಲೆ. ಅಯ್ಯೆದ್ ಆಗ್ತಿದ್ದರೆ ದ್ವೈಪಾಯನನಂತಾ ದೊಡ್ಡ ಮೇದಾವಿ ಮಂಜ ಸತ್ಯವತಿಗೆ ಮೊದುವೆಗೆ ಮುಂದೆ ಹುಟ್ಟಿಕಿತ್ಲೆ.

ಹಾಂಗಾರೆ, ಹೀಂಗೆ ಏಕೆ ಆತ್? ವಿಚಿತ್ರವೀರ್ಯ ಏಕೆ ಪಿಚ್ಚಿಲ್ಲದಂವ ಆತ್? ಸತ್ಯವತಿದೇವಿ ಮೊನ್ಸ್‌ಲಿ ಶಂತನು ಮಾರಾಜನ ಗಂಡಾಂತ ಒಪ್ಪಿಕಂಡತ್ಲೆನೋ? ದೊಡ್ಡ ಬುದ್ದಿವಂತ ಪರಾಶರ ಮುನಿಗೆ ತನ್ನ ಸರೀರನ ಮತ್ತೆ ಮೊನ್ಸ್‌ನ ಕೊಟ್ಟವುಳ್, ಅದ್. ಅವರ್‌ಂದ ವಿದ್ಯೆ ಕಲ್ತೋವ್ವು ಅದ್. ಮುನಿನ ಉತ್ತೇಜನಂದ ಕಾವ್ಯ ಬರೆವ ಹಂತಕ್ಕೆ ಬಂದವ್ವು. ಪರಾಶರಮುನಿಗ ಬರ್ದ ಕಾವ್ಯಗಳಿಗೆ ಅದೇ ಹುರ್ಪು ಆಗ್ತಿತ್ತ್. ಬೇಕಾಕನ ಎಲ್ಲಾ ಯಮುನಾ ನದಿನ ನೊಡುಲಿ ದೋಣಿಲಿ ಅವಿಬ್ರೊರು ಒಟ್ಟಿಗೆ ಇರ್ತಿದ್ದೊ. ಸತ್ಯವತಿದೇವಿ ನನ್ನಂದ ಯಾವ ಗುಟ್ಟ್‌ನನೂ ಅಣ್‌ಂಗಿಸಿ ಇಡ್ತಿತ್ಲೆ. ಈಗ ನಾ ಸಾವುಗೆ ಹಕ್ಕಲೆ ಒಳೆ. ಪರಶುರಾಮರ ಬುಟ್ಟರೆ ಇಡೀ ಬೂಮಿ ಮೇಲೆ ಹೆಚ್ಚ್ ಬೊದ್ಕಿದಂವ ನಾನೇ. ಇಸ್ಟ್ ಕಾಲ ಬೊದ್ಕಿರುನೂ ಒಂದೇ ಒಂದ್ ಕಾವ್ಯನ ಬರ್ಯಕೆ ಗುರ್‌ಗಳ್‌ಂದಳೂ ಆತ್ಲೆ. ನನ್ನಂದಳೂ ಆತ್ಲೆ. ಪರಾಶರಮುನಿಗೆ ಸತ್ಯವತಿ ದೇವಿ ಕಾವ್ಯ ಆತ್. ದ್ವೈಪಾಯನನ ಹೆಚ್ಚ್‌ಗಾರಿಕೆ ಮೂರು ಜನ ಹೆಣ್ಣ್‌ಗಳ್‌ಂದಾಗಿ ಹೊರಗೆಬಾತ್. ಗುರುಗಳ್‌ದ್ ಮತ್ತೆ ನನ್ನದ್ ಕಾವ್ಯ ಹುಟ್ಸ್‌ಸಿಕೆ ಆಗದೇ ಹೋಗಿ ಬುಟ್ಟಿತ್. ಗಂಡ್ ಹೆಣ್ಣ್‌ಲಿ ಕಾವ್ಯನ ಅರ್ಸ್‌ಸಿದೆ. ಹೆಣ್ಣ್ ಗಂಡ್‌ಗೆ ಕಾವ್ಯ ಆದೆ. ಗಂಡ್ ಹೆಣ್ಣ್‌ಂದ ಹುರ್ಪುಪಡ್ಡ್ ಅದರ ಬದ್ಲಾಯ್ಸಿದೆ. ಬ್ರಹ್ಮಚಾರಿ ಆಗಿದ್ದದರ ಪರ್ಣಾಮ ಆಗಿರ್ದು. ನನ್ನಂದ, ಗುರ್‌ಗಳ್‌ಂದ ಅದ್ ಆತ್ಲೆ.

ಪಾಪ, ಸತ್ಯವತಿದೇವಿಗೆ ಹಸ್ತಿನಾವತಿನ ರಾಣಿವಾಸ ಸೆರೆಮನೆನಾಂಗೆ ಕಂಡಿರೋಕು. ಎಸ್ಟೆಂದರೂ ಪವಿತ್ರ ಯಮುನೆಯ ನೊಡುಲಿ ತಾನೇ ಹೆಣ್ಣಾಗಿ, ಗಂಡ್‌ಗೆ ಸುಕ ಕೊಟ್ಟೋವ್ವು. ಪರಾಶರ ಮುನಿನ ಕವಿ ಹ್ರದಯಕ್ಕೆ ಅರ್ಥಿದೋಳು. ಅರಮನೆನ ಒಂದೇ ತರದ ಜೂವನಕ್ಕೆ ಮುಚ್ಚಿಹೋಗಿರೋಕು. ಮುನಿ ಅದರ ಮೊನ್ಸ್‌ಗೂ, ಸರೀರಕ್ಕೂ ಗಂಡ ಆಗಿತ್ತ್. ಅಪ್ಪ ಸರೀರನ ಮಾತ್ರ ಬಯ್ಸಿರೋಕು. ನಾ ಮಾಡ್ದ ಸಪತ, ಬಾಸೆನ ಇಸಯ ಅಂವಂಗೆ ತಿಳ್ದ ಮೇಲೆ ಅಂವನ ಮೊನ್ಸ್ ಅರ್ಥಿಕಂಡತ್ಲೇಂತ ಕಂಡದೆ. ಮಂಜನ ಸುಕಕ್ಕೆ ತಾನ್ ಇಡೀ ಜೂವನಲಿ ಅಡ್ಡಿ ಆದೇಂತ ಅವಂಗೆ ಆತೋ ಏನೋ? ಇಲ್ಲರೆ ಅಪ್ಪನ ಮೊನ್ಸ್‌ಲಿ ಎಲ್ಲಾ ತನ್ನ ಮುಂದೆನ ಹೆಣ್ಣ್ ಗಂಗಾದೇವಿನೇ ತುಂಬಿಕಂಡ್

ಇತ್ತೋ ಏನೋ? ಸತ್ಯವತಿದೇವಿಗೆ ಪರಾಶರ ಮುನಿಗಳ್‌ದೇ ಧ್ಯಾನ ಆಗಿರೋಕು. ಸರೀರ ಮತ್ತೆ ಮೊನ್ಸ್ ಒಂದಾತ್ಲರೆ ಒಳ್ಳೆ ಸಂತಾನ ಹೇಂಗೆ ಹುಟ್ಟುದು? ಅದ್ಕೆ ವಿಚಿತ್ರ ವೀರ್ಯ ಹಾಂಗಾತ್. ಸತ್ಯವತಿನ ದೂರಿದ್ ಪ್ರೋಜನ ಇಲ್ಲೆ. ಕುರು ಸಾಮ್ರಾಜ್ಯದ ರಾಣಿ ಆಕೆ ಅದ್ ಮೆರೋಣಿಗೆಲಿ ಬಾಕಾಕನ ಅದರ ಮೋರೆಲಿ ಸಂಬ್ರಮನೇ ಇತ್ಲೆ.

ಸತ್ಯವತಿನ ಇಸಯಲಿ ಅಪ್ಪ ದುಡ್ಕಿತ್. ಮೊನ್ಸ್‌ನ ಕೈಗೆ ಬುದ್ದಿನ ಕೊಟ್ಟ್ ಬುಟ್ಟ್‌ತ್. ಅದ್ ಮೊದುವೆನ ಬಂದನನೇ ಬೇಡಾಂತ ತೀರ್ಮಾನ ಮಾಡ್ದವುಳು. ಸೊತಂತ್ರಲಿ ಪರಾಶರ ಮುನಿಗೆ ಹುರ್ಪು ಕೊಟ್ಟ್, ತಾನ್ ಸಾ ಅವರೊಟ್ಟಿಗೆ ಕತೆ, ಪದಗಳ ಬರ್ಕಂಡ್ ಸುಕಲಿ ಇತ್ತ್. ಅಪ್ಪನ, ಅಂವನ ಒಬ್ಬನ ಪ್ರೀತಿ, ದಾಶರಾಜನ, ಅವನೊಬ್ಬನ ನಿರ್ದಾರ, ನನ್ನ, ನನ್ನೊಬ್ಬಂದೇ ಆದ ಪ್ರತಿಜ್ಞೆ ಒಂದ್ ನಿಮ್ಸ್‌ದ ಆವೇಸಲಿ ನಡ್ದ್‌ಹೋತ್. ನಾ ಮಾಡ್ದ್ ದೊಡ್ಡ ಕೆಲ್ಸಾಂತ ಹುಚ್ಚುತನಲಿ ಸಪತ ಮಾಡ್ದೆ. ನನ್ನ ಅವ್ವ ಗಂಗಾದೇವಿ ಸನ್ನೇಸಿನಿ ಆಗಿ ಹಿಮಾಲಯಕ್ಕೆ ಹೋಗದೆ ಇರ್ತಿದ್ದರೆ ಇದ್ ಯಾವ್ದುನೂ ನಡ್ಯತಿತ್ಲೆ.

ಅಪ್ಪ ಸಾಯಕಾಕನ ಸತ್ಯವತೀದೇವಿ, "ನಿನ್ನ ಅರ್ತ ಇಲ್ಲದ ಸಪತ, ಬಾಸೆನ ಬುಟ್ಟುಬುಡು. ಹೇಂಗೂ ನಿನ್ನ ಅಪ್ಪ ತೀರಿ ಹೋದ್ರೊ. ಅವರೊಟ್ಟಿಗೆ ನಿನ್ನ ಸಪತ-ಬಾಸೆನೂಸತ್ತ್ ಹೋಗಲಿ. ಇನ್ನ್ ಇದರ ನಡ್ಸುದರ್ಲಿ ಯಾವ ಅರ್ತನೂ ಇಲ್ಲೆ. ಪಟ್ಟನೇ ಅಲ್ಗಿಕಾಕನ ನಿನ್ನ ಸೊಂತದ ಸಪತ, ಬಾಸೆ ಮುಕ್ಯ ಆಕಿಲ್ಲೆ. ನೀ ಪಟ್ಟವ ಹತ್ತ್."– ಎಂತ ಹೇಳ್ತ್. ಚಿತ್ರಾಂಗದ ಸಾಯಕಾಕನೂ ನನ್ನ ಪಟ್ಟ ಏರಿಕೆ ಹೇಳ್ತ್. ಅಂಬೆನ ಮೊದ್ವೆ ಆಗಿ ಒಂದು ಪರ್ಸಂಗನ ಸುಕಲಿ ಮುಗ್ಯಕೆ ದಾರಿ ಮಾಡಿ ಕೊಡುಂತ ಬೇಡ್ತ್. ವಿಚಿತ್ರವೀರ್ಯಂಗೆ ಮಕ್ಕಳಾದುಲ್ಲೇಂತ ಗೊತ್ತಾದ ಮೆಲೆ ಅಂಬಿಕೆ, ಅಂಬಾಲಿಕೆಗಳ ಒಟ್ಟಿಗೆ ಸೇರಿ ಮಕ್ಕಳ ಪಡ್ಯಕೆ ನಂಗೆ ಹೇಳ್ತ್.

ಅದರ ಮಾತ್‌ನ ನಾ ಕೇಳ್ತಿದ್ದರೆ, ಧೃತರಾಷ್ಟ್ರನಂತಾ ಕುರ್ಡ, ಪಾಂಡುನಂತಾ ಕಾಯ್ಲೆಸ್ತನ ಸಂತಾನ ಅಂಬಿಕೆ, ಅಂಬಾಲಿಕೆಗಳ ಹೊಟ್ಟೆಲಿ ಹುಟ್ಟ್‌ತಿತ್ಲೆ. ನಾ ಅವರಿಬ್ಬರ ಸೇರಿಕೆ ಒಪ್ಪುಗೆ ಕೊಡದಿರಿಕಾಕನ ಸತ್ಯವತಿದೇವಿ ಬೇರೆ ದಾರಿ ಕಾಣದೆ ಅದರ ಮುಂದೆನ ಮಂಜ ದ್ವೈಪಾಯನನ ಕರ್ಸಿತ್. ಕುರು ಸಾಮ್ರಾಜ್ಯ ವಾರಾಸ್ದಾರ ಇಲ್ಲದೆ ಅಳ್ದ್ ಹೋದರ ಅದ್ಕೆ ಸೈಸಿಕಾತ್ಲೆ. ದ್ವೈಪಾಯನ ಸುರುಗೆ ಅಂಬಿಕೆ-ಅಂಬಾಲಿಕೆಯರ ಕೂಡಿಕೆ ಒಪ್ಪಿತ್ಲೆ. ಅವ್ವನ ಕಣನೀರ್‌ಗೆ ಕರ್‌ಗಿತ್. ಅಂವನ ದೊಡ್ಡ ಜಟೆ, ಉದ್ದದ ಗಡ್ಡ, ದೊಡ್ಡ ಮೂಂಕು, ಹೆದ್ರಿಕೆ ಹುಟ್ಟುಸುವ ಕೆಂಪು ಕಣ್ಣ್‌ಗ -ಇದರ್‌ಂದಾಗಿ ಅಂಬಿಕೆ -ಅಂಬಾಲಿಕೆಯರ್ಗೆ ಅಂವನೊಟ್ಟಿಗೆ ಮೊಲ್ಗುದು ಹೆದ್ರಿಕೆ ಹುಟ್ಟುಸುವ ಕೆಲ್ಸ ಆಗಿತ್ತ್. ನನ್ನನ ಆಗಿದ್ದರೆ ಅವು ಉಸ್ಕು-ದಮ್ಮ್‌ಂತೇಳದೆ ಒಪ್ಪಿಕೊಂಬೊತಿದ್ದೊ! ಇಸ್ಟ ಇಲ್ಲದೆ ನಡ್ದ ಕೂಡಿಕೆಲಿ ಅಪ್ಪನೂ ಮುಕ್ಯ ಆತ್ಲೆ, ಅಯ್ಯೆನೂ ಮುಕ್ಯ ಆತ್ಲೆ. ಮೊನ್ಸ್ ಮತ್ತೆ ಸರೀರ ಒಂದಾಗದ ಗೊಡ್ಡು ಆಚರ್ಣೆಂದ ಇಂತಾ ಸಂತಾನ ಹುಟ್ಟಿತ್ ! ಹಸ್ತಿನಾವತಿನ ಪಟ್ಟಲಿ ಕುದ್ದ್ ಅಪ್ಪ ಸುಕಪಟ್ಟತ್ಲೆ. ವಿಚಿತ್ರವೀರ್ಯಂಗೆ ಸುಕ ಪಡಿಕೆ ಆತ್ಲೆ. ಕುರ್ಡ ಧೃತರಾಷ್ಟ್ರಂಗೆ ಸುಕ ಕನ್ಸಾತ್. ಇನ್ನ್ ಯುಧಿಷ್ಠಿರ ಈ ಪಟ್ಟಲಿ ಕುದ್ದ್ ಏನ್ ಸುಕಪಟ್ಟದೆನೋ? ಅಣ್ಣ-ತಮ್ಮಂದರ ಕೊಂದ್

ಪಟ್ಟ ಹತ್ತಕಾದ ಹಣೆಬರ ಅಂವಂದ್. ವಿಚಿತ್ರವೀರ್ಯ ಹೆಸ್ರ್‌ಗೆ ಮಾತ್ರ ಚಕ್ರವರ್ತಿ ಆಗಿತ್ತ್. ಧೃತರಾಷ್ಟ್ರ ಚಕ್ರವರ್ತಿ ಆದರುನೂ ಅಧಿಕಾರ ಅಂವನ ಕೈಲಿ ಇತ್ತ್ಲೆ. ಜೂಜುಕೋರ ಯುಧಿಷ್ಠಿರನೂ ಅಸ್ಟೆಯ. ಹೆಸ್ರ್‌ಗೆ ಮಾತ್ರ ರಾಜ ಆದೆ. ಇದ್ ಕುರು ಸಾಮ್ರಾಜ್ಯದ ಅವಸಾನ. ಹೀಂಗಾಕೆ ನನ್ನ ಅಯ್ಯೆ ಗಂಗಾದೇವಿ ಕಾರಣ ಆತ್.

ಇರ್‍ಳ್ ನಾ ಎಸ್ಟೋ ಹೊತ್ತ್‌ನ ಮುಟ್ಟ ನಿದ್ದೆ ಬಾರದೆ ಬಂಗ ಬಂದೆ. ಬೊಳ್ಪಾಕಾಕನ ನಿದ್ದೆ ಬಾತ್. ನನ್ನ ಹೆತ್ತ ಅವ್ವ ಕಾಂಬಕೆ ಸಿಕ್ಕಿತ್. ದೂರಲೇ ನಿತ್ತ್ ಹೇಳ್ತ್, "ಕುರುಸಾಮ್ರಾಜ್ಯದ ಅವ್ಸಾನಕ್ಕೆ ನನ್ನನ ಕಾರಣಾಂತ ಹೇಳ್ಬಡ ಕೂಸೂ. ಅದ್‌ನೀ ಆಗಿನೇ ತಂದ್‌ಕಂಡ ಕಸ್ಟಗ. ರಾಣಿವಾಸದ ಉಸ್ರು ಕಟ್ಟ್‌ಸುವ ವಾತಾವರ್ಣಲಿ ನಾ ಯಾರ್‌ಂತೇಳ್ವ ನನ್ನ ಆತ್ಮನ ಹುಡ್ಕುವ ಕೆಲ್ಸಲಿ ನಂಗೆ ಏನ್ ಸಾ ಮಾಡಿಕೆ ಆಗದರ್‌ಂದ ನಾ ಹಸ್ತಿನಾವತಿನ ಬುಟ್ಟ್ ಬಂದೆ. ಮ್ಯೊಂಸಂಗೆ ಇರ್‍ದು ಒಂದೇ ಜಲ್ಮ. ರಾಣಿವಾಸಲೇ ಇರ್‍ತಿದ್ದರೆ ಇರ್‍ವ ಒಂದ್ ಜಲ್ಮಲಿ ಏನ್ ಸಾತ್ ಮಾಡಿಕೆ ಆಗ್ತಿತ್ಲೆ. ಮಾರಾಜರ ಮೋಹ, ನಿನ್ನ ಮೇಲೆ ಇರ್‍ವ ಪ್ರೀತಿ, ಪ್ರಾಯ ಹೋದ ಮೇಲೆ ನಿನ್ನ ಮಕ್ಕಳ ಪಿಳ್ಳಕಳ ಸಾಂಕುದು, ಹೀಂಗೆ ಗೋಡೆ ಕಟ್ಟಿಕಂಡ್ ಹಿಂದೆನೊವು ಮಾಡ್ದ ಅರ್ತ ಇಲ್ಲದ, ಒಂದೇ ತರಲಿ ಜೂವನ ಮಾಡ್ವ ಕಂದಾಚಾರದ ಬೊದ್‌ಕ್ ನಂಗೆ ಬೇಡಾತ್. ನಂಗುನೂ ಒಂದ್ ಮೊನ್ಸ್ ಇತ್ತ್. ಬೊದ್ಕ್‌ಲಿ ಏನನಾದ್‌ರ್ ಸಾದುಸೋಕೂಂತೇಳ್ವ ಕನ್ಸ್ ಇತ್ತ್. ಅದ್ಕಾಗಿ ಹೊರ್‌ಟ್ ಬಂದೆ. ದೊಡ್ಡ ಸಾದನೇನ ಮಾಡಿ ಬಾಳ್‌ನ ಸಾರ್ತಕ ಮಾಡಿಕಂಡೆ. ನಿನ್ನ ಅಪ್ಪ ಶಂತನು ಮಾರಾಜರ್ ಸತ್ಯವತಿನ ಮೆಚ್ಚಿದ್ ತೊಪ್ಪೂಂತೇಳ್ದುಲ್ಲೆ. ನೀ ಮಾರಾಜಂಗೆ ಒಂದ್ ಮಾತ್‌ನ ಸಾ ಹೇಳದೆ, ಸತ್ಯವತಿ ಹಕ್ಕಲೆ ಒಂದ್ ಮಾತ್ ಕೇಳದೆ, ಅದರಪ್ಪ ಏನೋ ಹೇಳ್ತ್‌ಂತ ದುಡ್ಕಿ ಅವ್ಸರಲಿ ಎಂತಾ ಅನಾಹುತ ಸಪತ ಮಾಡಿದ? ಯಾರಿಗೆ ಸುಕ ಸಿಕ್ಕಿತ್? ನಿನ್ನ ಸಪತಂದ. ಕಡ್ಡಾಯ ಬ್ರಹ್ಮಚಾರಿ ಆಗಿರ್‍ದು ದೊಡ್ಡ ಸಾದನೇಂತ ನೀ ತಿಳ್ಕಂಡ. ಪ್ರಕೃತಿ ದರ್ಮಕ್ಕೆ ಅದ್ ಇರೋದ. ಅದ್ಕೆ ನಿನ್ನದ್ ನಾಟಕದ ಬೊದ್ಕ್ ಆಗಿ ಹೋತ್. ನೀ ತೊಪ್ಪು ಮಾಡಿ ಬುಟ್ಟ. ನೀ ಸಪತ, ಬಾಸೆ ಇಸಿಕಣದಿದ್ದರೆ ಲೋಕ ಏನ್ ಮುಣ್‌ಂಗಿ ಹೋಗ್ತಿತ್ಲೆ. ನೀ ಕ್ಷತ್ರಿಯಾಂತೇಳ್ವ ಹಂಕಾರ ನಿನ್ನ ಸಪತ, ಬಾಸೆ ಮಾಡುವ ಹಾಂಗೆ ಮಾಡ್ತ್. ಇಸ್ಟ್ ದೊಡ್ಡ ಕುರು ಸಾಮ್ರಾಜ್ಯದ ಅವ್ಸಾನಕ್ಕೆ ನೀನೇ ಕಾರ್‍ಣ ಆದ."

ಅವ್ವ ಕಣ್ಣ್‌ಂದ ಮರೆ ಆತ್. ರಾಜಮಾತೆ ಸತ್ಯವತೀದೇವಿ ಕಾಣ್ಸಿ ಕಂಡ್‌ತ್. "ಕುಂಞೀ, ಇಂದ್‌ನನಿನ್ನ ಈ ಸ್ತಿತಿಗೆನಿನ್ನ ಸಪತ, ಬಾಸೆನೇ ಕಾರ್‍ಣ. ನೀ ಸಪತ ಇಸದೆ ಇರ್‍ತಿದ್ದರ್‌ನೂ ನಾ ಬೇರೆ ದಾರಿ ಇಲ್ಲದೆ ನಿನ್ನ ಅಪ್ಪನ ಕೈ ಹಿಡಿಯಕೇ ಹಿಡಿಯಕಾಗಿತ್ತ್. ಚಕ್ರವರ್ತಿಗ ಒಂದು ಆಜ್ಞೆ ಮಾಡ್ತಿದ್ದರೆ ಅದರ ಮಿಾರಿಕೆ ನನ್ನ ಅಪ್ಪ ದಾಶರಾಜಂಗೆ ಆಗ್ತಿತ್ಲೆ. ಈ ಇಡೀ ದೇಸಲಿ ಹೆಣ್ಣ್‌ನ ಅಭಿಪ್ರಾಯನ ಯಾರ್ ಕೇಳ್ತಿದ್ದೊ? ಮೊದ್ವೆಗೆ ಹೆಣ್ಣ್‌ನ ಒಪ್ಪಿಗೆ ಅಗತ್ಯ ಇಲ್ಲದಿರಿಕಾಕನ, ನಿನ್ನ ಅರ್ತ ಇಲ್ಲದ ಸಪತ, ಬಾಸೆ ಯಾರಿಗೆ ಬೇಕ್? ರಾಣಿ ಆಗಿ, ರಾಜರ ಅಯ್ಯೆ ಆಗಿ ನಾ ಒಂದೇ ಒಂದ್ ದಿನ ಸಾ ಸುಕ ಕಂಡತ್ಲೆ. ಯಾಕೇಂತೇಳ್ರೆ ಇಲ್ಲಿ ಮೊನ್ಸ್‌ನ ಬಾಸೆಗೆ ಬೆಲೆ ಇಲ್ಲೆ. ಅದರ ಅರ್ತ

ಮಾಡಿಕೊಂಬೊವು ಇಲ್ಲೆ. ಮಾತ್ ಎತ್ತಿರೆ ಬಲ, ದೊಡ್ಡಸ್ತಿಕೆ, ಸಪತ, ಬಾಸೆ, ವೀರಸೊರ್ಗಾಂತ ಹೇಳ್ವ ಬಡಾಯಿತನದ ಚೌಕಟ್ಟ್‌ನ ಒಳಗೆ ನಾಟಕದ ಬೊದ್‌ಕ್. ನಿನ್ನ ಸಪತ, ಬಾಸೆಂದಾಗಿ ಉಪಾಯ ಇಲ್ಲದೆ ನಾ ಕುರು ರಾಜ್ಯದ ಮಾರಾಣಿ ಆಗಿ ಹೋದೆ. ಇದರ ಪರ್ಣಾಮ ಏನಾತ್ ಗೊತ್ತುಟೋ? ಆಮೇಲೆ ಒಂದೇ ಒಂದು ಕಾವ್ಯನ ಬರ್ಯಕೆ ನನ್ನಂದಾತ್ಲೆ. ಪರಾಶರ ಮುನಿಗ ನಂಗೆ ಬರ್ಯಕೆ ಹುರ್ಪು ತುಂಬುಸಿದೊವು. ನಾ ಅವರ ಬರ್ಯಟಕೆ ಹುರ್ಪು ಕೊಟ್ಟವ್‌ಳ್. ಹೆಣ್ಣ್ ಗಂಡ್‌ನ ಸಂಮಂದಾಂತೇಳ್ರೆ ಅದ್. ಹೆಣ್ಣ್‌ಗೆ ಹುರ್ಪು ತುಂಬಂವ ಗಂಡ್. ಅಂತಾ ಗಂಡ್‌ಗೆ ಮಾತ್ರ ಹೆಣ್ಣ್ ತನ್ನ ಮೊನ್ಸ್‌ನ ಕೊಟ್ಟದೆ. ಹಾಂಗೆ ಹೆಣ್ಣ್‌ನ ನಡ್ಸಿಕಂಬಂವ ನಿಜಲಿ ಗಂಡ್. ಮೊದುವೆ ಮಾಡಿ ಬುಟ್ಟರೆ ಸಾಕ್. ಹೆಣ್ಣ್ ಗಂಡ್‌ಗೆ ಮೊನ್ಸ್ ಕೊಡೊಕೇ ಕೊಡೊಕೂಂತೇಳ್ದು ಹುಚ್ಚುತನ. ನೀವು ಕ್ಷತ್ರಿಯರ್ ಹೇಂಗಾದರೂ ಮೊದ್ವೆ ಆದು, ಹೆಣ್ಣ್‌ನ ಬೊಸ್ರಿಮಾಡ್ದು, ಮಾತೆತ್ತಿರೆ ಸಪತ, ಬಾಸೆ ಇಸುದು. ಆ ಸಪತ ಬಾಸೆನ ಈಡೇರ್ಸಿಕೆ ನೆತ್ತರ್ ಹುರ್ಸುದು ಗಂಡ್‌ಸ್ತನಂತ ಹೇಳಿಕಂಡರೆ. ನಿನ್ನ ಬೇಡದ ಸಪತ ಬಾಸೆಂದಾಗಿ ನಿಂಗೂ ಸುಕ ಇಲ್ಲೆ. ಕುರು ಸಾಮ್ರಾಜ್ಯಕ್ಕೆ ಸಾ ನೆಮ್ಮದಿ ಇಲ್ಲೆ. ನಿನ್ನ ಬುದ್ಧಿಗೇಡಿತನಂದ ಕುರುಸಾಮ್ರಾಜ್ಯ ಹಾಳಾಕೆ ನೀನೇ ಕಾರ್ಣ ಆದ."

ರಾಜಮಾತೆ ಸತ್ಯವತೀದೇವಿ ಮಾಯ ಆಗಿ ಕಾಶೀ ರಾಜಕುಮಾರಿ ಅಂಬೆ ಕಂಡತ್. "ಕುರು ಸಾಮ್ರಾಜ್ಯ ಹಾಳಾಕೆ ಬೇರೆಯವ್ರ ಹೊಣೆಗಾರ್ಕೆ ಮಾಡ್ಬಡ. ಅದ್ಕೆ ನೀನೇ ಕಾರ್ಣ. ನೀಹೇಡಿ, ಮೊನ್ಸತ್ವಕ್ಕೆ ಸಪತ ಬಾಸೆನ ದೊಡ್ಡಸ್ತಿಕೆಗೆ ಬಲಿಕೊಟ್ಟ ಗಂಡ್‌ಸ್ತನ ಇಲ್ಲದಂವ. ನಿನ್ನ ಸಪತ ಬಾಸೆ ಕಾಶೀ ರಾಜಕುಮಾರಿಗಳ ಬೊದ್ಕ್‌ನ ಕೊಂದ್ ಬುಟ್ಟ್‌ತ್. ನಾ ಕಿಚ್ಚಿಗೆ ಹಾರಿ ಒಮ್ಮನೇ ಸತ್ತ್‌ಬುಟ್ಟೆ. ಅಂಬಿಕೆ, ಅಂಬಾಲಿಕೆಗ ಒಂದೊಂದ್ ದಿನನೂ ವಿಚಿತ್ರ ವೀರ್ಯನ ರಾಣಿವಾಸಲಿ ಇದ್ದ್‌ಕಂಡ್ ಸತ್ತ್‌ಕಂಡೇ ಹೋದೊ. ನೀ ನಮ್ಮನ ಮೊದುವೆ ಆಗ್‌ತಿದ್ದರೆ, ಕುರು ಸಾಮ್ರಾಜ್ಯ ಒಳ್ಯತಿತ್ತ್. ನಿನ್ನ ಸಪತ ಬಾಸೆ ದೊಡ್ಡ ಸಾದನೇಂತ ನೀ ತಿಳ್ಕಂಡಳ. ಹೆಮ್ಮಕ್ಕಳ್‌ಗೆ ಒಂದ್ ಸುಕದ ಬಾಳ್‌ನ ಕೊಡಿಕಾಗದ ನಿನ್ನ ಸಪತ–ಬಾಸೆಗ, ವಂಸದ ದೊಡ್ಡಸ್ತಿಕೆ ಇದೆಲ್ಲಾ ನಮ್ಮ ಆತ್ಮಕ್ಕೆ ನಾವೇ ಮೋಸ ಮಾಡ್ದಾಂಗಾದೆ. ಕ್ಷತ್ರಿಯಾಂತೇಳುವ ಪೊಳ್ಳು ಪ್ರತಿಸ್ಟೆನ ಹಂಕಾರಲಿ, ಸಪತ ಬಾಸೆನ ನೆಪಲಿ ಹೆಮ್ಮಕ್ಕಳ ಬಾಳ್‌ನ ಬಲಿಕೊಟ್ಟ ನಿನ್ನ ಆತ್ಮದ ಮೋಸನೇ ಕುರುಸಾಮ್ರಾಜ್ಯ ಹಾಳಾಕೆ ಕಾರ್ಣ."

ಅಂಬೆ ಸಾತ್ ಮಾಯ ಆತ್. ಇನ್ನ್‌ನೂ ಒಂದ್ ಹೆಣ್ಣ್‌ನ ಮೋರೆ ಕಂಡತ್. ಅದ್ ದ್ರೌಪದಿನ ಮೋರೆ. ಅದ್ ಹೇಳ್ತ್, "ಕುರು ಸಾಮ್ರಾಜ್ಯ ಹಾಳಾಕೆ ಕಾರ್ಣ ನೀವೇ ಅಜ್ಜಪ್ಪಾ. ನಿಮ್ಮ ಎದ್‌ರೇ ಮೋಸದ ಜೂಜಾಟ ನಡ್ತ್. ನೀವು ಅದರ ಯಾಕೆ ತಡ್ತಿಲ್ಲೆ? ಯುಧಿಷ್ಠಿರ ಇಂದ್ರಪ್ರಸ್ತನ, ನಾಕ್ ಜನ ತಮ್ಮಂದರ, ಅಕೇರಿಕೆ ಸೊಂತ್ ಅಂವನನೇ ಸೋತ ಮೇಲೆ ನನ್ನನ ಪಂತಕ್ಕೆ ಇಸಿತ್. ನಾ ಏನ್ ಅಂವನ ಒಬ್ಬನ ಹೆಣ್ಣೋ? ಅಂವ ಎನ್ ಸೊಂಯಂವರ ಮಂಟಮೆಲಿ ಮೀನ್‌ನ ಯಂತ್ರದ ತುಂಡು ಮಾಡಿ ಗೆದ್ದಂವನೋ?

"ನಿನ್ನದ್ ಅದರ್ಮ"–ಎಂತಹೇಳಿ ಅಂವನ ತಡ್ಯಕೆ ನಿಮ್ಮಂದ ಆಗ ಏಕೆ ಆತ್ಲೆ? ತುಂಬಿದ ಸಬೆಗೆ ಬೇರೆಯವ್ರ ಹೆಣ್ಣ್ನ ಮಾನಗೇಡ್ ಆಗ್ವ ಹಾಂಗೆ ಎಳ್ದ್ ತಾಕೆ ದುರ್ಯೋಧನ ದುಶ್ಯಾಸನಂಗೆ ಅಪ್ಪಣೆ ಮಾಡಿಕನ "ಇದ್ ತೊಪ್ಪು"– ಎಂತನೀವು ಏಕೆ ತಡ್‌ತ್ತಿಲ್ಲೆ? ಜೂಜ್‌ಲಿ ತನ್ನನ ಸೋತ ಮ್ಯೊಂಸಂಗೆ ತನ್ನಹೆಣ್ಣ್ನ ಪಂತಕ್ಕೆ ಇಸಿಕೆ ಹಕ್ಕ್ ಉಟ್ಟೊ?"– ಎಂತನಾ ಕೇಳಿಕಾಕನ ದುರ್ಯೋಧನನ ದುಸ್ಟ ಜನಂಗ ನನ್ನ ಮೇಲೆ ಕೈಮಾಡಿಕೆ ಮುಂದೆ ಬಂದೊ. ಒಬ್ಬ ವಿಕರ್ಣ ಮಾತ್ರ ನನ್ನ ಪರ ವಾದ ಮಾಡ್ತ್. ಆಗ ಅದರ್ ನೀವು ದುರ್ಯೋಧನನ ದುಸ್ಟತನನ ತೊಪ್ಪೂಂತ ಹೇಳಿಕೆ ಏಕೆ ದೈರ್ಯ ಮಾಡ್‌ತ್ತಿಲ್ಲೆ? ದುಶ್ಯಾಸನ ತುಂಬಿದ ಸಬೆಲಿ ಬಾಸೆ ಇಲ್ಲದಂವನಾಂಗೆ ಹಂಕಾರಲಿ ನನ್ನ ಸೆರ್‌ಂಗ್‌ಗೇ ಕೈ ಹಾಕಿಕಾಕನ, ಅದರ ತಡ್ಯಕೆ ನೀವ್‌ಗೆ ಏಕೆ ಆತಿಲ್ಲೆ? ಹೇಳಿ ಅಜ್ಜಪ್ಪಾ, ನಾ ನಿಮ್ಮ ಮಗಳ್ ಆಗಿರ್ತಿದ್ದರೆ ನೀವು ಗಂಡ್‌ಸ್‌ತನ ಇಲ್ಲದವರಾಂಗೆ, ನಿಮ್ಮ ಕಣ್ಣೆದ್‌ರ್‌ನೇ ನಡ್ಯತಿದ್ದ ಕೆಟ್ಟ ಕೆಲ್ಸಗಳ ಸರ್ಮಾಲೆಗಳ ಸೈಸಿಕಂಡ್ ಸುಮ್ಮಂಗೆ ಕುದ್ರ್‌ತಿದ್ದರಿನೋ? ಅಂದ್ ನೀವು ನಂಗೆ ಅಪಮಾನ ಆಗದಾಂಗೆ ನೋಡಿಕೊಳ್ತಿದ್ದರೆ, ಈ ಮಾಯುದ್ದ ನಡ್ಯತಿತ್ಲೆ. ಅನ್ನೇಯ, ಅದರ್ಮಗಳ ನೋಡಿರೂ ಸಾತ್ ಅದರ ಸೈಸಿಕಂಡ್ ಸುಮ್ಮಂಗೆ ಕುದ್ರುಂವಂವನ ಗಂಡ್‌ಂತ ಹೇಳಿಕಿಲ್ಲೆ. ನೀವು ಜೂವಮಾನ ಇಡೀ ಮೊದ್ವೆ ಆಗದೆ ಬ್ರಹ್ಮಚಾರಿ ಆಗಿದ್ದನೇಂತ ಆಣೆ ಮಾಡ್ದ ದೊಡ್ಡ ಮ್ಯೊಂಸರ್‌ಂತ ಇಡೀ ಲೋಕದೊವು ಕೊಂಡಾಡ್‌ವೆ. ಆದರೆ ನಿಮ್ಮ ನಡೋಳ್ಕೆಗ ನಿಮ್ಮ ಗಂಡ್‌ಸ್ತನ ಇಲ್ಲದಂವಾಂತ ಸಾರಿ ಹೇಳ್ದೆ. ಮೋಸದ ಪಗಡೆ ಆಟ, ನನ್ನ ಸೀರೆನ ಎಳ್ದ ಪರ್ಸಂಗಲಿ ನೀವು ಗಂಡ್ ಅಲ್ಲಾಂತ ಹೇಳ್ದು ಲೋಕದ ಜನಕ್ಕೆ ಗೊತ್ತಾತ್. ಇದ್ ಸಾಲದ್‌ಂತ, ದುರ್ಯೋಧನ ದರ್ಮಮಾರ್ಗನ ಬುಟ್ಟಂವಾಂತ ತಿಳ್ದಿದ್ದರ್ ಸಾ ಅಂವನ ಕಡೆ ನಿತ್ತ್ ನೀವೇ ಗಂಡಾಂತರನ ತಂದ್‌ಕಂಡರಿ. ಕುರು ಸಾಮ್ರಾಜ್ಯ ಹಾಳಾಕೆ ನೀವೇ ಕಾರ್‍ಣ ಆದೆರಿ."

ನಾ ಗಾಬೆರಿಂದ ಕಣ್ಣ್ ಬುಟ್ಟ್‌ದ್ ನೋಡ್ದೆ. ಪೊರ್ಲುಲಿ ಬೊಳ್ವಾಗುಟ್ಟು. ಮುಂಡನ ಮಟ್ಟಿ ನೋಡಿಕಂಡೆ. ಬೆಗರ್‌ನ ಹನಿಗ ಕಂಡತ್. ಕನ್ಸ್‌ಲಿ ಕಂಡ ನಾಕ್ ಮೋರೆಗ ಹೇಳ್ದ ಮಾತ್‌ಗಳ್‌ಂದ ನಾ ಮಾಡ್ದ ಪಾಪಾಂತೇಳ್ವ ಯೋಚ್ನೆ ನನ್ನ ಕಾಡಿಕೆ ಸುರಾತ್. ಕುರು ಸಾಮ್ರಜ್ಯದ ರಕ್ಷಣೆ ಮಾಡಂವ ನಾ ಅಂತ ಹೇಳಿಕಂಡರೆ ಕುರು ಸಾಮ್ರಾಜ್ಯನ ಹಾಳ್ ಮಾಡ್ದವ ನಾಂತ ಮುಂದೆನ ಜನಂಗ ಗುರ್ತಿಸಿಕೆ ಆದೂಂತೇಳ್ದರ ನೆನ್ಸಿಕಂಡ್ ನನ್ನ ಮೊನ್ಸ್ ಕುಗ್ಗಿ ಹೋತ್. ದೊಡ್ಡ ಸಾದನೆ ಮಾಡ್ದೇಂತ ಹೇಳಿಕಂಡ್, ಎಲ್ಲಾ ಸುಕ, ಸಂತೋಸಕ್ಕೆ ಎಳ್ಳ್–ನೀರ್ ಬುಟ್ಟ್‌ದ್ ಕುದ್ದ ನಂಗೆ ನಾಳೆ ಸಿಕ್ಕುದು ಇಂತಾ ಬಹುಮಾನನೋ?

ತಳಮಳಂದಾಗಿ ಏನ್ ಸಾ ತಿಂಬಕೆ ಮೊನ್ಸಾತ್ಲೆ. ಕೆಲ್ಸದಂವನ ಒತ್ತಾಯಕ್ಕೆ ಹಂಞ ನೀರ್ ಆಹಾರನ ತಿಂದೆ. ಎದೆಗೆ ಹೆಟ್ಟಿದ ಬಾಣದ ಬೇನೆ, ಮೇಲೆ ಗಂಟ್ಲ್‌ಂದ ಕೆಳಗೆ ಹೊಟ್ಟೆಗೆ ಮುಟ್ಟಿ ಹರ್‌ಂಡಿಕಂಡಿತ್. ಇನ್ನ್ ಹೆಚ್ಚ್‌ಂತೇಳ್ರೆ ನಾ ಎರ್ಡ್ ದಿನ ಬೊದ್ಕುಂವೆ. ಕುರು ಸಾಮ್ರಾಜ್ಯದ ಮುಂದೆನ ರಾಜ ಯಾರ್‌ಂತ ತಿಳ್ಯದೆ ನಾ ಸತ್ತ ಹೋಗಿ ಬುಟ್ಟನೆನೋ? ಅಲ್ಲಿ ಕುರುಕ್ಷೇತ್ರಲಿ ಈಗ ಏನ್ ಆಗಿ ಬುಟ್ಟಿರ್ದು? ನಂಗೆ ಅದ್ ತಿಳ್ಯವ ದಾರಿ ಹೇಂಗೆ?

ಇಸ್ಟ್ ದಿನ ಕರ್ಣಂದ, ದುರ್ಯೋಧನಂದ ತಿಳ್ಕತಿತ್. ಕರ್ಣ ನಿನ್ನೆ ಸತ್ತತ್. ದುರ್ಯೋಧನ ದೊಡ್ಡ ಜವಾಬ್ದಾರಿನ ನನ್ನ ಮೇಲೆ ಹೊರ್ಸಿ, ರಣರಂಗಕೆ ಹೋಗುಟು. ಅಂವ ಬಾವುದೋ? ಮತ್ತೆ ಅಂವನ ನಾ ನೋಡಿನೆನೋ?

ದುರ್ಯೋಧನನ ಕತೆ ಇಂದ್ ಮುಗ್ದರೆ ಯುಧಿಷ್ಠಿರನೇ ಹಸ್ತಿನಾವತಿನ ಹಕ್ಕುದಾರ ಆದೆ. ಆದರೆ ಧೃತರಾಷ್ಟ್ರ ಅಸ್ಟ್ ಸುಲಬಲಿ ಪಟ್ಟನ ಬುಟ್ಟ್‌ದ್ ಕೊಡ್ದೋ? ಆಗ ನಾ ದರ್ಮದ ಪರ ನಿತ್ತ್ ಮಾತಾಡಕಾದೆ. ಅದ್‌ಕ್ಕೆ ಧೃತರಾಷ್ಟ್ರ ಏನ್ ಹೇಳ್ದೆನೋ? ಆದರೆ ಎಸ್ಟ್ ದಿನಾಂತ ಕುರ್ಡ ರಾಜ ಇರೋದ ತೋರ್ರುದು? ತೋರ್ಸಿರೆ ಇಂವ ಸಾಯಕನ ಇಂವನ ಕಾಟಕ್ಕೆ ಕಿಚ್ಚ್ ಕೊಡೋವು ಯಾರ್? ಧೃತರಾಷ್ಟ್ರ ಉಪಾಯ ಇಲ್ಲದೆ ಯುಧಿಷ್ಠಿರನ ಒಪ್ಪಿಕಣಕಾದೆ. ನನ್ನ ಎದೆಗೆ ಬಾಣ ಹೆಟ್ಟಿದಂದ್ ಪಾಂಡೋವು ಇಲ್ಲಿಗೆ ಬಂದೋವು ಅದರ್‌ಂದ ಮೇಲೆ ಬಾತೇ ಇಲ್ಲೆ. ನನ್ನ ಅವು ಕಡೆಗಣ್ಸಿದೊನೋ? ನನ್ನನ ದುರ್ಯೋಧನನ ಕಡೆಂವಾಂತ ತಿಳ್ಕಂಡ್ ಅವು ದೂರ ಇಸಿದೊನೋ? ನಂಗೆ ಅವರ ಕಡೆ, ಇವರ ಕಡೇಂತ ಇಲ್ಲೆ. ನನ್ನ ನಿಸ್ಟೆ ಸಿಂಹಾಸನದ ಕಡೆಗೆ. ಯುಧಿಷ್ಠಿರಂಗಾದರ್ ಇದ್ ಅರ್ತ ಆದರೆ ಸಾಕ್.

ಕಾವಲ್‌ಗಾರ ದಡ ಬಡ್ಸಿ ಓಡಿಕಂಡ್ ಬಾತ್. ಕೃಷ್ಣನೊಟ್ಟಿಗೆ ಪಾಂಡೋವು ಬಾವ ಇಸಯನ ತಿಳ್ಸಿತ್. ಕೃಷ್ಣ ಕೈ ಮುಗ್ದ್‌ಕಂಡೇ ಬಂದ್ ಆಸನಲಿ ಕುದ್ದತ್. ಪಾಂಡೋವು ಕಾಲ್ ಮುಟ್ಟಿ, ನಿತ್ತ್‌ಕೊಂಡೊ. ದ್ರೌಪದಿ ನನ್ನನ ಮುಟ್ಟಿತ್ಲೆ. ಅದರೊಟ್ಟಿಗೆ ಬಂದ ಜನ ಯಾರ್? ಗುರ್ತ ಸಿಕ್ಕಿತ್. ಸಿಕಂಡಿ! ನನ್ನ ಈ ದುರವಸ್ತೆಗೆ ಕಾರ್ಣ ಆಗಿ ಯುದ್ಧದ ದಾರಿನನೇ ಬದ್ಲಿಸಿದ ಸಿಕಂಡಿ.

ಕೃಷ್ಣ ಮಾತ್ ಸುರು ಮಾಡ್ತ್. "ಎಂಟ್‌ದಿನ ಆತಲೇ ಆಚಾರ್ಯರೇ, ನೀವು ಹೀಂಗೆ ಮೊಲ್ಗಿ. ರಣರಂಗಲಿ ನೀವು ಇಲ್ಲದೆ ಒಂದ್ ತರಾ ಯಾರ್‌ಸಾ ಇಲ್ಲೆಲೇಂತೇಳುವಾಂಗೆ ಆಗ್ತಿತ್. ಆಗಾಗ ನಿಮ್ಮ ನೆಂಪಾಗ್ತಿತ್. ಅಂದ್ ನಿಮ್ಮ ಇಲ್ಲಿ ನೋಡ್ದೋವು ಇಂದ್ ಬಂದೊಳೊ. ಯುದ್ಧ ನಿಲ್ಲದೆ ನಾವು ನಿಮ್ಮ ಹಕ್ಕಲೆ ಬಾವ ಹಾಂಗೆ ಇತ್ಲೆ. ಸರಿಯಾಗಿ ಹದ್ನೆಂಟ್‌ನೇ ದಿನಲಿ ಯುದ್ಧ ಮುಗ್ದತ್. ಈ ಭೀಮಸೇನಂದ ತೊಡೆ ಮುರ್ಸಿಕಂಡ್ ಬಿದ್‌ಕಂಡಿದ್ದ ದುರ್ಯೋಧನ ಸಾಯಕೆ ತಯಾರಾಗುಟು. ನಿಮ್ಮ ಆಸೀರ್ವಾದ ನಿಜ ಆಗುಟು. ದರ್ಮಕ್ಕೆ ಗೆಲುವು ಸಿಕ್ಕಿಟು."

ಕೃಷ್ಣ ಬೆಣ್ಣೆಲಿ ಕೂದೋಲು ಎಳ್ದಾಂಗೆ ನನ್ನನ ಅದರ್ಮದ ಕಡೆಗೆ ನಿತ್ತಂವಾಂತ ಚುಚ್ಚುಮಾತ್ ಹೇಳ್ದೆ. ಬಣ್ಣಲಿ ಕಪ್ಪು ಆದರೆ ಏನ್? ಕೆಳಜಾತಿಂಯಂವ ಆದರೆ ಏನ್? ಯಾವ ಕ್ಷತ್ರಿಯ ಇಲ್ಲರೆ ಬ್ರಾಮಣ ಇವಂಗೆ ಚುರ್ಕು ಬುದ್ದಿಲಿ, ತಂತ್ರಗಾರ್ಕಿಲಿ, ಆಡಳ್ತೆ ಮಾಡ್ದರ್ಲಿ ಸರಿ ಆದು? ಜಾತಿ, ಬಣ್ಣದ ರೀತಿ ನೀತಿನ ಅಳ್ಸಿಕಾಗಿ ಇಂವ ಆಗಾಗ ಹೇಳ್ತಿತ್. "ಚಾತುವರ್ಣ್ಯ ಮಯಾಂ ಸೃಷ್ಟಾಂ, ಗುಣಕರ್ಮ ವಿಭಾಗಶಃ" "ನಾಕ್ ಬಣ್ಣಗ ಗುಣನ ಸೂಚಿಸಿದೆ. ಹುಟ್ಟುಂದ ಬಣ್ಣ ನಿಚ್ಚಯ ಆದ್ಲೇಂತ ಇಂವ ಸಾರಿ ಸಾರಿ ಹೇಳ್ತಿತ್. ಈ ಬಣ್ಣದ ವ್ಯವಸ್ಥೆನ ಸಂಪೂರ್ಣ ಪ್ರೋಜನನ ಒಟ್ಟ್‌ಲಿ ದಕ್ಕ್‌ಸಿಕೊಳ್ತಿದ್ದ ಬ್ರಾಂಬ್ರ ಮತ್ತೆ ಕ್ಷತ್ರಿಯರ್ ಹುಟ್ಟುನನೇ ಜಾತಿಗೆ ಆದಾರಂತೇಳುವೆ. ಇದ್ ಆರ್ಯಾವರ್ತದ ದುರಂತ.

ಇಂವ ಗುರು ಪರಶುರಾಮರ ಹಾಂಗೆ ಜಾತಿ–ಬಣ್ಣ ಇಲ್ಲದೆ ಇರ್ವ ಮ್ಯೊಂಸರ ಗುಂಪುನ ಹುಟ್ಟು ಹಾಕಿಕೆ ನೋಡುಂವ ಎಲ್ಲೋವೂ ಸಮಾನಂತೇಳ್ವ ಜನ. ಈಗ ಇರುವ ದೊಡ್ಡ ದೊಡ್ಡ ಸಾದನೆ ಮಾಡ್ದೋವು, ಮುಂದೆಗೆ ಹೊಗ್ಳಿಕೆಗೆ ಒಳಗಾದವೆ. ಕಡೆಗೊಂದ್ ದಿನ ಇವರ ಜನರ್ ದೇವ್ರೂಂತ ಪೂಜೆ ಮಾಡುವೊ. ದೇಸಲಿ ಮಾತ್ರ ಅಲ್ಲ. ಎಲ್ಲಾ ಕಡೆನು.

ನಾ ನನ್ನ ಮೊನ್ಸ್‌ಲಿ ನಡ್ಯದರ ತಡ್ಕಂಡ್ ಮೆತ್ತಂಗೆನ ಸೊರಲಿ ಹೇಳ್ದೆ. "ನೀ ಇರಿಕನಮುಟ್ಟ ಪಾಂಡೋವು ಹೇಂಗೆ ಸೋಲಿಕೆ ಸಾದ್ಯ ಕೃಷ್ಣಾ? ಹೇಳ್. ದರ್ಮಕ್ಕೆ ಸೋಲಾದುಲ್ಲೇಂತ ನೊಂಬಿದಂವ ನಾ. ಪಾಂಡೋವು ಈಗ ಕುರು ಸಾಮ್ರಜ್ಯನ ಆಳೋವು ಆದೊ. ನಿನ್ನ ಮುಂದಾಳ್ತನಲಿ ಇನ್ನಾದರ್‌ನೂ ಕುರುದೇಸ ದರ್ಮಸಾಮ್ರಾಜ್ಯ ಆಗಲಿ. ಇಸ್ಟ್ ದಿನ ಯುದ್ಧ ಬೂಮಿನ ಸಮಚಾರನ ಕರ್ಣನೋ, ದುರ್ಯೋಧನನೋ ತಿಳ್ಸ್‌ತಿದ್ದೊ. ಈಗ ನೀನೇ ತಿಳ್ಸೋಕು. ಇಂದ್ ಏನ್ ನಡ್ದತ್‌ಂತ ಸರ್‍ಯಾಗಿ ಹೇಳ್ಬೆನೋ?"

ಕೃಷ್ಣ ಹೇಳ್ತ್. "ಆಚಾರ್ಯರೇ, ಇಂದ್ ಅಳ್ದ್ ಒಳ್ದ ಸೇನೆನೊಟ್ಟಿಗೆ ಶಲ್ಯ ಬೂಪತಿ ನಮ್ಮನ ಎದ್‌ರ್‌ಸಿಕೆ ಬಾತ್. ಎಸ್ಟ್ ಹೊತ್ತ್? ಅಂವನ ಕತೆನ ನಮ್ಮ ಯುಧಿಷ್ಠಿರ ಸುಲ್ಬಲಿ ಮುಗ್ಸಿತ್. ಹೆದ್ರಿದ ದುರ್ಯೋಧನ ರಣರಂಗಂದ ಓಡಿ ಹೋವ್ವುದರ್ಲಿ ಇತ್ತ್. ಆಗ ಅಣ್ಣ ಬಲರಾಮದೇವ ಬಾತ್. ಅಂವನ ಎದ್ರ್‌ಲಿ ಭೀಮ ದುರ್ಯೋಧನರ ನೊಡುಲಿ ಗದೆನ ಕಾಳಗ ನಡ್ತ್. ದುರ್ಯೋಧನ ನೇಮಕ್ಕೆ ಇರೋದ ಆಗಿ ಭೀಮನ ತಲೆಗೆ ಗದೆಂದ ಹೊಡ್ತ್. ಭೀಮ ಮೊತಿ ತೊಪ್ಪಿ ಬೀತ್. ನಾವ್ಗೆ ತುಂಬಾ ಕಳವಳ ಆತ್. ಹಂಞ ಹೊತ್ತ್‌ಲಿ ಮೂರ್ಚೆ ಎದ್ದ ಭೀಮ ಒಂದೇ ಸಮ ದುರ್ಯೋಧನನ ತೊಡೆಗೆ ಪೆಟ್ಟ್ ಹಾಕಿತ್. ದುರ್ಯೋಧನನ ತೊಡೆಗ ಮುರ್ದ್ ಹೋಗಿ ಅಂವ ಬಿದ್ದ್ ಬುಟ್ಟತ್. ಈಗ ಅಕೇರಿನ ಉಸ್ರು ಎಳ್ದ್‌ಕಂಡ್ ಇರ್‍ದು."

ಕೃಷ್ಣ ಎಲ್ಲಾ ಕತೆನ ಹೇಳ್ತ್. ಒಂದ್ ಜೂವ, ಅದ್ ಯಾರ್‌ದೇ ಆಗಿರ್ಲಿ, ಬೇನೆಂದ ಹೊಣ್ಕ್‌ಕಂಡ್ ಅಕೇರಿನ ಉಸ್ರು ಎಳ್ಯಕಾಕನ ಆ ಸ್ತಿತಿಲಿ ಕುರುಕ್ಷೇತ್ರಲಿ ಅಂವನ ಒಬ್ಬನನೇ ಬುಟ್ಟ್‌ದ್ ಬಂದೊ ಅಲ್ಲಾ ಇವು? ಅದರ ಹೇಳಿಕಾಕನ ಕೃಷ್ಣನ ದನಿಲಿ ಬೇನೆ, ಬೇಜಾರ್ ಇತ್ಲೆ. "ದುಃಖೇಷುನುದ್ವಿಗ್ನ ಮನಾಃ ಸುಖೇಷು ವಿಗತಸ್ಪೃಹಃ, ವೀತರಾಗ ಭಯಕ್ರೋಧ, ಸ್ಥಿತಧೀರ್ಮುನಿರುಚ್ಯತೇ". ಈ ಕೃಷ್ಣ ಸುಕ, ದುಕ್ಕಕ್ಕೆ ಮೊರ್ಗಂವ ಅಲ್ಲ. ಇಂವನ ಯಾವ ಬಾವನೆಗ ಸಾ ಕಾಡ್‌ದುಲ್ಲೆ. ಇಂವ ಗಟ್ಟಿ ಮೊನ್ಸ್‌ನಂವ. ನೀರ್‌ಲಿ ಇದ್ದರೂ ತಾಮರೆ ಎಲೆ ಎಲ್ಲಿ ಚೆಂಡಿ ಆದೆ? ಹಸ್ತಿನಾವತಿನ ಪಟ್ಟ ಹತ್ತಕಾದಂವ ಅಲ್ಲಿ ಕುರುಕ್ಷೇತ್ರಲಿ ರಣರಂಗಲಿ ಬಾಯಿಗೆ ನೀರ್ ಇಲ್ಲದೆ ಸಾಯಕೆ ತಯಾರಾಗುಟು. ದುರ್ಯೋಧನ ಮಾಡ್ದ್ ತೊಪ್ಪೇ ಇರ್‍ದು. ಆದರೆ ಅಂವನ ಹಾಂಗೆ ಸಾಯಕೆ ಬುಡ್ದು ಯಾವ ದರ್ಮ?

ನನ್ನ ಮೊನ್ಸ್‌ನ ಓದಿಕೊಂಡವನಾಂಗೆ ಯುಧಿಷ್ಠಿರ ಉತ್ತರ ಕೊಟ್ಟತ್. "ಅಜ್ಜಪ್ಪಾ, ದುರ್ಯೋಧನ ಅಲ್ಲಿ ಒಬ್ಬನೇ ಇಲ್ಲೆ. ಅಲ್ಲಿ ಈಗ ಕೃತವರ್ಮ, ಕೃಪಾಚಾರ್ಯ, ಗುರುಗಳಮಂಜ ಅಶ್ವತ್ಥಾಮ ಒಳೊ. ಸಂಜಯ ಯುದ್ಧದಸುದ್ದಿ ತಿಳ್ಸಿಕೆ ಅರಮನೆ ಕಡೆಗೆ ಹೋಗುಟು. ದುರ್ಯೋಧನನ ಚಿಂತೆನ ಬುಡಿನಿ. ನಿಮ್ಮ ಸರೀರದ ಸ್ತಿತಿ ಈಗ ಹೇಂಗುಟ್ಟು ಅಜ್ಜಪ್ಪಾ?"

"ನನ್ನಸರೀರದಬಗ್ಗೆ ಏಚನೆಮಾಡ್ದರನಾ ಯಾಗೊಳೋಬುಟ್ಟಳೆ. ನಂಗೆ ಈಗ ಕಾಟ ಕೊಡ್ದುಮೋನ್ಸ್‌ಮಾತ್ರ ಕೂಸೂ. ಕರ್ಣನನ್ನೊಟ್ಟಿಗೆ ಅಂವನ ಅಕೇರಿನ ಆಸೆನಹೇಳಿಟು. ಅಂವನ ಸರೀರಕ್ಕೆ ಅಂವನ ಮಂಜ ವೃಷಕೇತುನೇ ಕಡೆಗೆ ಮಾಡುವ ಕ್ರಿಯೆಗಳ ಎಲ್ಲದರ್ರೂ ಮಾಡಕಡ. ನೀ ಇದರ ಒಂದರ ನಡ್ಸಿಕೊಟ್ಟರೆ ಸಾಕ್. ನಂಗೆ ಈಗ ಒಂದು ಪ್ರಸ್ನೆ ಬಾದೆ ಕೊಟ್ಟದೆ. ನನ್ನ ಎದೆಗೆ ಬಾಣ ಬುಟ್ಟ್‌ದ್ ನಾ ಎದ್ರಿಕೆ ಬೊತ್ತದಾಂಗೆ ಮಾಡ್ದಂವ ನಿಮ್ಮ ಒಟ್ಟಿಗೆ ಏಕೆ ಬಾತ್?"

ಯುಧಿಷ್ಠಿರ ನನ್ನ ಕೈ ಹಿಡ್ಕಂಡ್ ಹೇಳ್ತ್, "ಅಜ್ಜಪ್ಪಾ, ಇಂವ ದ್ರುಪದದಮಂಜ ಸಿಕಂಡಿ, ಸರೀರದ ಕೊರ್ತೆಂದಾಗಿ ಸಣ್ಣಪ್ರಾಯಂದಳೇ ಎಲ್ಲರ್‌ಂದ ಅಪಮಾನಕ್ಕೆ ಒಳಗಾದಂವ. ಜೂವಲಿ ಇರಿಕಾಕನ ಏನಾದರ್ ದೊಡ್ಡ ಕೆಲ್ಸಮಾಡಿ, ಮುಂದೆನ ಜನ ಅಂವನನೆಂಪುಮಾಡಿಕಂಬಹಾಂಗೆಸಾದನೆಮಾಡಕೂಂತಹೇಳಿಕಂಡ್‌ಬೆಳ್ದಂವಗಡ. ರಣರಂಗಲಿ ಇದ್ದಕ್ಕಿದ್ದ ಹಾಂಗೆ ನಿಮ್ಮ ಎದ್ರ್ ನಿತ್ತ್ ಯಾರ್ ಸಾ ನೆನ್ಸದ ರೀತಿಲಿ ನಿಮ್ಮ ಮೇಲೆ ಬಾಣ ಬುಟ್ಟ್‌ದ್ ನಿಮ್ಮ ಈ ಸ್ತಿತಿಗೆ ತಂದದ್‌ಕ್ಕೆ ಅಂದ್ ಹೆಮ್ಮೆಪಟ್ಟಿತ್. ಕುರು ಸಾಮ್ರಾಜ್ಯಕ್ಕೆ ನೀತಿ ಪಾಟನ ಹೇಳ್ವ ಅಡಿಗಲ್ಲ್‌ನ ಹೊಡಿ ಮಾಡ್ದೇಂತ. ಈಗ ಅವಂಗೆ ತಾನ್ ಮಾಡ್ದ್ ತೊಪ್ಪೂಂತ ಗೊತ್ತಾವುಟು. ಅಂವ ಬುಟ್ಟ ಬಾಣನ ಅಂವನೇ ಹಿಂದಕ್ಕೆ ತೆಗ್ದ್‌ದ್, ನಿಮ್ಮ ಕಾಲ್‌ನ ಹಿಡ್ದ್‌ದ್, ಮಾಪು ಕೇಳಿ, ಪಾಪನ ಕಳ್ಕಂಬಕೆ ಬಂದುಟು."

ನಂಗೆ ಗಾಬೆರಿ ಆತ್. ಎಂಟ್ ದಿನಂದ ನಾ ಹೀಂಗೆ ಒಳೆ. ಈಗ ನಾ ಮಾಪು ಮಾಡ್ದು? ಶಿಖಂಡಿ ಎಲ್ಲಾದರ್ ಈ ಬಾಣನ ಎಳ್ದ್ ತೆಗ್ದರೆ, ನಾ ಸತ್ತೇ ಹೋನೆ. ಅಂಬೆ ಕಾಟಕ್ಕೆ ಹಾರಿಕೆ ಮುಂದೆ ಹೇಳ್ದ ಮಾತ್‌ಗ ನೆಂಪಾತ್. "ಮುಂದೆನ ಜಲ್ಮ ಒಂದ್ ಉಟ್ಟೂಂತ ಇದ್ದರೆ ನಾ ಗಂಡ್ ಅಲ್ಲದ, ಹೆಣ್ಣ್ ಅಲ್ಲದ ಜೂವ ಆಗಿ ನಿನ್ನ ಕೊಂದನೆ." ಆ ಅಂಬೆ ಈಗಸಿಕಂಡಿ ಆಗಿ ತಿರ್ಗಹುಟ್ಟಿಬಾತೋ? ನಾಸಿಖಂಡಿನದಿಟ್ಟಿಸಿನೋಡ್ದೆ. ಹೆಣ್ಮಕ್ಕಳಹಾಂಗೆಸೀರೆ ಉಟ್ಟುಟು. ಎದೆಗೆ ಕಬ್ಬಿಣದ ಎದೆ ಕಟ್ಟ್ ಕಟ್ಟಿಟು. ತಲೆಗೆ ಕಬ್ಬಿಣದ ಟೊಪ್ಪಿ ಇಸಿಟು. ಮೋರೆ ಹೆಣ್ಣ್‌ನಾಂಗೆ ಉಟ್ಟು. ಮೂಂಕ್‌ನ ಕೆಳಗೆ ತೆಳುಲಿ ಮಿಾಸೆ ಉಟ್ಟು. ಒರ್ಪ್ ಕೈಲಿ ಬಳೆಗ ಒಳೊ. ಹಣೆಲಿ ಬೊಟ್ಟ್‌ನ ಬದ್ಲ್‌ಗೆ ಮೂಂಕುನ ಕೊಡಿಂದಳೇ ಸುರು ಆದ ಕುಂಕುಮದ ಉದ್ದಾನೆ ನಾಮ ಉಟ್ಟು. ಇದ್ ಅಂಬೆ ಆಗಿ ಇರಿಕೆ ಸಾದ್ಯ ಇಲ್ಲೆ. ಮರು ಹುಟ್ಟೂಂತೇಳ್ದು ನೊಂಬಿಕೆ ಮಾತ್ರ. ಲೋಕಕ್ಕೆ ಒಳ್ಳೆದ್ ಮಾಡೋಕೂಂತ ಹೇಳಿಕಂಡ್‌ದ್ ಸೊಂತ ಸಾದನೆ ಮಾಡೋಕೂಂತೇಳ್ವ ಉದ್ದೇಸಂದ ಯಾರೋ ಒಬ್ಬ ದೊಡ್ಡ ಮ್ಯೊಂಸ ಮರು ಹುಟ್ಟೂಂತೇಳ್ದಕ್ಕೆ ಕಾರ್ಣ ಆಗುಟು. ಸತ್ತಂವಂಗೆ ಮುಂದೆನ ಜಲ್ಮ ಉಟ್ಟೂಂತೇಳ್ದು ಸತ್ತ ದುಕ್ಕನ ಸೈಸಿಕಂಬಕೆ ಮ್ಯೊಂಸರಿಗೆ ದೊಡ್ಡ ತಿಳ್ದ ಮ್ಯೊಂಸ ಒಬ್ಬ ನೀಡ್ದ ಸಮ್ದಾನ ಪಡ್ಸುವ ಮಾತ್. ನಮ್ಮ ಮೊನ್ಸ್‌ಗೆ ಹಕ್ಕಲೆ ಆದೋವು ಸಾಯಕಾಕನ ನಾವು ಹಾಂಗೇಂತ ಹೇಳಿಕಂಡ್ ಸಮ್ದಾನ ಮಾಡಿಕೊಂಬಕು. ಬೇರೆ ಏನ್ ಮಾಡಿಕೆ ಆದೆ? ಹುಟ್ಟಿದಂವ ಸತ್ತರೆ ಅಲ್ಲಿಗೆ ಮುಗ್ದೇ ಹೋತ್. ಸತ್ತೋವು ಮತ್ತೆ ಹುಟ್ಟುದುಲ್ಲೆ, ಮ್ಯೊಂಸರ ಪಡೆ ಎಸ್ಟ್ ತಡೆಗಳ ನೊಡುಲಿ ಬಾಳೋಕು. ನಮ್ಮ ಇಸ್ಟದ ಹಾಂಗೆ ಹುಟ್ಟಿಕೆ ಆದ್ಲೆ. ನಮ್ಮ

ಜೂವನ ನಾವೇ ತಕಂಬಕಲ್ಲದೆ, ನಮ್ಮ ಇಸ್ಟ್ ಬಂದ ಹಾಂಗೆ ಸಾಯಕೂ ಆದ್ಲೆ. ಹಾಂಗೆ ನೋಡ್ರೆ ಬೇಕ್‌ಂತೇಳಿಕನ ಸಾಯಕೆ ಆದೆ. ಅದ್ ಶಿಖಂಡಿನ ದಯೆಂದ. ಆದರೆ ಈ ಸಿಖಂಡಿನ ಕೈಯಿಂದಳೇ ನಂಗೆ ಸಾವು ಬಾಕೆ ಬೊತ್ತ್. ಅಂಬೆನ ಮಾತ್ ನಿಜ ಆಕೆ ಬೊತ್ತ್.

ಸಿಖಂಡಿನ ಬುಟ್ಟ್‌ದ್ ಇಲ್ಲಿ ಇರೋವರ್‍ಲಿ ನಾ ಯಾರ್‍ನ ಆಯ್ಕೆ ಮಾಡಕ್? ಯಾರ್‌ನ? ಈ ಕೃಷ್ಣಂದ ಬಾಣನ ಎಳ್ದ್ ತೆಗ್ಯಕೆ ಹೇಳಲಿನೋ? ಇಂವ ದೊಡ್ಡ ಮ್ಯೊಂಸ. ಇಂವಂದಾಗಿ ಪಾಂಡೋವು ಕಾಳಗಲಿ ಗೆದ್ದೋಳೊ. ಇಂವ ಕಂಸನ ದಬ್ಬಾಳಿಕೆನ ಪ್ರಸ್ನೆ ಮಾಡ್ದಂವ. ಹೆಣ್ಣ್‌ಗ ಇರ್‍ದು ಗಂಡ್‌ನ ಸುಕಕ್ಕಾಗಿನೇಂತೇಳಿ ಸೆರೆಮನೆಲಿ ನರಕಾಸುರ ಕೂಡಿ ಇಸಿದ ಹೆಣ್ಮಕ್ಕಳಿಗೆ ಬುಡ್ಗಡೆನ ದಾರಿ ತೋರ್‍ಸಿದಂವ. ಜಾತಿ ಬೇದ ಇಲ್ಲದೆ ಮ್ಯೊಂಸರ್ ಬೊದ್ಕೊಕೂಂತ ಹೇಳ್ದ ದೊಡ್ಡ ಮ್ಯೊಂಸ. “ವಸುದೈವ ಕುಟುಂಬಕಂ” ಇಡೀ ಲೋಕನೇ ನನ್ನ ಕುಟುಂಬಾಂತ ನೆಂದಂವ. ಯದುವಂಸದ ಕೃಷ್ಣ ತನ್ನ ವಂಸದ ಕುಂತಿನ ಮಕ್ಕಳ ಕಡೆ ನಿತ್ತದ್ ಸೊಂತ ಜನಕ್ಕೆ ಬೇದ ಮಾಡ್ದ ಹಾಂಗೆ ಆದ್ಲೆ. ಅಂವ ದರ್ಮದ ಕಡೆ ನಿತ್ತಂವ. ಅಂವ ಪಾಂಡೋವರ ಪ್ರೀತಿ ಮಾಡ್ದು ಜಾತಿನ ತೆಗ್ದ್ ಹಾಕಿದ ಗುರ್‍ತ. ಆದರ್‌ನೂ ಅಂವಂಗೆ ಯುದ್ದನ ತೊಪ್ಪಿಸಿಕೆ ಸಾದ್ಯ ಆಗ್ತಿತ್ತ್. ಅಂದ್ ರಾಜಿ ಪಂಚಾತಿಗೆಕೇಂತ ಹಸ್ತಿನಾವತಿಗೆ ಬಂದಂವ ಮಾತ್‌ಕತೆ ಮುರ್‍ಯಕಾಕನ ತುಂಬಿದ ಸಭೆಲಿ ಅಂವ ಕರ್ಣನ ಹುಟ್ಟುನ ಗುಟ್ಟು ಹೇಳಕಾಗಿತ್ತ್. ಕರ್ಣನ ಪಟ್ಟಲಿ ಕುದ್ರುಸುವ ಸಲಹೆ ಕೊಡಕಾಗಿತ್ತ್. ಆಗ ದುರ್ಯೋದನ ಅದರ ಉಪಾಯ ಇಲ್ಲದೆ ಒಪ್ಪುತ್ತಿತ್ತ್. ಹಾಂಗೆ ಮಾಡದ ಕೃಷ್ಣ ಹದ್ನೆಂಟ್ ದಿನಗಳ ನೆತ್ತೆರ್ ಹರ್‍ಸಿಕೆ ಕಾರ್‍ಣ ಆತ್. ದೊಡ್ಡ ಮ್ಯೊಂಸನ ಸಣ್ಣತನ. ಇಂವನ ಕೈಲಿ ನಾ ಸಾಯಕೆ ಆಗದ್.

ಯುಧಿಷ್ಠಿರನ ಕೈಲಿ ಸಾಯಮೊನೋ? ಅಂವ ಮುಂದೆ ಪಟ್ಟಲಿ ಕುದ್ರಂವ. ವೇದ ಸಾಸ್ತ್ರವ ಕಲ್ತ್‌ದ್ ಧರ್ಮರಾಯಾಂತ ಹೆಸ್ರ್ ಪಡ್ದಂವ. ಆದರೆ ಕಾರ್‍ಣ ಏನೇ ಇರ್‍ಲಿ ಮೊನ್ನೆ ಸುಳ್ಳು ಹೇಳಿ ಗುರು ದ್ರೋಣರ್ ಸಾಯಕೆ ಕಾರ್‍ಣ ಆತ್. ಗುರುನ ಕೊಂದ ಪಾಪಲಿ ಅಂವಂಗೂ ಪಾಲುಟ್ಟು. ಅಂವಂದ್ ಜೂಜಾಟಲಿ ಇಂದ್ರಪ್ರಸ್ಥನ ಕಳ್ಕಂಡ ಕೈ. ದ್ರೌಪದಿನ ಸೀರೆ ಎಳ್ಯಕೆ ಕಾರ್‍ಣ ಆದ ಕೈ. ಪಾಂಡೋವರ ಅರ್ತ ಇಲ್ಲದ ಕಾಡ್‌ನ ವಾಸ, ತಲೆ ಮರ್‍ಸಿಕಂಡ್ ಇದ್ದ ಜೂವನಕ್ಕೆ ಕಾರ್‍ಣ ಆದ ಕೈ. ಅಂವನ ಚಟನೇ ಮಹಾಭಾರತ ಯುದ್ದಕ್ಕೆ ಕಾರ್‍ಣ. ಅಂವನ ಜೂಜಾಟದ ಪಾಪಂದ ಮುಣ್‌ಂಗಿದ ಕೈಯಿಂದ ನಾ ಸಾಯಕೆ ಆಗದ್.

ಇಡೀ ಆರ್ಯಾವರ್ತಲೇ ದೊಡ್ಡ ಬಲಸಾಲಿ, ಮಲ್ಲ ಭೀಮಸೇನಂದ ಬಾಣನ ಎಳ್ದ್ ತೆಗ್ಸಲಿನೋ? ಜಗಜಟ್ಟಿ ಆದರುನೂ ಯುಧಿಷ್ಠಿರನ ಕೆಟ್ಟ ಕೆಲ್ಸಗಳ ತಡ್ಯದೆ ಗಂಡ್‌ಸ್‌ತನ ಇಲ್ಲದಂವನಾಂಗೆ ಬೊದ್ಕಿದಂವ. ಅಂದ್ ಮೋಸದ ಪಗಡೆ ಆಟ ನಡ್ಯದಾಂಗೆ ತಡ್ಯಕೆ ಇಂವಂದಾಗ್ತಿತ್ತ್. ಅಣ್ಣ ಜೂಜುಲಿ ಇಂದ್ರಪ್ರಸ್ಥನ, ತಮ್ಮಂದರ, ಸೊಂತ ಅಂವನನೇ ಮತ್ತೆ ಅವರ ಐದ್ ಜನಂಗಳ ಹೆಣ್ಣ್ ದ್ರೌಪದಿನ ಪಂತಕ್ಕೆ ಇಸಿಕಾಕನ ಅದರ ಪ್ರಸ್ನೆ

ಮಾಡದಂವ "ನೀನೂನಿನ್ನ ಜೂಜಾಟನೂ ಹಾಳಾಗಿ ಹೋಗಲಿ. ನಾನಿನ್ನಪಂತಕ್ಕೆ ಇಲ್ಲೆ"– ಎಂತ ಇಂವ ತಮ್ಮಂದರ ಒಟ್ಟಿಗೆ ದ್ರೌಪದಿನ ಸೈತ ಇಂದ್ರಪ್ರಸ್ತಕ್ಕೆ ಬಂದ್ ಬುಡ್ತಿದ್ದರೆ ಈ ಯುದ್ಧ ನಡ್ಯತಿತ್ತೆ. ಹೆಣ್ಣಿನ ಸೀರೆನ ಬೇರೆ ಗಂಡ್ ಒಬ್ಬ ತನ್ನ ಕಣ್ಣೆದ್‌ರ್‌ನೇ ಎಳ್ಯಕಾಕನ ಸುಮ್ಮಂಗಿತ್ತ್. ಇಂವ ಗಂಡ್‌ಸ್ತನ ಇಲ್ಲದಂವ ಅಲ್ಲದೆ ಮತ್ತೆಂತದ್? ಯಾಗೊಳೋ ಮಾಡ್ದ ಸಪತನ ನರಮ್ಯೊಂಸರ್ ಮಾಡದ ರೀತಿಲಿ ಮಾಡಿ ಹಗೆ ತೀರ್ಸಿಕಂಡಂವ. ಇಂವಂದ್ ದುಶ್ಯಾಸನನ ನೆತ್ತೆರ್‌ನ ಕುಡ್ದ ಕೈ. ದುಶ್ಯಾಸನನ ಕರ್‍ಳ್ನ ಎಳ್ದೆಳ್ದ್ ನೋಡಿಕೆ ಹೆದ್ರಿಕೆ ಆಗುವಾಂಗೆ ದ್ರೌಪದಿಗೆ ಮುಡ್ಸಿದ ಕೈ. ದುರ್ಯೋಧನಂಗೆ ರಾಜ್ಯ ಇಲ್ಲದಾಂಗೆ ಮಾಡ್ದ ಕೈ. ಇಂವನ ಕೈಯಿಂದ ನಾ ಸಾಯಕೆ ಆಗದ್.

ಬಿಲ್ ವಿದ್ಯೆಲಿ ಹೆಸ್ರ್ ಪಡ್ದ ಅರ್ಜುನನ ಕೈಯಿಂದ ನಾ ಸಾವುನ ಬಾವಾಂಗೆ ಮಾಡ್ದೋ? ಇಂವ ಸಾ ಭೀಮನಾಂಗೆ ಕಣ್ಣೆದ್‌ರ್ ನಡೆವ ಆನ್ನೇಯನ ತಡ್ಯದೆ ಸುಮ್ಮಂಗಿದ್ದಂವ. ಅಂದ್ ದ್ರೌಪದಿನ ಸೀರೆ ಎಳ್ಯಕಾಕನ ಇಂವನ ಬಿಲ್ಲ್ ವಿದ್ಯೆ ಉಪ್ಯೋಗಕ್ಕೆ ಬಾತ್ಲೆ. ಒಂದ್ ಅರ್ತಲಿ ಹೇಳಿರೆ ಇಂವ ಸಾ ಗಂಡ್‌ಸ್ತನ ಇಲ್ಲದಂವನೇ. ಒಂದು ವೊರ್ಸ ಇಡೀ ಬ್ರಹನ್ನಳೆನ ವೇಸಲಿ ವಿರಾಟನಗರಲಿದ್ದ ಗಣಿಕೆಯರ ನೊಡುಲಿ ಗಂಡ್‌ತನ ಇಲ್ಲದಂವನಾಂಗೆ ಇದ್ದಂವ. ಸಿಕಂಡಿನಾಂಗೆ ಇರ್‍ವ ಇಂವನ ಕೈಂದಳೂ ನಂಗೆ ಸಾವು ಬಾಕೆ ಆಗದ್. ನಕುಲ, ಸಹದೇವರ್ ಒಳೊ. ಇವರ್‌ಲಿ ಒಬ್ಬನ ಹಕ್ಕಲೆ ಹೇಳಿ ನನ್ನ ಬಾಣನ ಕೀಳಿಕೆ ಹೇಳೊಕೋ? ಇವು ಸಾ ಪ್ರೋಜನಕ್ಕೆ ಬಾರದೋವು. ದ್ರೌಪದಿನ ಸೀರೆ ಎಳ್ಯಕನ ಸುಮ್ಮಂಗೆ ನಿತ್ತ್ ನೋಡ್ದೋವು. ಹನ್ನೆರ್ಡ್ ವೊರ್ಸದ ಕಾಡ್‌ನ ವಾಸ, ಒಂದ್ ವೊರ್ಸದ ತಲೆ ಮರ್‍ಸಿ ಕಂಡಿರಿಕನ ತುಟಿ ಎರ್ಡ್ ಮಾಡದೆ ಸೈಸಿಕೊಂಡಿದೊವು. ಏನ್ ಪುರ್ಸಾರ್ತ ಸಾದ್ಸಿದೊ? ಸೊಂತ ಬುದ್ದಿನೇ ಇಲ್ಲದ ನಪುಂಸಕ ಬಾಳ್ ಇವರ್ದ್. ಇವರ ಕೈಲಿ ನಾ ಸಾಯಕಿಲ್ಲೆ.

ಇನ್ನ್ ಒಳ್ದಿರ್‍ದು ಅದ್ ಮಾತ್ರ ದ್ರೌಪದಿ! ಕುರುಸಾಮ್ರಾಜ್ಯಲಿ ಬಾರಿ ಹೆಚ್ಚ್‌ನ ಆನ್ನೇಯಕ್ಕೆ ಒಳಗಾದೋಳ್. ನನ್ನ ಹೆತ್ತವ್ವ ಗಂಗಾದೇವಿ ಉಪ್ಪುಕಾರ ಇಲ್ಲದ ಈ ಜೂವನಕ್ಕೆ ರೋಸಿ ಹೋಗಿ ಹಿಮಾಲಯ ಕಡೆಗೆ ನಡ್ತ್. ಕುರು ಸಾಮ್ರಾಜ್ಯದ ಅವ್ನಾನಕ್ಕೆ ಮೂರ್ತ ಇಸಿದ ಗಳ್ಗೆ ಅದ್. ಅದರ ಸನ್ನೇಸಿನಿ ಆಕೂಂತ ಬಯ್ಸುದವ್ವ ಮೊದುವೆ ಆದ್ ಅಪ್ಪಂದ್ ತೊಪ್ಪು. ಅಪ್ಪ ಸತ್ಯವತಿನ ಇಸ್ಟಪಟ್ಟತ್. ನಾ ಸಪತ ಬಾಸೆ ಕೊಟ್ಟ್ ಅದರ ಕರ್‍ಕಂಡ್ ಬಂದ್ ಅಪ್ಪಂಗೆ ಮೊದುವೆ ಮಾಡ್ಸಿದೆ. ಅದ್ ಪರಾಶರಮುನಿಗೆ ತನ್ನ ಎಲ್ಲಾ ಮೊನ್ಸ್‌ನ ಕೊಟ್ಟವ್ಳು. ಹಸ್ತಿನಾವತಿನ ರಾಣಿ ಪಟ್ಟನ ಒಪ್ಪಿದ್ ಬಾತಲೇ ಅದರ್‍ದನೂ ತೊಪ್ಪೇ? ಅದ್ ಸಾಲದ್‌ಂತ ನನ್ನ ಕಾಶಿಗೆ ಕಳ್ಸಿ ಮೂರ್‍ಜನ ಅರ್‍ಸು ಗೂಡೆಗಳ ಅದರ ಮಂಙಂಗಾಗಿ ತಾಕೆ ಹೇಳ್ದ್. ಅನರ್ತಗಳ ಸರ್‍ಮಾಲೆಗೇ ಆಕೆ ಕಾರ್‍ಣ ಆತ್. ಅಂಬೆ ಕಾಶಿಲೇ ಸಾಲ್ವ ಭೂಪತಿನ ಮೇಲೆ ಇದ್ದ ಪ್ರೀತಿನ ನನ್ನ ಒಟ್ಟಿಗೆ ಹೇಳ್ತಿದ್ದರೆ, ನಾ ಅದರ ಬುಟ್ಟ್ ಬುಡ್ತಿದ್ದೆ. ಅದುನೂ ತೊಪ್ಪು ಮಾಡಿಟು. ಈ ಮೂರ್ ಜನ ಹೆಣ್ಮಕ್ಕಳ ತೊಪ್ಪುಗ ಕುರು ಸಾಮ್ರಾಜ್ಯ ಅಳ್ಯಕೆ ಕಾರ್‍ಣ ಆತ್.

ಆದರೆ ಕುರು ಸಾಮ್ರಾಜ್ಯ ಹಾಳಾಕೆ ನೇರಲಿ ಕಾರ್ಣ ಆದೋಳು ಇದೇ ಈ ದ್ರೌಪದಿ. ಇದರ ಸೀರೆ ಎಳ್ಯದೆ ಇರ್ತಿದ್ದರೆ ಯುದ್ದನೇ ನೆಡ್ಯತಿತ್ಲೆ. ಇದ್ ಐದ್ ಜನ ಪಾಂಡೋವರ ಹೆಣ್ಣ್. ಯುಧಿಷ್ಠಿರ ಶಿಬಿರಾಜನ ಮಗಳ್ ದೇವಕಿನ ಮೊದ್ವೆ ಆತ್. ಹಿಡಿಂಬೆ ಮತ್ತೆ ಜಲಂಧರೆ ಭೀಮಸೇನನ ಹೆಣ್ಣ್‌ಗ. ಅರ್ಜುನ ಉಲೂಪಿ, ಚಿತ್ರಾಂಗದೆ ಮತ್ತೆ ಸುಬದ್ರೆನ ಗಂಡ. ಶಿಶುಪಾಲನ ಮಗ ರೇಣುಮತಿ ನಕುಲನ ಹೆಣ್ಣ್. ಸಹದೇವ ಶಲ್ಯನ ಮಗ ವಿಜಯೆ ಮತ್ತೆ ಭಾನುರಾಜನ ಮಗ ಭಾನುಮತಿನ ಗಂಡ. ಇಂತಾ ಪಾಂಡೋವರ ಒಂದ್ ಬೊಳ್ಳಿಲಿ ಕಟ್ಟಿ ಹಾಕಿದ್ ದ್ರೌಪದಿ.

ಕುಂತಿ ಬುದ್ದಿವೊಂತೆ, ಈ ಸುರಸುಂದರಿ ದ್ರೌಪದಿ ಅರ್ಜುನ ಒಬ್ಬನ ಮೊದ್ವೆ ಆದರೆ, ಪಾಂಡೋವು ಅದ್ಕಾಗಿ ಕಚ್ಚಾಡುವೋಂತ ಅದರ ಐದ್ ಜನಕ್ಕೂ ಮೊದ್ವೆ ಮಾಡ್ಸಿತ್. ಅದ್ ಒಂದ್ ಇಲ್ಲದೆ ಇರ್ತಿದ್ದರೆ ಈ ಪಾಂಡೋವು ತಮ್ಮ ತಮ್ಮ ಹೆಣ್ಣ್‌ಗಳೊಟ್ಟಿಗೆ ಮೈ ಮರ್ತ್, ಸುಕ ಬೋಗಲಿ ಕುಸಿಲಿ ಇರ್ತಿದ್ದೊ. ಜೂಜಾಟ ಆಡಿಕೊಂಡೋ, ಮುರ್ಗ ಬೇಟೆ ಮಾಡಿಕೊಂಡೋ ಹಾಯಾಗಿ ಇರ್ತಿದ್ದೊ. ದ್ರೌಪದಿ ಐದ್ ಜನರ ಮೊದ್ವೆ ಆಗಿ ಅವ್ಕೆ ನೆರ್ಳ್ ಆಗಿ ಇತ್ತ್. ಅವರ್ಲಿ ಬೇದ ಬಾವ ಮೂಡದಾಂಗೆ ಜಾಗ್ರತೆ ಮಾಡ್ತಿತ್ತ್. ಕೌರವರ ದ್ವೇಸದ ಕಿಚ್ಚಿಗೆ ತುಪ್ಪ ಹಾಕಿಕಂಡ್ ಆ ಕಿಚ್ಚಿ ಕೆಡದಾಂಗೆ ನೋಡ್ತಿತ್ತ್. ನನ್ನ ಅವ್ವ ಗಂಗಾದೇವಿನಾಂಗೆ ಬಂದ ಸವಾಲ್‌ಗೆ ಬೆನ್ನ್ ಹಾಕಿ ಓಡಿ ಹೋತ್ಲೆ. ಸತ್ಯವತಿನಾಂಗೆ ಬಂದ ಪರಿಸ್ಥಿತಿಗೆ ಹೊಂದಿಕಂಡ್ ಹೋತ್ಲೆ. ಅಂಬೆನ ಹಾಂಗೆ ಯಾರ್ನ ಸಾ ಇಕ್ಕಟ್ಟ್‌ಲಿ ಸಿಕ್ಕಿಸಿತ್ಲೆ. ದರ್ಮ ಮಾರ್ಗಲೇ ನಡ್ದ್ ಗುರಿ ಸಾದಿಸಿತ್. ಇದ್ ನಿಜಲಿ ಗಂಡಂಗೆ ತಕ್ಕ ಹೆಣ್ಣ್. ಇದೇ ಇಡೀ ಲೋಕಲಿರ್ವ ಎಲ್ಲಾ ಹೆಣಕ್ಕಳ್‌ಗೆ ಮಾದೆರಿ. ಇದರ ಸೀರೆ ಎಳೆವ ಕಾಲಲಿ ಸುಮ್ಮಂಗೆ ಕುದ್ದ ನಾ ಈ ದೊಡ್ಡ ಕಾಳಗಕ್ಕೆ ಕಾರ್ಣಪುರ್ಸ ಆದೆ. ನನ್ನ ಪಾಪಕ್ಕೆ ಈಗ ಪರ್ಯಾರ ಆಕು.

ನಾ ಗಟ್ಟಿ ನಿರ್ದಾರ ಮಾಡಿ, ಮೆತ್ತಂಗೆನ ಸೊರಲಿ, "ಅವ್ವಾ ದ್ರೌಪದಿ, ಒಮ್ಮೆ ಇಲ್ಲಿಗೆಬಂದಿಯನಾ ತಾಯಿ? ಎದೆ ತುಂಬಾ ಬೇನೆ ಆದೆ. ಈ ಬಾಣನ ನಿದಾನಲಿ ಕಿತ್ತ್ ತೆಗ್ದಿಯನಾ? ಗಂಡ್‌ಗಳ್‌ಲಿ ಹೇಳ್ರೆ ಅವು ಒರ್ಟ್‌ಲಿ ಕಿತ್ತ್‌ದ್ ಬೇನೆನ ಹೆಚ್ಚ್ ಮಾಡುವೊ. ಅದ್ಕೇ ನಿನ್ನಲ್ಲಿ ಹೇಳ್ದ್. ನಿದಾನಲಿ ಬಾಣನ ಕಿತ್ತ್ ನನ್ನನ್ನ ಈ ಬೇನೆಂದ ಬುಡ್ಗಡೆಗೊಳ್ಸಿಯನೋ?"

ದ್ರೌಪದಿ ಹಕ್ಕಲೆ ಬಾತ್. "ಒಂದ್‌ನಿಮ್ಸ ತಡಿ ಅವ್ವಾ, ಇಸ್ಟ್‌ದಿನ ರಣಬೇರಿ, ಸಾವು, ನೋವುನ ಸದ್ದ್ ಕೇಳಿ ಕೇಳಿ ಈ ಮುದಿ ಜೂವ ನೆಮ್ಮದಿನ ಕಳ್ಕೊಂಡುಟ್ಟು. ಈಗ ಕೆಬಿಗೆ ಒಳ್ಳೆ ಸುದ್ದಿನ ಕೇಳೊಕೂಂತ ಆದೆ. ಕೃಷ್ಣಾ ಒಮ್ಮೆ ನಿನ್ನ ಕೊಳಲ್‌ನ ಊದಿಯನಾ? ಅದರ ಕೇಳಿ ಮೈ ಮರ್ಯೋಕೂಂತ ಒಳೆ. ಒಂದೇ ಒಂದು ಸಲ, ಇಲ್ಲೇಂತ ಹೇಳ್ಬಡ."

ಕೃಷ್ಣಂಗೆ ನನ್ನ ಮೊನ್ಸ್ ಅರ್ತ ಆತ್. ಅಂವ ಕೊಳಲ್‌ನ ಹೊರಗೆ ತೆಗ್ತ್. ಮೋಹನ ರಾಗಲಿ ಗಟ್ಟಿಲಿ ಕೊಳಲ್‌ನ ಉರ್ಗಿತ್. ನಾ ಮೆಚ್ಚಿದ ರಾಗ ಅದ್. ನಾ ಕಣ್ಣ್‌ನ ಮುಚ್ಚಿಕಂಡೆ. ಎದ್ರ್ ಮಂಜ್ ಮಸ್ಕಿದ ಒಂದು ಜಾಗೆ ಕಂಡತ್. ಅಲ್ಲಿಂದ ಅಲೆಮಾರಿಗಳ ತಂಡಗ

ಹೊರ್ಟೊ. ಕೆಲವು ಜನಂಗ ಪಡು ದಿಕ್ಕ್‌ಗೆ, ಇನ್ನ್ ಕೆಲವು ಜನಂಗ ತೆಂಕ್ ದಿಕ್ಕ್‌ಗೆ ಹೊರ್ಟೊ. ನದಿನ ಹಕ್ಕಲೆ ವಾಸ. ಕೆಲ್ಸ ದನಂಗಳ ಮೇಸುದು. ಬೇಜಾರ ಕಳ್ಯಕೆ ಹಾಡ್‌ಗ, ಕೊಣ್ತಗ, ಯಾರ್ ಕಂಡ್ ಹಿಡ್ದನೋ ಈ ಕೊಳಲ್‌ನ? ಯಾರ್ ಅದರ್ಲಿ ಏಳ್ ಸೊರಗಳ ನುಡ್ಸಿದೊನೋ? ಬಡ್ಗ್‌ಂದ, ತೆಂಕ್‌ಗೆ ಬಂದೋವು, ಸಿಂಧೂ ನದಿ ಬೈಲಿಲಿ ಇದ್ದ ಕಾಡ್ ಮ್ಯೊಂಸರ ಗೆದ್ದೊ. ಗಂಗಾನದಿನ ಬೈಲ್‌ನ ಉದಾಕೂ ಹಬ್ಬಿಕಂಡೊ. ದನ ಮೇಸುದರ ಒಟ್ಟಿಗೆ, ಬೇಸಾಯನೂ ಮಾಡಿಕಂಡ್ ಅಲ್ಲೇ ನೆಲೆನಿಂತೊ. ಆ ಕಡೆ ಪಡುದಿಕ್ಕ್‌ಗೆ ಹೋದೋವು ಏನ್ ಮಾಡ್ವೆನೋ? ಆರ್ಯ ಕುಲನೇ ದೊಡ್ಡದ್‌ಂತೇಳ್ವ ಬ್ರಮೆಲಿ ಯಾವ ದೊಡ್ಡ ಕಾಳಗಕ್ಕೊ, ಯಾರ ಕೊಲ್ಲಿಕೋ ಕಾರ್‍ಣ ಆದವೆನೋ?

ಅಲ್ದ್‌ಕಂಡ್ ಬಂದ ಆರ್ಯರ್ ಗಂಗಾನದಿ ಉದಾಕೂ ನೆಲೆನಿತ್ತ್‌ಕಂಡ್ ಇದ್ದ ಹಾಂಗೆ ವರ್ಣದ ಕಟ್ಟ್‌ಪಾಡ್ ಗಟ್ಟಿ ಆತ್. ಜಾತಿಗ ಹುಟ್ಟಿಕೊಂಡೊ. ಆಡಳ್ತ ಮಾಡಿಕಾಗಿ ಅರಸೊತ್ತಿಗೆ. ಆರ್ಯರ ಸಮಾಜ ಕಂಟಕರಾಗಿ ಮಾಡ್ದೇ ಇದ್. ಇದೀಗ ದೊಡ್ಡ ಕಾಳಗಕ್ಕೂ ಕಾರ್‍ಣ ಆತ್. ಕುಲ, ವರ್ಣ, ದೊಡ್ಡಸ್ತಿಕೆನ ಅಜ್ಞಾನ, ಜಾತಿ ದೊಡ್ಡದ್‌ಂತೇಳ್ವ ಹಂಕಾರ ಅರ್ಸೊತ್ತಿಗೆನ ಅಧಿಕಾರದ ಮದ-ಇದರ್‌ಂದಾಗಿ ದುರ್ಯೋಧನ ತಾನ್ ಸಾ ಸತ್ತತ್, ಕುರು ಸಾಮ್ರಾಜ್ಯದ ಅವ್ಸಾನಕ್ಕೂ ಕಾರ್‍ಣ ಆತ್. ಆದರೆ ಈ ಕೃಷ್ಣ? ಇಂವ ಆರ್ಯರ ಬೇರ್‍ನ ಗುರ್ತಾದ ಕೊಳಳ್‌ನ ಎಂದ್‌ಗೂ ಬುಟ್ಟತ್ಲೆ.

ನಾ ಏಕೆ ಈ ಹೊತ್ತ್‌ಲಿ ಕೃಷ್ಣನ ಕೊಳಲ್‌ನ ಗಾಯನ ಕೇಳಿಕೆ ಬಯ್ಸಿದೆ? ಅದ್ ಅವ್ವನ ಜೋಗುಳಂದಾಗೆ ಕೇಳ್ದ್. ದೇಸ, ಕಾಲನ ಮರ್ಸಿ, ಮೇಲ್-ಕೀಳ್‌ನ ತೊಡ್ದ್ ಹಾಕಿ ನನ್ನನ ಮೂಲಸ್ತಾನಕ್ಕೆ ತಕಂಡೋದೆ. ಬಣ್ಣ, ಜಾತಿ, ಅರ್ಸೊತ್ತಿಗೆ ಇಲ್ಲದ ಮೇಪತತನಕ್ಕೆ, ಬೇರ್‌ನ ಹುಡ್ಕಿಕೆ. ಈ ಬಾಗ್ಯ ಯಾರಿಗೆ ಸಿಕ್ಕಿದೆ? ಸಾಯುವ ಗಳ್ಗೆಲಿ ನಮ್ಮ ಬೇರ್‌ಗಳ ದರ್ಸನ, ನಾವು ಬಯ್ಸಿದಾಂಗೆ ಸಾಯುದು !!

ಈ ದನಿಗೆ ಎಸ್ಟ್ ಸಕ್ತಿ ಉಟ್ಟು. ಜೂವನದ ಎಲ್ಲಾ ಬೇನೆಗಳ ಈ ಮೇಪತ ಹೈದ ಕೃಷ್ಣ ತನ್ನ ಕೊಳಲ್‌ನ ದನಿಂದ ಕಳ್ದದೆ. ದ್ರೌಪದಿನ ಮಾನ ಕಾದಂವ. ಕೊಳಲ್‌ನ ದನಿನ ಕೇಳಿದ್, ಅನ್ಬವಿಸದಂವ ಬೇನೆನ ಹೇಂಗೆ ಕಳ್ಯವೋ? ಲೋಕಲಿರುವ ಎಂದ್ ಸಾ ಅಳ್ಯದ ಸತ್ಯಗ ಮೂರು. ಸಕ್ತಿ, ಬೊಳ್ಪು, ಮತ್ತೆ ದನಿ. ಇದರ ಗುರ್ತಿಸಿಕಂಡ್ ನಮ್ಮ ಏಳಿಗೆ ಆಗಿ ಬಳ್ಸಿಕಂಬೊದೇ ಸದ್ಗತಿ. ಇರ್ಲಿ, ಈ ಕೆಬಿಗೆ ಇಂಪಾಗಿ ಕೇಳುವ ಕೊಳಲ್‌ನ ದನಿ ಹೀಂಗೇ ಇರ್ಲಿ. ಇನ್ನಸ್ಟ್, ಮತ್ತಸ್ಟ್ ಕೇಳಲಿ.

ಎಸ್ಟ್ ಹೊತ್ತಾತೋ? ಕೃಷ್ಣ ನಿದಾನಲಿ ಕೊಳಲ್‌ನ ಗಾಯನ ನಿಲ್ಸಿತ್. ಕೆಬಿಗೆ ಇಂಪಾಗಿ ಕೇಳುವ ಆ ಲೋಕ ಮರೆ ಆಗಿ ನಾ ಕಣ್ಣ್ ಬುಟ್ಟ್ ಕೃಷ್ಣನ ನೋಡ್ದೆ. ಅಕೆರಿನ ನನ್ನ ಆಸೆನ ಈಡೇರ್ಸಿದಕ್ಕೆ ನಾ ಅಂವಂಗೆ ಕಣ್ಣ್‌ಲೇ ನಮಸ್ಕಾರ ಹೇಳ್ದೆ. ಕೃಷ್ಣ ನೆಗಾಡ್ತ್. ನಾ ದ್ರೌಪದಿನ ಹಕ್ಕಲೆಗ ಬರುವಾಂಗೆ ಸನ್ನೆ ಮಾಡ್ದೆ. ದ್ರೌಪದಿ ನಿದಾನಲಿ ನಡ್ದ್ ಬಂದ್ ನನ್ನ ಕಾಲ್‌ಗೆ ಅಡ್ಡ್ ಬೀತ್. ಅಲ್ಲಾಡಿಕಂಡ್ ಇದ್ದ ಬಾಣನ ಎಳ್ದ್ ತೆಗ್ಯಕೆ ಕೈ ಹಾಕಿತ್.

*****

# ತರ್ಜಿಮೆ ಮಾಡ್ದೋವರ ಪರ್ಚಯ

ಜನ ಸೇವೆಲಿನೂ, ರಾಜಕೀಯಲಿನೂ ಹೆಸ್ರ್ ಪಡ್ದ ಎಂ.ಜಿ. ಕಾವೇರಮ್ಮನೊವು ಸಾವುಕಾರ್ ಸೂಂತೋಡು ಅಪ್ಪಣ್ಣ ಗೌಡ ಮತ್ತೆ ಮಳಿ ಮುದ್ದಮ್ಮ ದಂಪತಿಗಳ ಮೂರ್‌ನೇ ಮಗ ಆಗಿ 1939 ಜುಲೈ 14ರ್ಲಿ ಸುಳ್ಯದ ಗುರುಂಪು ಎಂಬಲ್ಲಿ ಹುಟ್ಟಿದೊ. ಹಯರ್ ಎಲಿಮೆಂಟರಿ ಸಾಲೆ ಸುಳ್ಯ, ಬೋರ್ಡ್ ಹೈಸ್ಕೂಲ್ ಸುಳ್ಯ ಮತ್ತೆ ಸೈಂಟ್ ಫಿಲೋಮಿನಾಸ್ ಕೋಲೇಜ್ ಮೈಸೂರ್‌ಲಿ ಓದಿ ಪದವಿ ಪೂರ್ವ ಶಿಕ್ಷಣ ಪಡ್ದೋವು. ಹೈಸ್ಕೂಲ್ ಮುಖ್ಯೋಪಾದ್ಯಾಯ ಆಗಿದ್ದ ಮಾವಜಿ ಮನೆತನದ ದಿ। ಐತಪ್ಪ ಗೌಡರ ಹಿರಿ ಮಂಙ ಮಾವಜಿ ಗೋಪಾಲಕೃಷ್ಣರ ಜತೆಲಿ ಮೊದ್ವೆ ಆಗಿ ಸಂಸಾರಕ್ಕೆ ಕಾಲಿರ್ಸಿದ ಕಾವೇರಮ್ಮನೊವ್ಕೆ, ಒಬ್ಬ ಮಂಙ, ಮೂರು ಜನ ಮಗಕ್ಕ, ಎಂಟ್ ಜನ ಪಿಳ್ಳಿಕ, ಒಬ್ಬ ಮರಿ ಪಿಳ್ಳಿ ಒಳೊ. ಈ ಎಂಬತ್ತರ ಇಳಿ ವಯಸ್ಸ್‌ಲಿನೂ ಜೂವನದ ಉತ್ಸಾಹನ ಕಳ್ಕಣದೆ ತನ್ನನ ಸಾಹಿತ್ಯ ಕೃಷಿಲಿ ತೊಡ್ಗಿಸಿಕಂಡ ಆದರ್ಸ ಗೃಹಿಣಿ ಇವು.

1955ರ್‌ಂದ 1990ರ ಮುಟ್ಟ ಸುಳ್ಯ ಮಹಿಳಾ ಸಮಾಜದ ಎಲ್ಲಾ ಏಳ್ಗೆಗಾಗಿ ದುಡ್ದ್ ತಮ್ಮನ ಜನಸೇವೆಲಿ ತೊಡ್ಗಿಸಿಕೊಂಡಿದ್ದೋವು. 1968ರ್‌ಂದ ತಮ್ಮನ ರಾಜಕೀಯಲಿ ತೊಡ್ಗಿಸಿಕಂಡ ಕಾವೇರಮ್ಮನೊವು ಸುಳ್ಯ ತಾಲೂಕ್‌ಲಿ ಜನ ಮೆಚ್ಚಿದ ಮಹಿಳೆ ಆಗಿ ಮೆರ್ದೋವು. ಅವ್ಕೆ ಸಮಾಜ ಸೇವೆಲಿ ಸಂಘ-ಸಂಸ್ಥೆಂದ, ಕನ್ನಡ ಸಾಹಿತ್ಯ ಪರಿಷತ್‌ಂದ ಹಲವು ಪ್ರಶಸ್ತಿಗ ಸಿಕ್ಕ್ಯೊಳೊ. ತಮ್ಮ ಇಳಿವಯಸ್‌ಲಿ ಸಾಹಿತ್ಯ ಸೇವೆಗೆ ಇಳ್ದ ಇವು ಅದರ್ಲಿ ಸಾ ಹೆಸ್ರ್ ಪಡ್ದ್, ಕರ್ನಾಟಕ ಅರೆಬಾಸೆ ಸಾಹಿತ್ಯ ಅಕಾಡೆಮಿಂದ ಅರೆಬಾಸೆ ಸಾಹಿತ್ಯಲಿ ಗೌರವ ಪ್ರಶಸ್ತಿ ಪಡ್ದೊಳೊ. ಇವರ ಅರೆಬಾಸೆ ಕೃತಿಗ "ಸರ್‍ಮಾಲೆ" (ಕವನ ಸಂಕಲನ), ಅಜ್ಜಪ್ಪನ ಕತಾಬಂಡಾರಂದ ಹೆರ್ಕಿದ ಕತೆಗ(ಪಂಡ್‌ನ ಅಜ್ಜಿ ಕತೆಗಳ ಸಂಗ್ರಹ), "ನೆಂಪುಗಳ ಬಂಡಾರ"(ಬಾಲ್ಯದ ಕತೆಗ), ಅರೆಬಾಸೆ ಅಕಾಡೆಮಿಯೊವು ಪ್ರಕಟ ಮಾಡ್ಯೋಳೊ. 'ಬೊದ್ಕ್' ಕಾದಂಬರಿ ಈಗ ಪ್ರಕಟ ಮಾಡಿಕೆ ಆಯ್ಕೆ ಮಾಡ್ಯೊಳೊ. 'ಉಜ್ವಾಲ್'(ಕವನಸಂಕಲನ) ಪ್ರಕಟಣೆಗೆ ಬಾಕಿ ಉಟ್ಟು. ಕನ್ನಡಲಿ 'ಒಳಹರಿವು' (ಕವನಸಂಕಲನ) ಪ್ರಕಟ ಆವುಟು. ಈಗ ಡಾ। ಬಿ. ಪ್ರಭಾಕರ ಶಿಶಿಲರ 'ಪುಂಸ್ತ್ರೀ' ಕಾದಂಬರಿನ ಅರೆಬಾಸೆಲಿ ತರ್ಜಿಮೆ ಮಾಡ್ಯೊಳೊ. ಇದ್ ಓದೋವ್ಕೆ ಹಿಡ್ಸಿರೆ ಇವು ಬರ್ದದ್‌ಕೆ ಸಾರ್ತಕ ಆದೆ.

# ಪುಂಸ್ತ್ರೀ - ಕಾದಂಬರಿನ ಮೂಲ ಲೇಖಕರ ಪರ್ಚಯ

ಡಾ| ಬಿ.ಪ್ರಭಾಕರ ಶಿಶಿಲ 1978ರ್ಂದ 2013ರ ಮುಟ್ಟ ಸುಳ್ಯದ ನೆಹರೂ ಮೆಮೋರಿಯಲ್ ಕಾಲೇಜ್‌ಲಿ ಕೆಲ್ಸ ಮಾಡಿ, ಮುಕ್ಯ ಗುರುಗ(ಪ್ರಾಚಾರ್ಯರ್) ಆಗಿ, ಪಿಂಚಣಿ ಪಡ್ದ ಕನ್ನಡದ ದೊಡ್ಡ ಕಾದಂಬರಿಕಾರರ್. ಇಲ್ಲಿಗೆ ಮುಟ್ಟ ಕನ್ನಡಲಿ ಎಂಟ್ ಕಾದಂಬರಿ, ಆರ್ ಕತಾ ಸಂಕಲನ, ಸೇರಿ ಒಟ್ಟ್ ಮೂವತ್ತೈದ್ ಸಾಹಿತ್ಯ ಕೃತಿನ ಬರ್ದ್ದೋವು.

ಸುರುಲಿ ಸುಳ್ಯದ ಕೂತ್ಕುಂಜಲಿ ಸಾವಿರದ ಒಂಬೈನೂರ ಐವತ್ತ ಮೂರರ್ಲಿ ಹುಟ್ಟಿ, ಶಿಶಿಲಲಿ ಬೆಳ್ದ್ ಅರ್ಥಶಾಸ್ತ್ರ ಪ್ರಾಧ್ಯಾಪಕರ್ ಆದ ಇವು ಆ ಇಸಯಲಿ ನೂರ ಎಂಭತ್ತೈದ್ ಕೃತಿನ ಬರ್ದ್ದ್ ಕರ್ನಾಟಕದ ಉದ್ದಗಲಕ್ಕುನೂ ಎಲ್ಲೋವ್ಕೂನೂ ಗೊತ್ತಿದ್ದೊವೇ ಆಗೊಳೊ. ಅರ್ಥಶಾಸ್ತ್ರನ ಅರ್ದ್ ಕುಡ್ದ ಮ್ಯೊಂಸ ಆಗಿ, ಇಡೀ ರಾಜ್ಯಲಿ ಸಂಚಾರ ಮಾಡಿ ಅನ್ಬವ ಪಡ್ದೋವು ಇವು. 07-07-2007ರ ದಿನ ಬೊಳ್ಳುಗೆ 7 ಗಂಟೆಗೆ, 7 ನಿಮ್ಸ, 7 ಸೆಕುಂಡಿಗೆ, 7 ಜನರ್ಂದ 7 ಅರ್ಥಶಾಸ್ತ್ರ ಕೃತಿನ ಹಾಂಗೂ 10-10-2010ರಂದ್ ಬೊಳ್ಳುಗೆ 10 ಗಂಟೆ, 10 ನಿಮ್ಸ, 10 ಸೆಕುಂಡಿಗೆ 10 ಜನರ್ಂದ 10 ಸಾಹಿತ್ಯ ಕೃತಿನ ಬುಡ್ಗಡೆಗೊಳ್ಸಿ ವಿಶ್ವದಾಕ್ಲೆ ಮಾಡ್ದೋವು ಇವು.

ಸುಳ್ಯ ರೋಟರಿ ಅಧ್ಯಕ್ಷರ್ ಆಗಿ 2006ರ್ಲಿ ದೊಡ್ಡೇರಿ ಪರಿಶಿಷ್ಟ ಜಾತಿ ವರ್ಗದ ಜನಂಗಳ್ಗೆ ಬೇಕಾಗಿ, ಜನರ ಸಾಯಂದ 23 ಲಕ್ಷ ರೂಪಾಯಿ ಕರ್ಚ್ ಮಾಡಿ, "ರೋಟರಿ-ಇನ್‌ಫೋಸಿಸ್ ತೂಗು ಸೇತುವೆ"ನ ಮಾಡ್ದೋವು. ಸುಳ್ಯ ರೋಟರಿಂದ ಆಯ್ಕೆ ಆಗಿ, ಭಾರತದ ಸಾಂಸ್ಕೃತಿಕ ಪ್ರತಿನಿಧಿ ಆಗಿ, ಫ್ರಾನ್ಸ್‌ಲಿ ಹೆಚ್ಚ್‌ನ ಅದ್ಯಯನ ಮಾಡಿ 'ಫ್ರೆಂಚ್ ಸಂಸ್ಕೃತಿಯ ಶೋಧದಲ್ಲಿ'- ಎಂಬ ಕೃತಿನ ಮತ್ತೆ ಯುರೋಪುನ 8 ದೇಸನ ಸುತ್ತಿ 'ದೇಶ ಯಾವುದಾದರೇನು?'- ಎಂಬ ದೊಡ್ಡ ಹೆಸ್ರ್ ಪಡ್ದ ಪ್ರವಾಸ ಪರ್ಸಂಗನ ಬರ್ದ್ದೋವು ಇವು. ಶೈಲಿ ಪ್ರಭಾಕರ್ ಇವರ ಹೆಣ್ಣ್, ಇವರ ಎಲ್ಲಾ ಕೆಲ್ಸ ಕಾರ್ಯಕ್ಕೆ ದನಿಗೂಡ್ಸಿದೊವು. ಪ್ರಥ್ವಿ ಮತ್ತೆ ಪ್ರತೀಕ್ಷಾ ಇಬ್ಬೊರು ಮಕ್ಕ. ಕಿರಣ ಪಾಟೀಲ ಇವರ ಅಳಿಯ.

'ಪುಂಸ್ತ್ರೀ' ಮಹಾಭಾರತದ ಹೆಚ್ಚ್‌ನ ಪಾತ್ರಗ ಗಂಡ್-ಹೆಣ್ಣ್ ಎರ್ಡ್ ಸೊಬಾವನ ತೋರ್ಸುವ ಕಾದಂಬರಿ. ಇದ್ ಯುಗಾಂತ, ಯಯಾತಿ, ಪರ್ವದಂತಾ ಕೃತಿನ ಸಾಲ್‌ಲಿ ನಿಲ್ಲ್‌ವ ಅಪ್ರೂಪದ ಕಾದಂಬರಿ. ಸಂಸ್ಕೃತ, ತೆಲುಗು, ಅರೆಬಾಸೆಗೆ ತರ್ಜಿಮೆ ಆವುಟು. ಹಿಂದಿ, ಮಲೆಯಾಳ, ಮರಾಠಿ, ಕೊಂಕಣಿ ಮತ್ತೆ ತುಳುಲಿ ತರ್ಜಿಮೆ ಆವ, ಈ ಕಾದಂಬೆರಿ ಕುವೆಂಪು ಮತ್ತೆ ಪುಟ್ಟರಾಜ ಗವಾಯಿ ಪ್ರಶಸ್ತಿ ಪಡ್ದ ಕೃತಿ ಆಗುಟ್ಟು.

'ಪುಂಸ್ತ್ರೀ' ಕಾದಂಬರಿ ಭೀಷ್ಮನ ನಾಯಕನ
ಮಾಡಿ,
ಮತ್ತೆ ಅಂಬೆನ ನಾಯಕಿತ ಮಾಡಿಟು.
ಇದ್ ಮಹಾಭಾರತನ ಸಮಾಜ ಶಾಸ್ತ್ರೀಯ
ಹಿನ್ನೆಲೆಂದ ನೋಡಕಾದ ವಿಶಿಷ್ಟ
ಕೃತಿಯಾಗುಟ್ಟು. ಭೀಷ್ಮನ ಪ್ರತಿಜ್ಞೆ ಕುರುಕುಲದ
ನಾಶಕ್ಕೆ ಕಾರಣತ್ತೇಳುವ ಅಂಶದ ಬಗ್ಗೆ ಈ
ಕಾದಂಬರಿ ಬೆಳ್ಕ್ ಚೆಲ್ಲಿದೆ. ಅಂಬೆ
ಪುರುಷಪ್ರಧಾನ
ವ್ಯವಸ್ಥೆಲಿ ಶೋಷಣೆಗೆ ಒಳಗಾಗುವ ಹತಭಾಗ್ಯೆ.
ಅವಳ ಸೋಲು ಸೋಲಲ್ಲ. ಭೀಷ್ಮನ ವಿಜಯ
ಗೆಲುವಲ್ಲ. ನಿಜವಾಗಿ ಅಂಬಾಪ್ರಕರಣ ಭೀಷ್ಮನ
ಸೋಲುತ್ತೇಳುವಂಗೆ ಡಾ. ಪ್ರಭಾಕರ ಶಿಶಿಲನವು
ತಮ್ಮ ಕೃತಿಲಿ ನಿರೂಪಿಸಿಯೊಳೊ.
ಇಂಥ ಅಮೂಲ್ಯಕೃತಿನ ಅನುವಾದ ಮಾಡ್ದ
ಶ್ರೀಮತಿ ಎಂ.ಜಿ. ಕಾವೇರಮ್ಮನವು ಈ ಕೃತಿನ
ಮೂಲ ರೂಪಕ್ಕೆ ಯಾವುದೇ ಕುಂದ್
ಆಗದಂಗೆ
ತನ್ನದೇ ಕೃತಿನೋತ್ತೇಳುವಂಗೆ ತುಂಬ
ಅಭಿಮಾನಂದ ಅನುವಾದ ಮಾಡಿಯೊಳೊ.

**ಬಾರಿಯಂಡ ಜೋಯಪ್ಪ**
ಸಂಚಾಲಕರ್, ಪುಸ್ತಕ ಪ್ರಕಟಣೆ ಸಮಿತಿ

ಬೆಲೆ ರೂ. 225